# ಮಹಾತ್ಮ ಕನಕದಾಸ
# ಪ್ರಶಸ್ತಿ



ಪ್ರಕಾಶಕರು:
ರಾಜ್ಯ ಸಮಿತಿ
ಶ್ರೀಕನಕದಾಸರ ನಾಲ್ಕನೆಯ ಶತಮಾನೋತ್ಸವ
ರವೀಂದ್ರ ಕಲಾಕ್ಷೇತ್ರ
ಶ್ರೀಜಯಚಾಮರಾಜ ಒಡೆಯರ್ ರಸ್ತೆ
ಬೆಂಗಳೂರು–೨

# ಮಹಾತ್ಮ ಕನಕದಾಸ ಪ್ರಶಸ್ತಿ



ಪ್ರಕಾಶಕರು :

ರಾ ಜ್ಯ ಸ ಮಿ ತಿ

ಶ್ರೀಕನಕದಾಸರ ನಾಲ್ಕನೆಯ ಶತಮಾನೋತ್ಸವ

ರವೀಂದ್ರ ಕಲಾಕ್ಷೇತ್ರ

ಶ್ರೀಜಯಚಾಮರಾಜ ಒಡೆಯರ್ ರಸ್ತೆ

ಬೆಂ ಗ ಳೂ ರು–೨

# Messages

Vice-President of
India,
New Delhi,
*Marcn* 19, 1965.

DEAR SHRI RAMACHANDRA,

Thank you for your letter dated the 14th March 1965.

Let me congratulate you all on the befitting manner in which the Fourth Centenary Celebrations of Sri Kanakadas will be celebrated on the 15th April 1965. The epoch-making life and the supreme self-sacrifice of Sri Kanakadas, the renowned saint, poet and philosopher of Karnataka, have been a source of inspiration and joy for his innumerable devotees and admirers.

I send my best wishes for the success of the Fourth Centenary Celebrations of Sri Kanakadas as also for the *Souvenir* to be published for commemorating this happy event.

Yours sincerely,
DR. ZAKIR HUSSAIN.

## ಕನಕದಾಸರ ನಾಲ್ಕನೆಯ ಶತಮಾನೋತ್ಸವ ಸಮಿತಿಗೆ ಬಂದ ಸಂದೇಶಗಳು

ಭಾರತದ ಉಪರಾಷ್ಟ್ರಪತಿ,
ನವದೆಹಲಿ,
ತಾ॥ ೧೯-೩-೧೯೬೫.

ಏಪ್ರಿಲ್ ೧೫ನೆಯ ತಾರೀಖಿನಂದು ಕನಕದಾಸರ ನಾಲ್ಕನೆಯ ಶತಮಾನೋತ್ಸವವನ್ನು ವಿಜೃಂಭಣೆಯಿಂದ ನಡೆಸಲಿರುವ ತಮ್ಮೆಲ್ಲರಿಗೂ ಹಾರ್ದಿಕ ಅಭಿನಂದನೆಗಳು. ಕನಕದಾಸರು ಯುಗಪ್ರವರ್ತಕರು. ಅವರು ಮಾಡಿದ ತ್ಯಾಗ ಬಹಳ ದೊಡ್ಡದು. ಕರ್ನಾಟಕದ ಈ ಮಹಾಸಂತ, ಕವಿ, ದಾರ್ಶನಿಕ ಶ್ರೀ ಕನಕದಾಸರು ತಮ್ಮನ್ನು ಭಕ್ತಿಯಿಂದ ಆರಾಧಿಸುವವರೆಲ್ಲರಿಗೂ ಹರ್ಷವನ್ನೂ ಆತ್ಮತೇಜಸ್ಸನ್ನೂ ದಯಪಾಲಿಸುತ್ತಾ ಬಂದಿದ್ದಾರೆ.

ಈ ಸಂದರ್ಭದಲ್ಲಿ ನಾನು ಈ ಚತುಶ್ಶತಮಾನೋತ್ಸವ ಜಯಪ್ರದವಾಗಿ ನಡೆಯಲೆಂದೂ ಈ ಶುಭಮುಹೂರ್ತದ ಸೆನಪು ನೆಲೆಯಾಗಿ ನಿಲ್ಲಲು ಪ್ರಕಟವಾಗುವ ಸ್ಮಾರಕ ಸಂಚಿಕೆ ಯಶಸ್ವಿಯಾಗಲೆಂದೂ ಹಾರೈಸುತ್ತೇನೆ.

ಡಾ॥ ಜಕೀರ್ ಹುಸೇನ್.

Prime Minister's Secretariat,
New Delhi,
*March 19, 1965.*

The Prime Minister is glad to learn that the 4th Centenary of Sri Kanakadasa, a saint, poet and philosopher of Karnataka, is going to be celebrated on April 15, 1965 and that a *Souvenir* is being published in that connection. He sends his good wishes on the occasion.

P. N. SAHI,
*Private Secretary to the Prime Minister.*

ಭಾರತದ ಪ್ರಧಾನ ಮಂತ್ರಿಗಳ ಕಚೇರಿ,
ನವದೆಹಲಿ,
ತಾ॥ ೧೯–೩–೧೯೬೫.

ಕರ್ನಾಟಕದ ಕವಿ–ಸಂತ–ದಾರ್ಶನಿಕರ ಪೈಕಿ ಒಬ್ಬರಾದ ಕನಕದಾಸರ ನಾಲ್ಕನೆಯ ಶತಮಾನೋತ್ಸವವನ್ನು ತಾವು ಏಪ್ರಿಲ್ ೧೫ರಂದು ನಡೆಸುವುದಾಗಿಯೂ ಮತ್ತು ಆ ಸಂದರ್ಭದಲ್ಲಿ ಒಂದು ಸ್ಮಾರಕ ಸಂಚಿಕೆಯನ್ನು ಪ್ರಕಟಿಸುವುದಾಗಿಯೂ ತಿಳಿದು ಪ್ರಧಾನಿಯವರು ತುಂಬ ಸಂತೋಷಪಟ್ಟರು.

ಈ ಸಂದರ್ಭದಲ್ಲಿ ಅವರು ತಮ್ಮ ಶುಭಾಶಯಗಳನ್ನು ತಮಗೆ ತಿಳಿಸಲು ಬಯಸುತ್ತಾರೆ.

ಪಿ. ಎನ್. ಸಾಹಿ,
ಪ್ರಧಾನ ಮಂತ್ರಿಗಳ ಆಪ್ತ ಕಾರ್ಯದರ್ಶಿಗಳು.

GOVERNMENT OF MADRAS.

'Raj Bhavan'
Madras Governor's Camp P.O.,
*March* 18, 1965.

I am happy to know that the Fourth Centenary of Sri Kanakadasa is proposed to be celebrated in a fitting manner in April, this year. I join the rest in paying homage to this great saint of Karnataka on the occasion. The life and teachings of Sri Kanakadasa are bound to be a source of inspiration to all in spiritual life.

I wish the Celebrations success.

JAYA CHAMARAJA WADIYAR.

ಮದರಾಸ್ ಸರ್ಕಾರ

'ರಾಜಭವನ',
ಮದರಾಸ್ ಗವರ್ನರ್‌ರವರ ಕ್ಯಾಂಪ್ ಪಿ.ಓ.,
ತಾ|| ೧೮-೩-೧೯೬೫.

ಈ ವರುಷ ಏಪ್ರಿಲ್ ತಿಂಗಳಿನಲ್ಲಿ ಶ್ರೀಕನಕದಾಸರ ನಾಲ್ಕನೆಯ ಶತಮಾನೋತ್ಸವ ಜರುಗುವುದಾಗಿ ತಿಳಿದು ಮನಸ್ಸಿಗೆ ಹರ್ಷವಾಯಿತು. ಈ ಸಂದರ್ಭದಲ್ಲಿ ನಾನು ಎಲ್ಲರ ಜತೆಗೂಡಿ ಶ್ರೀಕನಕದಾಸರಿಗೆ ನನ್ನ ಭಕ್ತಿಯನ್ನು ಸಲ್ಲಿಸುತ್ತೇನೆ. ಆತ್ಮಸಾಕ್ಷಾತ್ಕಾರವನ್ನು ಬಯಸುವವರೆಲ್ಲರಿಗೂ ಕನಕದಾಸರ ಉಪದೇಶಗಳು ಸ್ಫೂರ್ತಿದಾಯಕವಾಗಿವೆ.

ಉತ್ಸವ ಜಯಪ್ರದವಾಗಿ ಜರುಗಲೆಂದು ಹಾರೈಸುತ್ತೇನೆ.

ಜಯಚಾಮರಾಜ ಒಡೆಯರ್.

R. R. DIWAKAR, CAMP: Bangalore,
*Member of Parliament.* *March* 19, 1965.

Everyone must welcome this celebration of the 4th Centenary of the great saint, singer, poet and philosopher of Karnatak. He and like him many others before him and after him have proved that birth in a certain caste is no bar to the attainment of greatness. We must see that caste barriers are broken once for all.

Kanakadasa's Keerthanas, that is poems which can be sung and set to music, are simple yet profound and breathe the fresh air of spirituality in a language which is always young, homely and penetrating. Let everyone study his works and elevate his or her own life.

R. R. DIWAKAR.

ಆರ್. ಆರ್. ದಿವಾಕರ್‌ರವರು, ಕ್ಯಾಂಪ್ : ಬೆಂಗಳೂರು,
ರಾಜ್ಯಸಭಾ ಸದಸ್ಯರು. ತಾ॥ ೧೯–೩–೧೯೬೫.

ಕರ್ನಾಟಕದ ಹಿರಿಯ ದಾರ್ಶನಿಕ, ಕವಿ, ಗೀತಕಾರ, ಸಂತ ಕನಕದಾಸರ ನಾಲ್ಕನೆಯ ಶತಮಾನೋತ್ಸವವನ್ನು ಪ್ರತಿಯೊಬ್ಬನೂ ಸ್ವಾಗತಿಸಬೇಕು. ಆತನೂ ಆತನಂಥವರೂ, ಹಿಂದಿನವರೂ, ಮುಂದಿನವರೂ ಸಹ ಒಬ್ಬ ವ್ಯಕ್ತಿ ಮಹಿಮಾವಂತನಾಗುವುದಕ್ಕೆ ಆತ ಹುಟ್ಟಿದ ಜಾತಿ ಅಡ್ಡ ಬರಲಾರದೆಂಬುದನ್ನು ತೋರಿಸಿ ಕೊಟ್ಟಿದ್ದಾರೆ. ಜಾತೀಯ ಅಡಚಣೆಗಳನ್ನು ಶಾಶ್ವತವಾಗಿ ಕಿತ್ತೊಗೆಯಬೇಕು. ಅದು ನಮ್ಮ ಕರ್ತವ್ಯ.

ಕನಕದಾಸರ ಕೀರ್ತನೆಗಳು ಸ್ವರಗಳ ಜೋಡಣೆಗೆ ಅನುಕೂಲವಾಗಿ ಸರಳವಾಗಿದ್ದರೂ ಘನವಾದ ಭಾವಗಳಿಂದ ಕೂಡಿವೆ. ಅವುಗಳ ಭಾಷೆ ಮನೆಮಾತಿನಂತಿದ್ದು ಸದಾ ತಾರುಣ್ಯದಿಂದ ಶೋಭಿಸುತ್ತಾ ಮನಸ್ಸನ್ನು ತೆರೆಯುತ್ತದೆ. ಎಲ್ಲರೂ ಅವರ ಕೃತಿಗಳ ವ್ಯಾಸಂಗವನ್ನು ಮಾಡಿ ಧನ್ಯರಾಗಲಿ.

ಆರ್. ಆರ್. ದಿವಾಕರ್.

S. V. KRISHNAMOORTHY RAO,
*Deputy Speaker, Loka Sabha.*

New Delhi,
*March* 19, 1965.

I am extremely happy to hear that you are celebrating the Fourth Centenary of Sri Kanakadasa in a fitting manner in Kaginele, Udipi and Bangalore. Born in a lowly family and known as a great warrior, he renounced wealth and position and was one of the brightest jewels in Sri Vyasaraya's Dasa Kuta at Hampi, next only to Purandaradasa. It is said that when Sri Purandaradasa threw off his mortal coil, he gave his Tambura to Kanakadasa.

Kanaka Dasa was a great Tyagi, Yogi, a poet, a philosopher and a great saint. His poems breathe the highest philosophy. Sri Vyasaraya Swamy had very high regard for him. There are some very interesting incidents which show the philosophical heights to which Kanakadasa had attained. His songs, his poems 'Nala Charitre', 'Mohana Tarangini' are sung even today in thousands of homes in Karnataka. He showed the pathway to God. His poems breathe the highest philosophy and show a sense of complete dedication and devotion to God. He has shown the pathway to peace.

My regret is that I shall not be able to participate in any of these functions. I am arranging one in Delhi.

I wish the function every success.

S. V. KRISHNAMOORTHY RAO.

ಎಸ್. ವಿ. ಕೃಷ್ಣಮೂರ್ತಿರಾಯರು,
ಉಪಾಧ್ಯಕ್ಷರು, ಲೋಕಸಭೆ.

ನವದೆಹಲಿ,
ತಾ॥ ೧೯–೩–೧೯೬೫.

ತಾವು ಕನಕದಾಸರ ಶತಮಾನೋತ್ಸವವನ್ನು ಕಾಗಿನೆಲೆ, ಉಡುಪಿ ಮತ್ತು ಬೆಂಗಳೂರುಗಳಲ್ಲಿ ವಿಜೃಂಭಣೆಯಿಂದ ನಡೆಸುವುದಾಗಿ ತಿಳಿದು ಅತ್ಯಂತ ಹರ್ಷಿತನಾದೆನು. ಕನಕದಾಸರು ಉಚ್ಚ ಕುಲದಲ್ಲಿ ಜನಿಸದಿದ್ದರೂ ಪ್ರಖ್ಯಾತ ಯೋಧರಾಗಿ, ಆರ್ಜಿಸಿದ ಸಕಲ ಸಂಪತ್ತನ್ನೂ ಪದವಿಯನ್ನೂ ತೊರೆದು ಹಂಪೆಯ ವ್ಯಾಸರಾಯ ದಾಸಕೂಟದಲ್ಲಿ ಅಮೋಘ ರತ್ನವೆನಿಸಿದರು. ಅಲ್ಲಿ ಪುರಂದರದಾಸರನ್ನು ಬಿಟ್ಟರೆ ಇವರೇ ಎರಡನೆಯವರು. ಪುರಂದರದಾಸರು ತಮ್ಮ ಅವಸಾನ ಕಾಲದಲ್ಲಿ ತಮ್ಮ ತಂಬೂರಿಯನ್ನು ಕನಕದಾಸರಿಗೆ ಇತ್ತರೆಂಬ ವಾರ್ತೆ ಜನಜನಿತವಾಗಿದೆ.

ಕನಕದಾಸರ ಹಾಡುಗಳೂ, 'ನಳಚರಿತ್ರೆ' ಮತ್ತು 'ಮೋಹನತರಂಗಿಣಿ' ಇವೂ ಕರ್ನಾಟಕದ ಸಾವಿರಾರು ಮನೆಗಳಲ್ಲಿ ಈಗಲೂ ಮೊಳಗುತ್ತಿವೆ. ದೇವರೆಡೆಗೆ ದಾರಿ ತೋರಿದವರಿವರು. ಕಾರ್ಯಾವಸರದಿಂದ ಈ ಉತ್ಸವಗಳಲ್ಲಿ ಯಾವುದೊಂದರಲ್ಲೂ ಪಾಲುಗೊಳ್ಳಲಾಗದ ದೌರ್ಭಾಗ್ಯ ನನ್ನದು. ಆದರೆ ದಿಲ್ಲಿಯಲ್ಲಿ ಒಂದು ಉತ್ಸವವನ್ನು ನಡೆಸಬೇಕೆಂದಿದ್ದೇನೆ. ತಾವು ನಡೆಸುವ ಈ ಉತ್ಸವಗಳೆಲ್ಲ ತುಂಬ ಜಯಪ್ರದವಾಗಿ ನಡೆಯಲೆಂದು ಹಾರೈಸುತ್ತೇನೆ.

ಎಸ್. ವಿ. ಕೃಷ್ಣಮೂರ್ತಿರಾವ್.



ಶ್ರೀಕನಕದಾಸರ ಆರಾಧ್ಯದೇವರು ಕಾಗಿನೆಲೆ ಶ್ರೀ ಆದಿಕೇಶವಸ್ವಾಮಿ

# ಮುನ್ನುಡಿ

'ಏತಕೆನ್ನನು ಕೀರ್ತಿಸಬೇಕು ನನಗೊಂದು ।
ಸ್ವಾತಂತ್ರ್ಯಬುದ್ಧಿ ಬೇಡಿಹುದೆ?' ॥

ಎಂದು 'ಕೃತಿವೇಲ್ಡ್ ಕನಕದಾಸೋತ್ತಮು' ಕೇಳಿ ಹೋಗಿದ್ದರೂ ನಾಲ್ಕು ನೂರು ವರ್ಷಗಳು ಕಳೆದರೂ ಕೀರ್ತಿಸದೆ ಬಿಟ್ಟಿಲ್ಲ ಕನ್ನಡಿಗರವನನ್ನು. ಅವನ ನಾಲ್ಕನೆಯ ಶತಮಾನೋತ್ಸವದ ಶುಭ ಸಂದರ್ಭದಲ್ಲಿ ಕನ್ನಡಿಗರೊಡನೆ ಕನ್ನಡಿಗರಲ್ಲದವರೂ ಕನಕದಾಸರನ್ನು ಮುಕ್ತಕಂಠದಿಂದ ಕೀರ್ತಿಸಲು ಮುಂದೆ ಬಂದಿದ್ದಾರೆ. ಕನಕನ ಕೀರ್ತಿಯಿಂದು ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಹರಡತೊಡಗಿರುವುದು ಕನ್ನಡಿಗರಿಗೆಲ್ಲ ಹೆಮ್ಮೆಯ, ಹಿಗ್ಗಿನ ವಿಷಯ.

ಕನಕದಾಸರ ನಾಲ್ಕನೆಯ ಶತಮಾನೋತ್ಸವವನ್ನು ತಕ್ಕ ರೀತಿಯಲ್ಲಿ ಆಚರಿಸಲೆಂದು ಏರ್ಪಟ್ಟ ರಾಜ್ಯಮಟ್ಟದ ಶತಮಾನೋತ್ಸವ ಸಮಿತಿಯು ಕನಕದಾಸರ ಕೃತಿಗಳೆಲ್ಲವನ್ನೂ ಶುದ್ಧವಾಗಿ, ಸುಂದರವಾಗಿ ಪ್ರಕಟಿಸಲೋಸುಗ ಪ್ರಕಟನಾ ಉಪಸಮಿತಿಯೊಂದನ್ನು ನಿಯಮಿಸಿತು. ಆ ಉಪಸಮಿತಿಯು ಕನಕದಾಸರ ಕೃತಿಗಳನ್ನಲ್ಲದೆ ಕನಕದಾಸರ ಬಗ್ಗೆ ಪ್ರಶಸ್ತಿ ಗ್ರಂಥವೊಂದನ್ನೂ ಪ್ರಕಟಿಸಬೇಕೆಂದು ತೀರ್ಮಾನಿಸಿತು. ಆ ತೀರ್ಮಾನದ ಫಲವೇ ಈ ಪ್ರಶಸ್ತಿ ಗ್ರಂಥ.

ಸಮಯ ಸ್ವಲ್ಪವಿದ್ದುದರಿಂದ ಅವಸರವಸರವಾಗಿ ಪ್ರಶಸ್ತಿ ಗ್ರಂಥದ ರೂಪರೇಖೆಯನ್ನು ಸಿದ್ಧಪಡಿಸಿ ಕನಕದಾಸರ ಕೃತಿಗಳು, ಅವರ ಜೀವನ, ಅವರ ಬೋಧೆ, ಕನ್ನಡ ಸಾಹಿತ್ಯದಲ್ಲಿ ಅವರ ಸ್ಥಾನ, ಅವರು ಚಿತ್ರಿಸಿದ ಜನಜೀವನ ಇತ್ಯಾದಿ ವಿಷಯಗಳ ಬಗ್ಗೆ ವಿದ್ವತ್ಪೂರ್ಣವಾದ ಲೇಖನಗಳನ್ನು ಕಳಿಸಿ ಸಹಕರಿಸಲು ಕನ್ನಡನಾಡಿನ ಖ್ಯಾತ ಸಾಹಿತಿಗಳಿಗೆ, ಸಂಶೋಧಕರಿಗೆ, ವಿಮರ್ಶಕರಿಗೆ, ವಿದ್ವಾಂಸರಿಗೆ ಪ್ರಾರ್ಥನಾ ಪತ್ರಗಳನ್ನು ಕಳಿಸಲಾಯಿತು.

ನಮ್ಮ ಅವಸರದ ಬಿನ್ನಹವನ್ನು ಮನ್ನಿಸಿ ಈ ಗ್ರಂಥದಲ್ಲಿ ಪ್ರಕಟವಾಗಿರುವ ಬೆಲೆಯುಳ್ಳ ಬರಹಗಳನ್ನು ಕಳಿಸಿರುವ ಹಿರಿಯ ಲೇಖಕರಿಗೆ ಸಂಪಾದಕ ಸಮಿತಿಯ ಪರವಾಗಿ ಕೃತಜ್ಞತಾಪೂರ್ವಕವಾದ ಪ್ರಣಾಮಗಳನ್ನು ಸಲ್ಲಿಸುತ್ತೇವೆ. ನಿರೀಕ್ಷಿಸಿದ್ದ ಕೆಲವು ಲೇಖನಗಳು ಸಕಾಲಕ್ಕೆ ನಮ್ಮ ಕೈಸೇರಲಿಲ್ಲವಾದರೂ ಈಗ ಈ ಗ್ರಂಥದಲ್ಲಿ ಪ್ರಕಟವಾಗಿರುವ ಲೇಖನಗಳು ಕನಕದಾಸರ ಬಹುಮುಖ ವ್ಯಕ್ತಿತ್ವ-ಪ್ರತಿಭೆಗಳ ಪರಿಚಯವನ್ನು ಸಂಪೂರ್ಣವಾಗಿಯಲ್ಲದಿದ್ದರೂ ಸಮರ್ಪಕವಾಗಿ ಮಾಡಿಕೊಟ್ಟಿವೆಯೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ.

ಅದೆಷ್ಟು ಎಚ್ಚರಿಕೆವಹಿಸಿದರೂ ಅಚ್ಚಿನ ದೋಷಗಳು ಉಳಿದುಕೊಂಡಿವೆ. ಈ ಬಗ್ಗೆ ಲೇಖಕರ ಓದುಗರ ಕ್ಷಮೆಯನ್ನು ಕೋರುತ್ತೇವೆ. ಕನಕದಾಸರ ಮಾತಿನಲ್ಲಿಯೇ:

“ತಪ್ಪು ಸಾಸಿರವಿರಲು ಮುಳಿದೊಂದು ಗುಣ ಬರೆ-
ಯೊಪ್ಪಿಕೊಂಬುದು ಬಲ್ಲವರು
ತಪ್ಪು ಕಿಂಚಿತ್ತಿರೆ ಕಳೆದಿನಿದಮೃತವ
ಚಪ್ಪರಿದೀಂಟದಿರ್ದಪರೇ?”

ಎಂದು ಬಿನ್ನವಿಸಿಕೊಳ್ಳುತ್ತೇವೆ. ಕನಕದಾಸರ ಕೃತಿಗಳ ಕೂಲಂಕಷವಾದ ಅಧ್ಯಯನಕ್ಕೆ ಈ ಗ್ರಂಥ ಪ್ರಚೋದನೆಯನ್ನು ನೀಡಲೆಂದು ಹಾರೈಸುತ್ತೇವೆ.

ಬೆಂಗಳೂರು,
೬-೪-೧೯೬೫.

ಕೆ. ಎಸ್. ಧರಣೇಂದ್ರಯ್ಯ,
ಕಾರ್ಯದರ್ಶಿ,
ಶತಮಾನೋತ್ಸವ ಸಮಿತಿ.

ಸಿದ್ಧಯ್ಯ ಪುರಾಣಿಕ,
ಅಧ್ಯಕ್ಷ,
ಸಂಪಾದಕ ಸಮಿತಿ.

# ವಿಷಯಾನುಕ್ರಮಣಿಕೆ

# ಚಿತ್ರಗಳ ಅನುಕ್ರಮಣಿಕೆ

# ಕೀರ್ತನೆಗಳ ಕನಕದಾಸರು

ಶ್ರೀ ರಂ. ಶ್ರೀ. ಮುಗಳಿ

ಕನಕದಾಸರ ಕೀರ್ತನೆಗಳು ಪುರಂದರದಾಸರಷ್ಟು ಪ್ರತ್ಯಕ್ಷವಾಗಿ ಇಲ್ಲವೇ ಪ್ರತೀತಿಯಲ್ಲಿ ಹೇರಳವಾಗಿರದೆ ಇದ್ದರೂ ಭಕ್ತಕವಿಯ ಸರ್ವಪ್ರಕಾರದ ಭಾವ ಸಂಪತ್ತಿಯನ್ನು ಒಳಗೊಂಡಿರುತ್ತವೆ. ಜೊತೆಗೆ ಪುರಂದರದಾಸರಿಗಿಂತಲೂ ಹೆಚ್ಚು ಸ್ವತಂತ್ರವಾದ ವಿಮರ್ಶನ ಧೈರ್ಯವನ್ನು ಪ್ರಕಟಗೊಳಿಸಿರುತ್ತವೆ.

ಭಕ್ತಕವಿಯ ಭಾವಸಂಪತ್ತಿಯ ಮೂಲ ಉಗಮವು ಪರಮಾತ್ಮನ ಅಸ್ತಿತ್ವದ ಅನುಭಾವ ಮತ್ತು ನಿತಾಂತಶ್ರದ್ಧೆ, ಅದರಿಂದ ಪ್ರಾಪ್ತವಾಗುವ ನಿರ್ಭೀತಿ–ನಿಶ್ಶಂಕೆಗಳಲ್ಲಿ ಇರುತ್ತದೆ. ಒಂದು ದೃಷ್ಟಿಯಿಂದ ಈ ನಿರ್ಭೀತಿ–ನಿಶ್ಶಂಕೆಗಳೇ ಆಂತರಿಕ ಅನುಭಾವದ ಬಾಹ ಆವಿಷ್ಕಾರಗಳೆಂದು ಹೇಳಬಹುದು. ಒಮ್ಮೊಮ್ಮೆ ಮಾತಿನ ಮೋಸಗಾರಿಕೆಯಿಂದ ಇಂಥ ಆವಿಷ್ಕಾರಗಳನ್ನು ಅಭಿವ್ಯಕ್ತ ಗೊಳಿಸಬಹುದು. ಆದರೆ ಯಾವ ಮಾತಿನ ಹಿಂದೆ ಮೋಸವನ್ನರಿಯದ ಅನುಭಾವವು ನೆಲೆಯಾಗಿ ನಿಂತಿದೆ ಎಂಬುದನ್ನು ಮಾತರಿವರು ಅರಿತುಕೊಳ್ಳ ಬಹುದು. ಉದಾಹರಣೆಗೆ, 'ತಲ್ಲಣಿಸದಿರು ಕಂಡ್ಯ ತಾಳು ಮನವೆ ಎಲ್ಲರನು ಸಲಹುವನು **ಇದಕೆ ಸಂಶಯವಿಲ್ಲ**' ಈ ಕೀರ್ತನೆಯನ್ನು ಅವಲೋಕಿಸಬೇಕು. ಪರಮಾತ್ಮನು ಎಲ್ಲರನು ಸಲಹುವನು ಎಂಬ ವಿಷಯದಲ್ಲಿ ಕನಕದಾಸರು ಹೇಳಿದ್ದು ಏನೋ ರೂಢಿಯ ಮಾತಲ್ಲ, ಒಂದು ಸತ್ಯವಾದ ಅನುಭವ ಎಂಬುದನ್ನು ಈ ಕೀರ್ತನೆಯ ಪ್ರತಿಯೊಂದು ನುಡಿ ಎದೆಯ ಮೇಲೆ ಕೈಯಿಟ್ಟು ಸಾರುತ್ತದೆ. ಅನುಭವಕ್ಕೆ ಪೋಷಕವಾಗಿ ಕೊಟ್ಟಿರುವ ಬೆಟ್ಟದ ತುದಿಯಲ್ಲಿ ಹುಟ್ಟಿದ ವೃಕ್ಷ, ನವಿಲಿನ ಚಿತ್ರಬಣ್ಣ, ಪವಳದ ಲತೆಯ ಕೆಂಪು, ಸವಿಮಾತಿನ ಗಿಳಿಯ ಹಸುರು, ಕಲ್ಲಿನಲ್ಲಿ ಹುಟ್ಟಿ ಕೂಗುವ ಕಪೆ ಈ ನಿದರ್ಶನಗಳು ಸಮರ್ಪಕವಾಗಿ ಸಹಜರಮ್ಯ ವಾಗಿ ಬಂದಿರುತ್ತವೆ. ಇವೆಲ್ಲಾ ಹಳೆಯ ಕಾಲದ ಭಾವಿಕರ ಮನವರಿಕೆಗೆ ಸರಿ, ಇಂದಿನ ಬುದ್ಧಿವಂತನಿಗೆ ಒಪ್ಪಿತವಾಗಲಾರವು ಎಂದು ಕೆಲವರು ಹೇಳಬಹುದು. ಇಂದಿನ ಅನ್ನಾನ್ನದಸೆ, ಉಪವಾಸ ಸಾವು ಇವುಗಳನ್ನು ನೋಡಿದರೆ ದೇವರು ಸಲಹುವುದಿಲ್ಲ ಎಂಬುದಕ್ಕೇ ಸಂಶಯವಿಲ್ಲ ಎಂದು ವ್ಯಂಗ್ಯವಾಗಿ ಹೇಳು ವಂತಾಗಿದೆ. ಆದರೆ ಭಕ್ತಕವಿಯ ಮನೋಗತವನ್ನು ಸರಿಯಾಗಿ ಅರ್ಥಮಾಡಿ ಕೊಳ್ಳಬೇಕು. ನಿಸರ್ಗ ಪ್ರಕ್ರಿಯೆಯಲ್ಲಿ ಸಹಜಸಿದ್ಧವಾಗಿ ಪೋಷಕಸತ್ವವಿರು ವುದನ್ನು ನೋಡಿದರೆ ಪ್ರಾಣಿಮಾತ್ರದ ರಕ್ಷಣೆಗೆ ಪರಮಾತ್ಮನು ಏರ್ಪಡಿಸಿದ ವ್ಯವಸ್ಥೆಯೊಂದಿದೆ ಎಂಬುದರ ಅರಿವಾಗುತ್ತದೆ. ಆದರೆ ಸುಮ್ಮನೆ ತೆರೆದ ಬಾಯಲ್ಲಿ ತುತ್ತು ಬೀಳಲಾರದು. ಪ್ರಯತ್ನವು ಅವಶ್ಯವಾಗಿರುತ್ತದೆ.

ಮನುಷ್ಯನು ತನ್ನ ಪ್ರಯತ್ನಕಾರ್ಯದಲ್ಲಿ ಅತ್ಯಾಸೆ–ಅನ್ಯಾಯಗಳನ್ನು ತೋರಿ ತನ್ನ ಕಾಲ ಮೇಲೆ ತಾನು ಕಲ್ಲು ಹಾಕಿಕೊಳ್ಳುತ್ತಾನೆ, ದೇವರನ್ನು ಶಪಿಸುತ್ತಾನೆ. ತಾಯಿ ಕೊಡುವ ಸವಿಯೂಟವನ್ನು ತಮ್ಮ ಜಗಳದಲ್ಲಿ ಮಣ್ಣುಪಾಲು ಮಾಡುವ ಮಕ್ಕಳು ತಾಯಿಯನ್ನು ಬಯ್ಯುವಂತೆ ಅನೇಕರ ರೀತಿಯಾಗುತ್ತದೆ. ಅಲ್ಲದೆ 'ಎಲ್ಲರನು ಸಲಹುವನು' ಅಂದರೆ 'ಎಲ್ಲರೂ ಸೋಮಾರಿಗಳಾದರೂ ಸಲಹುವನು' ಎಂದು ಅರ್ಥವಲ್ಲ. ಒಂದೊಂದು ಸಲ ದುಡಿಯುವವರಿಗೂ ದೊರೆಯುಲಿಕ್ಕಿಲ್ಲ. ಅಂಥಲ್ಲಿ ಶಿಕ್ಷೆಯಲ್ಲಿಯೂ ರಕ್ಷೆಯನ್ನು ಪರಮಾತ್ಮನು ಇಟ್ಟಿರುವನೆಂಬ ತಿಳಿವು ಭಕ್ತನಿಗೆ ಪ್ರಾಪ್ತವಾಗಿರುತ್ತದೆ.

ಅಂತೆಯೇ ಕನಕದಾಸರು ಪರಮಾತ್ಮನಲ್ಲಿ ಪೂರ್ತಿಯಾಗಿ ನಂಬಿಕೆಯಿಟ್ಟು ಮನಃಪೂರ್ವಕವಾಗಿ ಅವನಲ್ಲಿ ಶರಣು ಹೋಗಿದ್ದಾರೆ. ಅದರಲ್ಲಿಯೇ ತಮ್ಮ ಸಾಫಲ್ಯವನ್ನು ಕಂಡಿದ್ದಾರೆ. ಈ ಸರ್ವಸಮರ್ಪಣ ಭಾವವು 'ತನು ನಿನ್ನದು ಜೀವನ ನಿನ್ನದು ರಂಗ, ಅನುದಿನದಲಿ ಬಹ ಸುಖದುಃಖ ನಿನ್ನವಯ್ಯ' ಈ ಹಾಡಿನಲ್ಲಿ ಸಹಜಸ್ಫೂರ್ತವಾಗಿ ಉಕ್ಕಿಬಂದಿದೆ. ಕಿವಿಯಿಂದ ಕೇಳುವುದೆಲ್ಲ, ನೋಡುವ ನೋಟವೆಲ್ಲ, ಪರಿಮಳವ ಲೇಪಿಸಿಕೊಂಬುದೆಲ್ಲ, ರುಚಿಗೊಳ್ಳುವ ರುಚಿಯೆಲ್ಲ—ಎಲ್ಲವೂ ನಿನ್ನದು ಎಂದು ಅವರು ನಮ್ರವಾಗಿ ಹೇಳುತ್ತಾರೆ. ಕೊನೆಗೆ 'ಮಾಯಾಪಾಶದ ಬಲೆಯೊಳು ಸಿಕ್ಕಿ ತೊಳಲುವ ಕಾಯಪಂಚೇಂದ್ರಿಯ ಗತಿ ನಿನ್ನದು, ಕಾಯಜಪಿತ ಕಾಗಿನೆಲೆಯಾದಿ ಕೇಶವರಾಯ **ನೀನಲ್ಲದೆ ನರರು ಸ್ವತಂತ್ರರೆ'** ಎಂದು ಕೇಳಿದ್ದಾರೆ. ಈ ಭಾವವೂ ಇಂದಿನ ಬುದ್ಧಿವಿಸ್ತರಿಗೆ ಅರ್ಥವಾಗುವುದು ಕಷ್ಟ. ಅರ್ಥವಾಗದೆ ಹೋದರೆ ಕನಕದಾಸರ ಇಂಥ ಕೀರ್ತನೆಗಳ ಸ್ವಾರಸ್ಯವು ಅವರಿಗೆ ತಿಳಿಯಲಾರದು ಮನುಷ್ಯನಿಗೆ ಇರುವ ಸ್ವಾತಂತ್ರ್ಯವೆಲ್ಲ ಮರ್ಯಾದಿತವಾದದ್ದು. ಅಮರ್ಯಾದವಾದ, ಸರ್ವತಂತ್ರವಾದ ಸ್ವಾತಂತ್ರ್ಯವು ಪರಮಾತ್ಮನೊಬ್ಬನಿಗೇ ಇರುತ್ತದೆ. ನರರು ಸ್ವತಂತ್ರರೇ ಅಲ್ಲ ಎಂದು ಅರ್ಥವಲ್ಲ. 'ನೀನಲ್ಲದೆ ನರರು ಸ್ವತಂತ್ರರೆ?' ಎಂಬ ಕನಕದಾಸರ ಪ್ರಶ್ನೆಯ ಅರ್ಥವೆಂದರೆ ನಿನ್ನ ಪ್ರೇರಣೆಯಿಂದಲೇ ನರರು ಸ್ವತಂತ್ರರಾಗಿರುತ್ತಾರೆ. ಈ ಸ್ವಾತಂತ್ರ್ಯವನ್ನು ಮಾಯಾಪಾಶದ ಬಲೆಯಲ್ಲಿ ಸಿಲುಕಿಕೊಳ್ಳುವುದರಲ್ಲಿ ಬಳಸಬಹುದು, ಈಶ್ವರಾರ್ಪಣ ಬುದ್ಧಿಯಿಂದ ಕರ್ಮಯೋಗ ಸಾಧನೆಯಲ್ಲಿ ಬಳಸಬಹುದು. ಎರಡಕ್ಕೂ ಅದರದರ ಫಲವಿರುತ್ತದೆ. ಎರಡನೆಯ ಸಾಧನೆಯನ್ನೇ ಕನಕದಾಸರು ಎತ್ತಿ ಹಿಡಿಯುತ್ತಾರೆ.

ಹಲವಾರು ಕೀರ್ತನೆಗಳಲ್ಲಿ ಮೇಲಿನಂತಿರುವ ಅನುಭಾವದ ಮತ್ತು ಭಕ್ತಿಯ ನಿದರ್ಶನಗಳನ್ನು ನಾವು ಕಾಣುತ್ತೇವೆ. ಉದಾಹರಣೆಗೆ, 'ಇಷ್ಟುದಿನ ಈ ವೈಕುಂಠ ಎಷ್ಟು ದೂರವೆನುತಿದ್ದೆ', 'ಹರಿಯೆ ನಿನ್ನ ಪರಮಾರ್ಥ ನಿರುತದಿಂದಲಿ ಎನಗೆ ದೊರಕಿತು', 'ಬದುಕಿದೆನು ಬದುಕಿದೆನು ಭವ ಎನಗೆ ಹಿಂಗಿತು',

'ತೊರೆದು ಜೀವಿಸಬಹುದೆ ಹರಿ ನಿನ್ನ ಚರಣವ', 'ನನ್ನಿಂದ ನಾನೇ ಜನಿಸಿ ಬಂದೆನೇ' ಎಂಬವನ್ನು ಅವಲೋಕಿಸಬೇಕು. ಇವುಗಳಲ್ಲಿ ಎಷ್ಟು ಸರಳವಾಗಿ ಮತ್ತು ಹೃದಯಸ್ಫೂರ್ತಿಯಾಗಿ ಕನಕದಾಸರು ತಮ್ಮ ಅನುಭವಗಳನ್ನು ಮೂಡಿಸಿದ್ದಾರೆ! 'ಬದುಕಿದೆನು ಬದುಕಿದೆನು ಭವ ಎನಗೆ ಹಿಂಗಿತು' ಎಂಬುದು ಪರಮಾತ್ಮನಲ್ಲಿ ಭಕ್ತಿ ಅವರಲ್ಲಿ ಉಂಟುಮಾಡಿದ ಸಂತೃಪ್ತಿಯನ್ನು ಬಣ್ಣಿಸುತ್ತದೆ. 'ಮುಕುತರಾದರು ಎನ್ನ ನೂರೊಂದು ಕುಲದವರು ಮುಕುತಿಮಾರ್ಗಕ್ಕೆ ಯೋಗ್ಯ ನಾನಾದೆನೋ, ಅಕಳಂಕ ಶ್ರೀಹರಿ ಭಕುತಿಗೆ ಮನಬೆಳೆದು ರುಕುಮಿಣಿ ಅರಸ ಕೈವಶವಾದ ಎನಗೇ, ಇಂದೆನ್ನ ಜೀವಕ್ಕೆ ಸಕಲಸಂಪದವಾಯ್ತು ಮುಂದೆನ್ನ ಜನ್ಮ ಸಫಲವಾಯಿತು, ತಂದೆ ಶ್ರೀ ಕಾಗಿನೆಲೆಯಾದಿ ಕೇಶವರಾಯ ಬಂದೆನ್ನ ಹೃದಯದಲಿ ನೆಲೆಯಾಗಿ ನಿಂತಾ॥' ಈ ನುಡಿಗಳಲ್ಲಿ ಕಾಣಲಿಕ್ಕೆ ಕಾವ್ಯವೇನೂ ಇಲ್ಲ. ಆದರೆ ನೇರವಾದ, ಶ್ರೇಷ್ಠವಾದ ಆಂತರಿಕ ಅನುಭವವೇ ಇಲ್ಲಿ ಉಕ್ಕಿ ಬಂದು ನಿರಾಭರಣ ಸುಂದರವಾದ ಕಾವ್ಯವಾಗಿದೆ. ಕನಕದಾಸರ ಕೀರ್ತನೆಗಳ ಸ್ವಾರಸ್ಯವೆಲ್ಲ ಇಂಥ ಸಾಫಲ್ಯದ ಸಹಜ ಆವಿಷ್ಕಾರದಲ್ಲಿರುತ್ತದೆ. ಸಾಮಾನ್ಯವಾಗಿ ಎಲ್ಲ ದಾಸವಾಙ್ಮಯಕ್ಕೂ ಈ ಉಕ್ತಿ ಅನ್ವಯಿಸುತ್ತದೆ.

ಕನಕದಾಸರ ಇತರ ಕೀರ್ತನೆಗಳಲ್ಲಿ ದೇವತಾಸ್ತುತಿ, ನಾಮಸ್ಮರಣೆಯ ಹಾಡುಗಳಿವೆ. ಆದರೂ ಅವು ಹೆಚ್ಚಿನ ಪ್ರಮಾಣದಲ್ಲಿಲ್ಲ. ನೀತಿ ಅಥವಾ ತತ್ತ್ವವು ಮುಖ್ಯವಾದ ಕೀರ್ತನೆಗಳು ಮಾತ್ರ ಹೇರಳವಾಗಿವೆ. ಅವುಗಳಲ್ಲಿ ಜಾನಪದ ಶೈಲಿಯನ್ನು ಹೆಚ್ಚಾಗಿ ಬಳಸಿ ಬರೆದ ಬೋಧಕವಾದ ಕೆಲವು ಕೀರ್ತನೆಗಳು ಪರಿಣಾಮಕಾರಕವಾಗಿರುತ್ತವೆ. 'ಸಾರಿದೂರಿ ಹೇಳತೀನಿ', 'ಏನು ಇಲ್ಲದ ಎರಡು ದಿನದ ಸಂಸಾರ', 'ಡಿಂಬದಲ್ಲಿರುವ ಜೀವ ಕಂಬ ಸೂತ್ರ ಗೊಂಬೆಯಂತೆ' ಈ ಮೊದಲಾದುವನ್ನು ಗಮನಿಸಬೇಕು.

'ಬೆಳ್ಳಿಬಂಗಾರಿಟ್ಟುಕೊಂಡು ಒಳ್ಳೆವಸ್ತ್ರ ಹೊದ್ದುಕೊಂಡು ಚಳ್ಳಪಿಳ್ಳಿ ಗೊಂಬೆಯಂತೆ ಆಡಿಹೋಯಿತು, ಹಳ್ಳ ಹರಿದು ಹೋಗುವಾಗ ಗುಳ್ಳೆ ಬಂದು ಬಡಿಯುವಂತೆ ಉಳ್ಳಪೊರೆಯಂತೆ ಸಂಸಾರದಾಟವು', 'ನಾಯಿಬಾಯಿ ಅರಿವೀಯಂತೆ ನಾನಾ ಕೋಟಲೆಯಲ್ಲಿ ಬಿದ್ದು', 'ಹಲವು ಜನುಮದಿ ತಾಯಿ ಎನಗಿತ್ತ ಹಾಲು ನಲಿದುಂಬಾಗ ಹನಿ ನೆಲಕೆ ಬಿದ್ದುದು ಕೂಡಿ ಆಳೆಯೆ ಕ್ಷೀರಾಂಬುಧಿಗೆ ಇಮ್ಮಿಗಿಲೊ' ಈ ಅವತರಣಗಳಲ್ಲಿ ಕನಕದಾಸರು ಪಡೆದ ಜಾನಪದ ಶೈಲಿಯ ಹಿಡಿತ ಮತ್ತು ಕಲ್ಪನೆಯ ಸ್ವತಂತ್ರ ಸೂಕ್ಷ್ಮತೆ ಇವು ಮೆಚ್ಚುವಂತಿವೆ.

ಅವರ ಹಲವಾರು ಕೀರ್ತನೆಗಳಲ್ಲಿ ಸಮಾಜ ವಿಮರ್ಶೆ ಮತ್ತು ಜನಜೀವನ ಚಿತ್ರವು ಸಾಕಷ್ಟು ಖಂಡಿತವಾದ ರೀತಿಯಲ್ಲಿ ಬಂದಿರುತ್ತದೆ. ಅಂದಿನ ಸಮಾಜದಲ್ಲಿಯ ಡಂಭಾಚಾರ, ಅನ್ಯಾಯ–ಅಸತ್ಯ ಮುಂತಾದುವನ್ನು ಅವರು ಕೆಡೆ

ನುಡಿದಿದ್ದಾರೆ. ಇತರ ದಾಸರಿಗಿಂತ ಅವರ ವಿಮರ್ಶೆ ವಿಡಂಬನೆಗಳು ಒಂದು ತೂಕ ಹೆಚ್ಚೆಂದು ಹೇಳಬಹುದು.

ಒಟ್ಟಿನಲ್ಲಿ 'ಕೀರ್ತನೆಗಳ ಕನಕದಾಸರು' ಕನ್ನಡಿಗರ ನಿತ್ಯ ಕೀರ್ತನೆಗೆ ಮತ್ತು ಗೌರವಕ್ಕೆ ಪಾತ್ರರಾಗಿದ್ದಾರೆ. ಅವರ ಕೀರ್ತನೆಗಳನ್ನು ಅರ್ಥಮಾಡಿಕೊಂಡು ಅಂತಃಕರಣದಲ್ಲಿ ಕೊರೆದಿಟ್ಟುಕೊಂಡು ಆಚರಣೆಯಲ್ಲಿ ತರುವ ಪ್ರಯತ್ನದಲ್ಲಿಯೇ ಅವರ ನಿಜವಾದ ಸ್ಮರಣೆಯಿರುತ್ತದೆ.

# ಭಕ್ತಿಮಾರ್ಗವೂ ಕನಕದಾಸರೂ

**ಶ್ರೀ ದೇಶಪಾಂಡೆ ಮನೋಹರರಾಯರು, ಎಂ.ಎ.**

## ಭಕ್ತಿಯ ಮೊಳೆ-ಬೆಳೆಗಳು

ಭಕ್ತಿಯು ಮಾನವಸಹಜ ಭಾವನೆ. ಆ ಮಾನವನಲ್ಲಿ ವಿಚಾರವು ಮೂಡಿ ಅವನು ಮಾನವನಾದಂದಿನಿಂದ, ಭಕ್ತಿಯು ಅವನಲ್ಲಿ ಕಾಣಿಸಿಕೊಂಡಿರುವದು. ಸೃಷ್ಟಿಯಲ್ಲಿಯ ರಮ್ಯವಾದ ಸೊಂಪು (Beauty) ಮಾನವನಲ್ಲಿ ಪ್ರೀತಿ, ಆಶ್ಚರ್ಯ, ಆದರಗಳನ್ನು ಹುಟ್ಟಿಸಿತು; ಅದರಲ್ಲಿಯ ಅದ್ಭುತ-ರಮ್ಯವಾದ ಚೆಲುವು (Sublimity) ಆತನ ಎದೆಯಲ್ಲಿ ಭೀತಿ, ಆಶ್ಚರ್ಯ, ಆದರಗಳನ್ನು ಹುಟ್ಟಿಸಿತು. ಬರಬರುತ್ತ ಮಾನವನಲ್ಲಿ ಸೃಷ್ಟಿಕರ್ತನ ಕಲ್ಪನೆಯು ಹೊಳೆದಂದಿನಿಂದ, ಅವನು ಆತನ ಬಗೆಗೂ ಈ ಉಭಯವಿಧ ಭಾವನೆಗಳನ್ನು ತಳೆದನು. ಈ ಪ್ರೀತಿ-ಭೀತಿಗಳೇ, ಆಶ್ಚರ್ಯ-ಆದರಗಳೇ ಭಕ್ತಿಯ ಮೂಲ ನೆಲೆಗಳು. ಇವುಗಳ ಪರಿಣತ, ಸಂಮಿಲಿತ ಸ್ವರೂಪವೇ ಭಕ್ತಿ ಎಂದು ಬಲ್ಲವರು ಉಸುರಿರುವರು.

ಭಕ್ತಿಯ ಈ ಮೂಲ ಸೆಲೆಗಳೂ, ಇವುಗಳಿಂದ ಪರಿಣತಿಯನ್ನು ಪಡೆದ ಭಕ್ತಿ ಭಾವವೂ ಆರ್ಯ ಮಾನವನ ಪ್ರಾಚೀನತಮ ವಾಙ್ಮಯವಾದ ವೇದಗಳಲ್ಲಿಯೂ ಚೆನ್ನಾಗಿ ಕಾಣಬರುವವು. ವೈದಿಕ ಋಷಿಗಳು ಭಗವಂತನನ್ನೂ, ಆತನ ಆವಿಷ್ಕಾರ ಗಳಾದ ಬೇರೆ ಬೇರೆ ದೇವತೆಗಳನ್ನೂ ಪ್ರಾರ್ಥಿಸಿರುವರು; ತಮಗೆ ಭೌತಿಕ ಸುಖ ಸಾಧನಗಳನ್ನೂ, ಪಾರಮಾರ್ಥಿಕ ಆನಂದ-ಶಾಂತಿಗಳನ್ನೂ ನೀಡಲು ಬೇಡಿ ಕೊಂಡಿರುವರು. ಅವರ ಭಾವಪೂರ್ಣ ಪ್ರಾರ್ಥನೆಗಳಲ್ಲಿ ಮೇಲ್ಕಾಣಿಸಿದ ಭಾವನೆ ಗಳೆಲ್ಲಾ ಉತ್ಕಟವಾಗಿ ನೆಲಸಿರುವವು. ಮುಂದೆ ಶ್ರೀ ಗುರುದೇವ ರಾನಡೆಯವರು ಉಸುರಿದ ಮೇರೆಗೆ:—

"The spring of devotional endeavour, which we see issuing out of the mountainous regions of the Vedas......hides itself in the woodlands of the Upanishads, until in the days of the Bhagavad-gita, it issues out again and appears to vision in a clear fashion with only a new stress on the old beliefs. The mystical strain which is to be found in the Upanishads, is to be found even here, in Vasudavism, with greater emphasis on devotion"*

"ವೇದಗಳ ಸಾನು ಪ್ರದೇಶದಿಂದ ಹೊರಹೊರಟ ಭಕ್ತಿಯ ಸೆಲೆಯು.... ಉಪನಿಷತ್ತುಗಳ ದಾರ್ಶನಿಕ ಅರಣ್ಯದಲ್ಲಿ ಅಡಗಿಕೊಂಡಿರುವದು. ಮುಂದೆ

---

* *Mysticism in Maharashtra*, p. 3.

ಭಗವದ್ಗೀತೆಯ ಕಾಲದಲ್ಲಿ ಅದು ಮರಳಿ ಹೊರಬಂದು ಸ್ಪಷ್ಟವಾದ ರೀತಿಯಲ್ಲಿ ಕಾಣಿಸಿಕೊಳ್ಳುವದು. ಅದರಲ್ಲಿ ಹಳೆಯ ನಂಬಿಕೆಗಳು ಹೊಸ ರೂಪವನ್ನು ತಳೆದಿರುವವು. ಉಪನಿಷತ್ತುಗಳಲ್ಲಿ ಕಾಣಬರುವ ಅನುಭಾವದ ಪ್ರವೃತ್ತಿಯು ಶ್ರೀ ವಾಸುದೇವಪಂಥದಲ್ಲಿಯೂ ಕಾಣಬರುವದು. ಆದರೆ ಇದರಲ್ಲಿ ಭಕ್ತಿಗೆ ಪ್ರಾಧಾನ್ಯ ಬಂದಿರುವದಷ್ಟೇ!''

ವೇದಗಳಿಂದ ಉಪನಿಷತ್ತುಗಳೆಡೆ ಸಾರಿದೆವೆಂದರೆ, ನಾವು ಪ್ರಾರ್ಥನೆಗಳಿಂದ ದರ್ಶನಗಳೆಡೆ ಸಾಗುವೆವು; ಭಾವನೆಗಳಿಂದ ವಿಚಾರಗಳೆಡೆ ತೆರಳುವೆವು. ಆದರೂ ಅಲ್ಲಿ ಕೂಡ ಗುಪ್ತಗಾಮಿನಿಯಾಗಿ ಹರಿಯುವ ಭಕ್ತಿಯ ಸೆಲೆಗಳು ಅಲ್ಲಲ್ಲಿ ಕಾಣಿಸಿಕೊಳ್ಳದಿರವು:

**ಅಸತೋ ಮಾ ಸದ್ಗಮಯ । ತಮಸೋ ಮಾ ಜ್ಯೋತಿರ್ಗಮಯ ।**
**ಮೃತ್ಯೋರ್ಮಾ ಅಮೃತಂ ಗಮಯ ॥**

**ಅಸತಿನಿಂದ ಸತ್ಯದೆಡೆಗೆ । ಕತ್ತಲೆಯಿಂ ಜ್ಯೋತಿಯೆಡೆಗೆ ।**
**ಮರಣದಿಂದ ಅಮರ ಬಾಳಿನೆಡೆಗೆ ನಡೆಯಿಸೈ ॥**

ಎಂಬಂಥ ಪ್ರಾರ್ಥನೆಗಳಲ್ಲಿ ಭಕ್ತಿಭಾವವು ತುಂಬಾ ನೆಲೆಸಿರುವದುಂಟು. ಇಷ್ಟೇ ಅಲ್ಲ. 'ಭಕ್ತಿ' ಎಂಬ ಶಬ್ದವೂ ಕೂಡ ಶ್ವೇತಾಶ್ವತರ ಉಪನಿಷತ್ತಿನಲ್ಲಿಯ ಮುಂದಿನ ಶ್ಲೋಕದಲ್ಲಿ ಮೊದಲನೆಯ ಸಲ ಬಂದಿರುವದು:

**ಯಸ್ಯ ದೇವೇ ಪರಾಭಕ್ತಿಃ । ಯಥಾ ದೇವೇ ತಥಾ ಗುರೌ ।**
**ತಸ್ಯೈತೇ ಕಥಿತಾಹ್ಯರ್ಥಾಃ । ಪ್ರಕಾಶಂತೇ ಮಹಾತ್ಮನಃ ॥** (VI-23)

"ಯಾವನು ಗುರುವಿನಲ್ಲಿಯೂ ದೇವರಲ್ಲಿಯೂ ಭಕ್ತಿಯುಳ್ಳವನಿರುವನೋ ಅವನಿಗೆ ಶ್ರೀ ಪಾರಮಾರ್ಥಿಕ ರಹಸ್ಯವನ್ನು ಅರುಹಿದರೆ, ಅದು ಆ ಮಹಾತ್ಮನಲ್ಲಿ ಹೊಳೆಯುವದು.''

ಶ್ರೀ ಭಗವದ್ಗೀತೆಯಲ್ಲಿ ಚೆನ್ನಾಗಿ ಮೈದಳೆದು, ಈ ಭಕ್ತಿಗಂಗೆಯು ಮುಂದೆ ಮಧ್ಯಯುಗದಲ್ಲಿ ತುಂಬ ವಿಶಾಲತೆಯನ್ನು ಪಡೆದು, ಭಾರತದಲ್ಲಿಯ ಎಲ್ಲ ಪ್ರಾಂತಗಳಲ್ಲಿ ಅಲ್ಲಲ್ಲಿಯ ಅನುಭಾವಿ ಸಂತರ ಮುಖಾಂತರ ಸಲೀಲವಾಗಿ ಹರಿದು ಜನಜೀವನವನ್ನು ಪಾವನಗೊಳಿಸಿರುವಳು. ಅಂದಿನ ಸಂತರು, ಶರಣರು, ದಾಸರು ಜನಸಾಮಾನ್ಯರೊಡನೆ ಬೆರೆತು, ತಮ್ಮ ಅನುಭಾವದ ಪ್ರಭಾವದಿಂದ ಸ್ತ್ರೀಯರಲ್ಲಿ, ಶೂದ್ರರಲ್ಲಿ, ಪಾತಕಿಗಳಲ್ಲಿ ಕೂಡ ಭಗವಂತನನ್ನು ಕಾಣುವ ಹಂಬಲವನ್ನು ಮೊಳೆಸಿದರು, ಬೆಳೆಸಿದರು. ಅವರವರ ಮಾತಿನಲ್ಲಿ ಅವರಿಗೆ ಬೋಧೆಯನ್ನು ಮಾಡಿ, ಅವರನ್ನು ಉದ್ಧರಿಸಿದರು. ಈ ಸಂತ ಮಹಂತರಿಂದ ಭಕ್ತಿಯು ಜನಜೀವನವನ್ನು ಸೇರಿತು. ಜನಸಾಮಾನ್ಯರಲ್ಲಿ ಪಸರಿಸಿತು.

ಆರ್ಯರ ಈ ಭಕ್ತಿ ಪ್ರವಾಹವು ಉತ್ತರದಿಂದ ಕೆಳಗಿಳಿದು ಜನತೆಯಲ್ಲಿ ಹಬ್ಬಿದಂತೆ ಭಕ್ತಿಯ ಇನ್ನೊಂದು ಪ್ರವಾಹವು ದಕ್ಷಿಣದ ದ್ರವಿಡರಿಂದ ಹೊರ ಹೊಮ್ಮಿ ಮೇಲಕ್ಕೆ ಹರಿದು, ಮೇಲ್ಕಾಣಿಸಿದ ಪ್ರವಾಹದಲ್ಲಿ ಕೂಡಿಕೊಂಡಿತು. ಅದು ಮೊಳೆತುದು ತಮಿಳ ನಾಡಿನ ಶೈವ–ವೈಷ್ಣವ ಸಂತರ ಹದಯದಲ್ಲಿ, ಹೊರಹೊಮ್ಮಿದುದು ಅವರ ಹೃದಯದಿಂದ. ಅದು ದಕ್ಷಿಣ ಭಾರತದಲ್ಲಿ ಚೆನ್ನಾಗಿ ಪಸರಿಸಿ, ಜನಜೀವನವನ್ನು ಉನ್ನತಗೊಳಿಸಿತು. "ತಮಿಳ ದೇಶದಲ್ಲಿ ನಾಯ್ನಾರರು–ಆಳ್ವಾರರು, ಕರ್ನಾಟಕದಲ್ಲಿ ಶರಣರು–ದಾಸರು, ಶಿವ–ವಿಷ್ಣು ಪಾರಮ್ಯದ ಚರಿತ್ರೆಯನ್ನು ಇತಿಹಾಸ ಕಾಲದಲ್ಲಿಯೂ ಬೆಳಗಿದ್ದಾರೆ. ಭಕ್ತಿ ಪಂಥಕ್ಕೆ ಮೂಲಗ್ರಂಥವಾದ ಭಾಗವತ ಪುರಾಣವು....ದಕ್ಷಿಣ ದೇಶದ ಚರಿತ್ರೆಯನ್ನು ಒಳಗೊಂಡಿರುವದು ಎಂದು ಸಂಶೋಧಕರು ಸೂಚಿಸಿರುವರು. ಅಂತೂ ಕರ್ನಾಟಕಕ್ಕೂ, ಹರಿಹರ ಭಕ್ತಿ ಸಂಪ್ರದಾಯಕ್ಕೂ ಅತಿ ಪುರಾತನವಾದ ಸಂಬಂಧವಿದೆ".* ಆದುದರಿಂದಲೇ "ಉತ್ಪನ್ನಾ ದ್ರಾವಿಡೇ ಚಾಹಂ ವೃದ್ಧಿಂ ಕರ್ಣಾಟಕೇ ಗತಾ।" ಎಂದು ಭಕ್ತಿಯು ಭಾಗವತ ಮಹಾತ್ಮ್ಯೆಯಲ್ಲಿ ಅರುಹಿದುದು ತುಂಬ ಉಚಿತವಾದುದು. "ಕರ್ನಾಟಕದಲ್ಲಿ ಐತಿಹಾಸಿಕ ಕಾಲದ ಮಟ್ಟಿಗೆ ಮಾತನಾಡುವದಾದರೆ, ಹನ್ನೆರಡನೆಯ ಶತಮಾನದವರೆಗೂ, ಹರಿಹರರಲ್ಲಿ ಭೇದವೆಣಿಸದ ಭಾಗವತ ಪಂಥವೇ ರೂಢಿಯಲ್ಲಿತ್ತು ಎನ್ನಬಹುದು. ಪಂಢರಪುರದ ವಿಠ್ಠಲನೂ, ತಿರುಪತಿಯ ವೆಂಕಟರಮಣನೂ, ಹರಿಹರ ಸಾಮರಸ್ಯದ ಮೂರ್ತಿಗಳೆಂದೇ ಮೂರ್ತಿಶಿಲ್ಪಶಾಸ್ತ್ರವು ಹೇಳುವದು. ಹನ್ನೆರಡನೆಯ ಶತಮಾನದ ವೀರಶೈವ ಉತ್ಥಾಪನೆಯಿಂದಲೇ, ವಿಷ್ಣುವೇ ಶ್ರೇಷ್ಠವೆಂಬುವ ಮಾಧ್ವಮತವೂ ಅದರಿಂದ ಬಂದ ಹರಿದಾಸ ಸಂಪ್ರದಾಯವೂ ಪ್ರಾಬಲ್ಯಕ್ಕೆ ಬಂದವು."†

ಈ ಬಗೆಯಾಗಿ ಭಕ್ತಿಯು ಬೆಳೆದು ಅದೊಂದು ಭಗವಂತನನ್ನು ಪಡೆಯುವ ಹಿರಿದಾದ ಸಾಧನವಾಗಿ, ಅದನ್ನು ಭಕ್ತರನೇಕರು ಬಳಸಿ, ಭಗವಂತನನ್ನು ಸಾಕ್ಷಾತ್ಕರಿಸಿಕೊಂಡರು, ಭಗವದಾನಂದವನ್ನು ಉಂಡರು–ಉಣಿಸಿದರು. ಅದರ ಫಲವಾಗಿ ಅದೊಂದು ಪಂಥವಾಯಿತು—ಮಾರ್ಗವಾಯಿತು.

## ಭಕ್ತಿಯ ತಿರುಳು—ಬಗೆಗಳು

ಭಗವಂತನಲ್ಲಿಯ ಪರಮಪ್ರೀತಿಯು–ಉತ್ಕಟ ಪ್ರೇಮವು–ಭಕ್ತಿಯ ತಿರುಳು. ಅದನ್ನು "ಪರಾನುರಕ್ತಿರೀಶ್ವರೇ" ಎಂದು ಬಣ್ಣಿಸಿದರು ಹಿರಿಯರೊಬ್ಬರು. "ಸಾ ತ್ವಸ್ಮಿನ್ ಪರಮ ಪ್ರೇಮರೂಪಾ" ಎಂದು ಕರೆದರು ಇನ್ನೊಬ್ಬರು. "ಸುದೃಢಃ ಸ್ನೇಹಃ" ಎಂದು ಸಂಬೋಧಿಸಿದರು ಮೂರನೆಯವರು. ಅದೇ

* ಸಾಹಿತ್ಯ ಸಂಶೋಧನೆ, ಪು. ೧೫೭–೧೫೮.

† ಸಾಹಿತ್ಯ ಸಂಶೋಧನೆ, ಪು. ೧೫೮.

ಮುಂದೆ "ಸ್ವಸ್ವರೂಪಾನುಸಂಧಾನ"ವಾಯಿತು; "ಅನನ್ಯತೆ"ಯ ರೂಪವನ್ನು ತಳೆಯಿತು; "ಅಮೃತರೂಪ" ವಾಯಿತು; "ಶಾಂತಿರೂಪ" ವಾಯಿತು; "ಪರಮಾನಂದರೂಪ" ವಾಯಿತು. ಭಕ್ತಿಭಾವವು ಬೆಳೆದು ಉತ್ಕಟವಾಯಿತೆಂದರೆ ಭಕ್ತನು ಭಗವಂತನಲ್ಲಿ 'ಅನನ್ಯ'ನಾಗುವ; ಆತನಿಂದ 'ಶಾಂತಿ'ಯನ್ನೂ 'ಪರಮಾನಂದ'ವನ್ನೂ ಪಡೆಯುವ; ಈ 'ಅಮೃತ'ವನ್ನುಂಡು ಅಮರನಾಗುವ. ಆಗ ಭಕ್ತಿಯು ತನ್ನ ಉನ್ನತತಮ ನೆಲೆಯನ್ನು ತಲುಪುವದು.

ಭಕ್ತಿಪರನಾದ ಪ್ರಹ್ಲಾದನು ಭಕ್ತಿಯ ಮುಂದಿನ ಒಂಬತ್ತು ಬಗೆಗಳನ್ನು ಅರುಹಿರುವ:

ಶ್ರವಣಂ ಕೀರ್ತನಂ ವಿಷ್ಣೋಃ । ಸ್ಮರಣಂ ಪಾದಸೇವನಮ್ ।
ಅರ್ಚನಂ ವಂದನಂ ದಾಸ್ಯಂ । ಸಖ್ಯಂ ಆತ್ಮನಿವೇದನಮ್ ॥

ಇವುಗಳಲ್ಲಿ ಭಕ್ತಿಯು ವ್ಯಕ್ತವಾಗುವ ಸುಮಾರು ಎಲ್ಲ ಬಗೆಗಳೂ ಅಡಕವಾಗಿರುವವು. ಭಗವಂತನ ಅನಂತ ಗುಣಮಹಿಮೆಯನ್ನು ಕೇಳುವದು 'ಶ್ರವಣ', ಅವನ್ನು ಹೇಳುವದು–ಹೊಗಳುವದು 'ಕೀರ್ತನ'; ಅವನ ನಾಮ, ರೂಪ, ಗುಣಗಳನ್ನು—ವಿಶೇಷವಾಗಿ ಅವನ ದಿವ್ಯ ನಾಮವನ್ನು—ನೆನೆಯುವದು 'ಸ್ಮರಣ'. ಅರ್ಚನ, ವಂದನ, ಪಾದಸೇವನಾದಿ ವಿಧಿಗಳಿಂದ ಭಗವಂತನ ಸೇವೆಯನ್ನು ಮಾಡುವದು 'ದಾಸ್ಯ'. ಭಗವಂತನು ತನ್ನ ತಂದೆ–ತಾಯಿ, ಆತನೇ ತನ್ನ ಪ್ರಾಣವೆಂದು ಬಗೆದು, ಆತನ ಬಯಕೆಯಂತೆ ನಡೆಯುವದು 'ಸಖ್ಯ'; ಅವನಿಗೆ ಎಲ್ಲವನ್ನೂ ಅರ್ಪಿಸಿ, ಆತನಲ್ಲಿ ಸಮರಸನಾಗುವದು 'ಆತ್ಮನಿವೇದನ'. ಈ ರೀತಿ, ಈ ಒಂಬತ್ತು ಬಗೆಗಳಲ್ಲಿ ಮೇಲ್ಕಾಣಿಸಿದ ಆರು ಬಗೆಗಳು ಪ್ರಧಾನವಾದವುಗಳು ಎನ್ನಬಹುದು.

ಇಂಥ ಭಕ್ತಿಯೇ ಉಪನಿಷತ್ತಿನ 'ಉಪಾಸನೆ', ನಾರದರ 'ಅನನ್ಯತೆ', ಶಂಕರರ 'ಅನುಸಂಧಾನ', ರಾಮಾನುಜರ 'ಪ್ರಪನ್ನತೆ', 'ಆನಂದತೀರ್ಥರ 'ಸುಪ್ರತಿಷ್ಠಿತ ಸ್ನೇಹ', ಶರಣರ 'ಸಾಮರಸ್ಯ', ದಾಸವರರ 'ದಾಸ್ಯ', ಸಂತರ 'ಸಖ್ಯ', 'ಶರಣಾಗತಿ' ಎಂಬ ರೂಪನಾಮಗಳಿಂದ ಮೆರೆದಿರುವದು. ಭಾವ ಒಂದು ಬಗೆ, ಹೆಸರುಗಳು ನೂರೊಂದು. ಈ ಬಗೆಯಾಗಿ, ಒಂದೇ ಭಕ್ತಿಯು ನೂರೊಂದು ಮೈದಳೆದು, ನಾಮ ತಳೆದು, ಅಂದಿನಿಂದ ಇಂದಿನವರೆಗೆ ಲೋಕದಲ್ಲಿ ಹೊಳೆದಿರುವದು, ಜನಜೀವನವ ಬೆಳಗಿರುವದು.

## ಕನಕದಾಸರ ಭಕ್ತಿ

ಇವುಗಳಲ್ಲಿ ಕನಕದಾಸರ ಭಕ್ತಿಯು ಅದೆಂತಹದು? ಅವರ ಮೇಲೆ ಅದಾರ ಪ್ರಭಾವವು ಅದೆಷ್ಟು ಬಿದ್ದಿರುವದು? ಎಂಬುದನ್ನು ಇನ್ನು ಅರಿತುಕೊಳ್ಳುವಾ. "ಕನಕದಾಸರು ಮುಖ್ಯವಾಗಿ ಭಾಗವತ, ಹರಿಭಕ್ತಿಯ ಮತ್ತು ಸರ್ವಾರ್ಪಣದ

ಪ್ರತಿಪಾದಕರು. ಮಾಧ್ವ–ರಾಮಾನುಜ ಇವುಗಳ ಮತಸಾರವನ್ನು ಒಪ್ಪಿಯೂ, ತಿರುತಿರುಗಿ ಯಾವುದೊಂದರ ನಿರ್ದಿಷ್ಟ ಪ್ರಚಾರವನ್ನು ಮಾಡುವ ಗೊಡವೆಗೆ ಅವರು ಹೋಗಿಲ್ಲ.'' ''ಅವರು ಕಾಲ ದೇಶ, ಮತ ತತ್ವ ಇವುಗಳನ್ನು ಮೀರಿದ ದೇವ–ಜೀವಿಗಳು, ಸರ್ವ ಸಮದರ್ಶಿಗಳು''.* ''ಅವರು ಬೆಳೆದಂತೆ ಎಲ್ಲ ಮೇಲಾದ ಸಂಸ್ಕಾರಗಳಿಗೆ ಒಳಗಾಗಿ, ಭಾಗವತ ದೃಷ್ಟಿಯನ್ನು ಬೆಳಿಸಿಕೊಂಡರು ....ಎಲ್ಲ ಮತದ ಸಾರಗ್ರಾಹಿಯಾದ ಪರಮ ಭಕ್ತರಾಗಿದ್ದರು.''†

ಹರಿಹರರಲ್ಲಿ ಭೇದವನ್ನು ಎಣಿಸದಿರುವದು ಭಾಗವತ ಮನೋಧರ್ಮ. ''ಶಿವಸ್ಯ ಹೃದಯೇ ವಿಷ್ಣುಃ। ವಿಷ್ಣೋಶ್ಚ ಹೃದಯೇ ಶಿವಃ॥'' ಎಂಬುದು ಅವರ ಭಾವನೆ. ಸಾರಗ್ರಾಹಿಗಳಾದ ಕನಕದಾಸರಲ್ಲಿ ಇದು ಸಹಜವಾಗಿ ಬೆಳೆದು ಬಂದಿತ್ತು. ಅದು ಅವರ 'ಹರಿಭಕ್ತಿಸಾರ'ದಲ್ಲಿಯ 'ಶಿವಶಿವಾ' 'ಹರಹರ' 'ಹರ ಮಹಾದೇವಾ!' ಎಂಬ ಉದ್ಗಾರಗಳಲ್ಲಿಯೂ, 'ಶರಣ' 'ಭಾಗವತರು' ಎಂಬ ಉಲ್ಲೇಖಗಳಲ್ಲಿಯೂ, ವಿಶೇಷವಾಗಿ ಅವರ 'ಆರು ಬಲ್ಲರು ಹರಿಹರಾದಿಗಳ ಮಹಿಮೆಯನು'' (೧೬೨) ಎಂಬ ಪದದಲ್ಲಿಯೂ ಚೆನ್ನಾಗಿ ಕಾಣಬರುವದು. ಈ ಪದದಲ್ಲಿ 'ಈಶ' ವಿಷ್ಣುವಿನಿಂದ 'ನಾರಾಯಣಾಸ್ತ್ರ'ವನ್ನು ಪಡೆದ ಮತ್ತು 'ಶೌರಿ' ಶಿವನಿಂದ 'ಚಾರುಚಕ್ರ'ವನ್ನು ಪಡೆದ; ಇಬ್ಬರೂ ತಮ್ಮ ತಮ್ಮ ಭಕ್ತರ ಬಾಗಿಲ ಕಾಯ್ದರು. ಒಬ್ಬರು 'ಭೋಗಿಶಯನ'ರಾದರೆ ಇನ್ನೊಬ್ಬರು 'ಭೋಗಿಭೂಷಣರು' ಎಂಬುದಾಗಿ ಇಬ್ಬರ ಮಹಿಮೆಯನ್ನೂ ಅವರು ಸಮನಾಗಿ ಬಣ್ಣಿಸಿರುವರು. ಇಷ್ಟೇ ಅಲ್ಲ. ಅವರು 'ನಾಗಶಯನನ ಮೂರ್ತಿಯ ಕಂಡರು; ಭೋಗಿಭೂಷಣ ಶಿವನ ಕಂಡರು' (೩೧). ಅವರ ದೇವರು ಅನುಭಾವಿಗಳ 'ಅಂತರ್ಯಾಮಿ' 'ಚಿನ್ಮಯ' 'ಪರಮ ಜ್ಯೋತಿ' 'ಪರಾತ್ಪರ ವಸ್ತು' 'ಪರಮಾತ್ಮ' 'ನಾದಬ್ರಹ್ಮ' 'ಸಚ್ಚಿದಾನಂದ'ನು. ಅವರು 'ಓಂಕಾರ ಬೀಜಾಕ್ಷರವನ್ನು ಚಿತ್ತದಲ್ಲಿ ಗ್ರಹಿಸಿ, ಒಳಗಿಹ ಹಂಸನ ಸೇರಿ, ಲೇಸನುಂಡು ಮುಕ್ತರಾದರು, ಶಕ್ತರಾದರು'. ಅಂತೆ (೧೭೪) ಈ ರೀತಿ ದಾಸರ ಬುದ್ಧಿ, ಭಾವ, ಅನುಭಾವಗಳು ಮತೀಯತೆಯನ್ನು ಮೀರಿ, ವಿಶಾಲತೆಯನ್ನು ಪಡೆದಿದ್ದವು.

ನಿಜವಾಗಿ, 'ಹಿರಿಯ ಅನುಭಾವಿಗಳು ಶೈವರೂ ಇರುವದಿಲ್ಲ, ವೈಷ್ಣವರೂ ಇರುವದಿಲ್ಲ,'‡ ಎಂದು ಗುರುದೇವ ರಾನಡೆಯವರು ಉಸುರಿರುವರು. ಅವರು ತಮ್ಮ ಪಾರಮಾರ್ಥಿಕ ಜೀವನವನ್ನು ಶೈವರಾಗಿ ಇಲ್ಲವೆ ವೈಷ್ಣವರಾಗಿ ಪ್ರಾರಂಭಿಸಿರಬಹುದು. ಆದರೆ ಸರಿಯಾದ ಸಾಧನದಿಂದ ಅವರು ಭಗವಂತನನ್ನು

---

* ಕನ್ನಡ ಸಾಹಿತ್ಯ ಚರಿತ್ರೆ, ಪು. ೨೪೯.

† ಕನ್ನಡ ಸಾಹಿತ್ಯ ಚರಿತ್ರೆ, ಪು. ೨೯೧.

‡ *Pathway to God in Kannada Literature*, p. 6.

ಚೆನ್ನಾಗಿ ಸಾಕ್ಷಾತ್ಕರಿಸಿಕೊಂಡ ತರುವಾಯ ಅವರು ಮತಾತೀತ ವಿಶಾಲತೆಯನ್ನು ತಳೆಯುವರು. ಇದಕ್ಕೆ ಅನಂತ ನಿದರ್ಶನಗಳನ್ನು ಕೊಡಬಹುದು: ಪ್ರಭುದೇವ, ಸರ್ವಜ್ಞ, ಷಡಕ್ಷರಿಯವರಂಥ ಹಿರಿಯ ಶರಣರೂ, ಪುರಂದರ, ಮಹೀಪತಿ, ಕನಕದಾಸರಂಥ ಹಿರಿಯ ದಾಸರೂ, ಜ್ಞಾನೇಶ್ವರ, ತುಕಾರಾಮ, ಕಬೀರರಂಥ ಹಿರಿಯ ಸಂತರೂ, ಇಂಥ ವಿಶಾಲವಾದ ಭಾಗವತ ಮನೋಭಾವವನ್ನೇ ತಳೆದಿದ್ದರು ಎಂಬುದು ಅವರ ಸಾಹಿತ್ಯದಲ್ಲಿ ಕಾಣಬರುವದು. ಅವರೆಲ್ಲ ಸಾಕ್ಷಾತ್ಕರಿಸಿಕೊಂಡುದು, "ಕಾಂತಿಸಾಗರನಾದ, ನಾದಸಾಗರನಾದ, ಅಮೃತ ಸಾಗರನಾದ, ಜ್ಞಾನ ಬಲ ಕಾರುಣ್ಯಸಾಗರನಾದ, ಶಾಂತಿ ಸಾಗರನಾದ" ಪರಮಾತ್ಮನನ್ನು. ಅದರ ಫಲವಾಗಿಯೇ ಅವರಿಗೆಲ್ಲ ಇಷ್ಟೊಂದು ವಿಶಾಲತೆಯು ಲಭಿಸಿದುದು. ಇಷ್ಟೇ ಅಲ್ಲ. ಇಂಥ ವಿಶಾಲತೆಯೇ ನಿಜವಾದ ಮೇಲ್ತರಗತಿಯ ಅನುಭಾವದ ಹಿರಿಕುರುಹು.

ಕನಕದಾಸರದು ಆರ್ತಭಕ್ತಿ, ದಾಸ್ಯಭಕ್ತಿ, ಆರ್ಪಣಭಕ್ತಿ. ಅದು ಅವರಲ್ಲಿ ಹೇಗೆ ಮೊಳೆಯಿತು? ಹೇಗೆ ಬೆಳೆಯಿತು? ಮುಂದದು ಅವರಿಗೆ ಭಗವಂತನ ಅನುಭಾವ ಆನಂದಗಳನ್ನು ಹೇಗೆ ನೀಡಿತು? ಎಂಬುದನ್ನು ಅವರ 'ಕೀರ್ತನೆಗಳ' ಹಾಗೂ 'ಹರಿಭಕ್ತಿಸಾರ'ದ ನೆರವಿನಿಂದ ಕಿರಿದರಲ್ಲಿ ಕಾಣಿಸಲು ಯತ್ನಿಸಲಾಗಿದೆ. ಅವರ ಉಪಲಬ್ಧ ಪಾರಮಾರ್ಥಿಕ ಸಾಹಿತ್ಯವು ಅತ್ಯಲ್ಪವಿರುವ ಮೂಲಕ, ಎಲ್ಲ ವಿವರಗಳನ್ನೂ ಅರುಹುವದು ಸಾಧ್ಯವಿಲ್ಲ.

## ಜೀವನ ಕ್ರಾಂತಿ

ಕನಕದಾಸರಲ್ಲಿ ಕೆಲ ಅಲೌಕಿಕ ಶಕ್ತಿಗಳಿದವೆಂದೂ ಪರಂಪರೆಯು ಸಾರುತ್ತಿದೆ. ಭೂಮಿಗತ ದ್ರವ್ಯವನ್ನು ಕಾಣುವ ಸಾಮರ್ಥ್ಯವು ಅವರಲ್ಲಿದ್ದಂತೆ, ಅವರು ಕೆಲ ದಿವ್ಯ ಕನಸುಗಳನ್ನೂ ಕಾಣುತ್ತಿದ್ದರಂತೆ. ಅವುಗಳಲ್ಲಿ ಅವರಿಗೆ ತಿರುಪತಿಯ ದರುಶನವಾಗಿ, ಆತನು ಅವರಿಗೆ ತನ್ನ ದಾಸನಾಗಲು ಸೂಚಿಸುತ್ತಿದ್ದನಂತೆ. ಆದರೆ ರಾಜಸವೃತ್ತಿಯ ಕನಕನಾಯಕನಿಗೆ ಅದು ಸೇರುತ್ತಿರಲಿಲ್ಲ. ಆದುದರಿಂದ ಮುಂದವನಿಗೆ ಆಕಸ್ಮಿತವಾಗಿ ಒಂದು ದೊಡ್ಡ ಏಟು ದೊರೆಯಿತು. ಅವನು ಒಂದು ಕಾಳಗದಲ್ಲಿ ಶೌರ್ಯದಿಂದ ಕಾದುತ್ತಿರುವಾಗ, ಅವನಿಗೆ ಶತ್ರುಗಳ ಶಸ್ತ್ರಗಳಿಂದ ಭೀಕರ ಆಘಾತವಾಗಿ, ಅವನು ಮೂರ್ಛೆಹೊಂದಿ ರಣಾಂಗಣದಲ್ಲಿ ಬಿದ್ದನಂತೆ. ಆಗ ಅವನ ಸೈನಿಕರೆಲ್ಲ ದಿಕ್ಕಾಪಾಲಾಗಿ ಓಡಿಹೋದರು. ಆಗ ಮೂರ್ಛಿತನಾಗಿ ಬಿದ್ದ ಕನಕನಾಯಕನನ್ನು ಒಂದು ಅಜ್ಞಾತ ವ್ಯಕ್ತಿಯು ಉಪಚರಿಸಿ, ತನ್ನ ಗುರುತನ್ನು ಕೊಡದೆ ಒಮ್ಮೆಲೆ ಅಲ್ಲಿಂದ ಮಾಯವಾಯಿತಂತೆ. ಎಚ್ಚರವನ್ನು ಪಡೆದ ನಾಯಕನು ಅತಿಯಾಗಿ ಕಳವಳಗೊಂಡನು. ತನ್ನ ಬಾಂಧವರೆಲ್ಲ ತನ್ನನ್ನು ತ್ಯಜಿಸಿದಾಗ ಅಂಥ ಭೀಕರ ಪ್ರಸಂಗದಲ್ಲಿ ತನ್ನನ್ನು

ಭಗವಂತನೇ ಆರೈಸಿ ಬದುಕಿಸಿದನು. ಇನ್ನು ಆತನ ಸೂಚನೆಯಂತೆ, ತನ್ನ ಮುಂದಿನ ಆಯುಷ್ಯವನ್ನು ಆತನ ಸೇವೆಯಲ್ಲಿ ಕಳೆಯುವುದೇ ಮೇಲು ಎಂದು ನಾಯಕನು ನಿಶ್ಚಯಿಸಿದನು. ಅಂದಿನಿಂದ ಅವನು ಭೌತಿಕ ಜೀವನದ ವೈಭವವನ್ನು ತೊರೆದು, ತಿರುಪತಿಯ ಸೇವೆಯಲ್ಲಿ, ಆದಿಕೇಶವನ ಸೇವೆಯಲ್ಲಿ ನಿರತನಾದನು. ಈ ರೀತಿ ಅವನ ಜೀವನದಲ್ಲಿ ನವಜಾಗೃತಿಯು ಉಂಟಾಗಿ ಕನಕನಾಯಕನು ಕನಕದಾಸನಾದನು.

## ವಿವೇಕೋದಯ

ಇಂಥ ಕ್ರಾಂತಿಯಾದೊಡನೆ ಕನಕದಾಸರಲ್ಲಿ ವಿವೇಕೋದಯವಾಯಿತು. ಅವರಿಗೆ ತಮ್ಮ ಜನ್ಮ ವ್ಯರ್ಥವಾಯಿತು ಎಂದೆನಿಸಿತು. "ನಾನು ಅರ್ಥದಾಸೆಯಲ್ಲಿ ಮತ್ತನಾದೆ; ಬಲು ದುಷ್ಟ ಕೃತ್ಯಗಳನ್ನು ಮಾಡಿದೆ; ಶ್ವಾನನಂತೆ ಹೀನನಾಗಿ ಮನೆಮನೆಗಳ ತಿರುಗಿದೆ. ಹರಿಯ ನೆನೆಯಲಿಲ್ಲ; ಭಾಗವತರಿಗೆ ಬಾಗಲಿಲ್ಲವಲ್ಲಾ!" (೧೮೪), "ಇನ್ನು ಸಾಕು ಸಾಕು ಮನುಜಸೇವೆ! ಅದನ್ನು ಮಾಡಿ ಮಾಡಿ ದಣಿವೆನಯ್ಯಾ! ದುರಾಶೆಯನ್ನು ಮನದಲಿಟ್ಟು ಕುದಿದೆ. ಒಡಲಿನ ಆಸೆಗಾಗಿ, ಜೇನಿನಲ್ಲಿ ತೊಡಕಿಬಿದ್ದ ನೊಣದಂತೆ, ಬಾಯ ಬಿಡುವೆ! ಎಳ್ಳು ಕಾಳಿನಷ್ಟು ಸುಖವ ಕಾಣೆನೋ! ಬಿಡಿಸಯ್ಯ ಎನ್ನ ಬಂಧಪಾಶವ! ಕೊಡಿಸಯ್ಯ ಭಕ್ತರ ಸಂಗವ! ಕೊಡು ನಿನ್ನ ಪಾದ ಭಜನೆ!" (೨೯), "ಪುಟ್ಟಿದಂದಿನಾರಭ್ಯ ಸುಖವೆಂಬುದನರಿಯೆ. ಕಾಸಿನ ಆಸೆಗಾಗಿ ಘಾಸಿಪಟ್ಟೆನು! ಶರೀರವನಾಂತು ಕಷ್ಟಪಟ್ಟೆನು! ಎನ್ನ ಬಂಧುಗಳು ಎನ್ನನ್ನು ಮುಟ್ಟಲಮ್ಮರು; ಅಟ್ಟಿ ಬಡಿಯುತಲಿಹರೋ! ಕೃಷ್ಣಾ! ಹೇಸಿಕೆಯ ಸಂಸಾರದಲಿ ಬಿದ್ದು ಬಳಲಲಿರುವೆನಯ್ಯ! ಸಾಕಿನ್ನು ಈ ನೋವು! ಎನಗೊಂದು ಗತಿ ತೋರಿಸಿ, ವಿವೇಕಿಯನೆ ಮಾಡಯ್ಯ!" (೯೫) ಎಂದು ಅವರು ಶ್ರೀಕೃಷ್ಣನನ್ನು ಬೇಡಿಕೊಂಡರು.

## ಮನೋಬೋಧೆ

ಈ ರೀತಿ, ಎಚ್ಚತ್ತ ವಿವೇಕವು, ಸಾರ-ಅಸಾರಗಳನ್ನು ಅರಿತು, ಅಸಾರವನ್ನು ತೊರೆದು, ಸಾರವನ್ನು ಪಡೆಯಲು ಅವರಿಗೆ ಬೋಧಿಸಿತು. ಆದರೆ ಅಂದಿನವರೆಗೆ ವಿಷಯಸುಖವನ್ನು ಸವಿದ ಅವರ ಮನಸ್ಸೂ, ಇಂದ್ರಿಯಗಳೂ ಅವರ ಬೋಧೆಯಂತೆ ನಡೆಯಲಿಲ್ಲ. ತಮ್ಮ ಹಿಂದಿನ ಚಟಗಳನ್ನು ಬಿಡಲಿಲ್ಲ. ಆಗವರು ತಮ್ಮ ಮನಸ್ಸನ್ನು ಬೋಧಿಸಿ ಒಲಿಸಲು ಯತ್ನಿಸಿದರು: "ಮನವೆ! ನೆಚ್ಚದಿರು ಸಂಸಾರ! ಈ ಕಾಯಕ್ಕೆ ನೆಲೆಯಿಲ್ಲ. ಅಚ್ಯುತನ ನಾಮವನು ನೆನೆದು ಸುಖಿಸಯ್ಯ! ಗಳಿಸದಿರು ಸೀಮೆಯನು! ಗಳಿಸದಿರು ದ್ರವ್ಯವನು! ಅದೊಂದು ದುರಿತದ ರಾಶಿ ಕಾಣಯ್ಯ! ನೋಡದಿರು ಪರಸತಿಯ; ಕೂಡದಿರು ದುರ್ಜನರ! ಆಡದಿರು

ಬಿರುನುಡಿಯು! ಬೇಡದಿರು ಲೋಭಿಯನು! ಕೊಂಡಾಡದಿರು ಬೀದಿಗೊಳುಂಬ ದೈವಗಳ! ನಿನ್ನ ಕಾಯ ನಾನಾ ಜನ್ಮದಿ ಬಂದ ನಾಟಕದ ಬೊಂಬೆ! ಆದಕ್ಕಾಗಿ ಮಾನಕ್ಕೆ ಮೆಚ್ಚಿ ಮರುಳಾಗದಿರು ಕಂಡ್ಯಾ! ಜಾಣತನದಿಂ ದಿವ್ಯನಾಮವನು ನೆನೆದು ಸುಖಿಯಾಗಯ್ಯ ಮನವೇ" (೧೭೯). "ಈ ಸಿರಿಯ ನಂಬಿ ಹಿಗ್ಗಲಿ ಬ್ಯಾಡ ಮನವೆ! ಮಡದಿ-ಮಕ್ಕಳ ಮಾಯದ ಸಂಸಾರಕ್ಕೆ ಮರುಳಾಗಬೇಡ! ಯಮನಾಳುಗಳು ನಿನ್ನನ್ನು ಎಳೆವಾಗ ಅವರು ನಿನ್ನನ್ನು ತೊರೆಯುವರು ಕಾಣಾ! ನೀನು ಮಾಡಿದ ದಾನ-ಧರ್ಮ-ಪುಣ್ಯ ಇವೇ ನಿನ್ನನ್ನು ಹಿಂಬಾಲಿಸಬಹು!" (೯೬). "ಆರಿಗಾರಿಲ್ಲ ಆಪತ್ಕಾಲದೊಳಗೆ! ಹಸಿದು ಬಳಲುವಾಗ, ಹಗೆ ಕೈಗೆ ಸಿಕ್ಕಾಗ, ಬಹು ವ್ಯಾಧಿಯಾದಾಗ, ಅತಿ ಭೀತಿ ಬರುವಾಗ, ವಾರಿಜಾಕ್ಷನ ನಾಮ ನೆನೆ ಕಂಡ್ಯಾ ಮನವೇ!" (೧೦೩). "ತಲ್ಲಣಿಸದಿರು ಕಂಡ್ಯಾ! ತಾಳು ಮನವೇ! ಪರಮಾತ್ಮನು ಎಲ್ಲರನು ಸಲಹುತಿಹ! ಇದಕೆ ಸಂಶಯವಿಲ್ಲ. ಬೆಟ್ಟದ ತುದಿಯಲ್ಲಿಯ ವೃಕ್ಷಕ್ಕೆ ಕಟ್ಟೆ ಕಟ್ಟಿ ನೀರೆರೆದವರು ಯಾರು? ಅಡವಿಯೊಳಗಾಡುವ ಮೃಗಪಕ್ಷಿಗಳಿಗೆ ಅಡಿಗಡಿಗೆ ಆಹಾರವಿತ್ತವರು ಯಾರು? ಕಲ್ಲೊಳಗೆ ಪುಟ್ಟಿ ಕೂಗುವ ಕಪ್ಪೆಗಳಿಗೆ ಅಲ್ಲಲ್ಲಿ ನೀರುಣಿಸುವವರಾರು? ಪಡೆದ ಜನನಿಯ ತೆರದಿ ಹೊಣೆಗಾರನಿರುವ ಸ್ವಾಮಿಯು ಎಲ್ಲರನು ಬಿಡದೆ ರಕ್ಷಿಪನು! ಇದಕೆ ಎಳ್ಳಷ್ಟೂ ಸಂದೇಹವಿಲ್ಲ ಕಾಣಾ!" (೪೬). ಆದಕ್ಕಾಗಿ ಭಗವಂತನನ್ನು ಭಜಿಸು! ಆತನ ನಾಮವ ನೆನೆಯಯ್ಯ! ಎಂದು ದಾಸರು ತಮ್ಮ ಮನಸ್ಸನ್ನು ಪರಿಪರಿಯಾಗಿ ಬೋಧಿಸಿದರು.

## ಕರುಳಿನ ಕರೆ

ಆದರೆ ಮಂಗ ಮನವು ಅವರು ಹೇಳಿದ್ದನ್ನು ಕೇಳಲಿಲ್ಲ. ಅವರ ಬೋಧೆ ಯಂತೆ ವರ್ತಿಸಲಿಲ್ಲ. ಆದುದರಿಂದ ಬುದ್ಧಿಯಲ್ಲಿ ಮೊಳೆತ ವಿಚಾರಗಳು ಆಚಾರ ದಲ್ಲಿ ಇಳಿಯಲಿಲ್ಲ. ಇದನ್ನು ಕಂಡು ದಾಸರು ತುಂಬ ಕಳವಳಗೊಂಡರು. ಇನ್ನು ಭಗವಂತನ ಹೊರತು ತನಗೆ ಬೇರೆ ಗತಿಯಿಲ್ಲ ಎಂಬುದನ್ನು ಮನಗಂಡು ಅವರು ಆತನನ್ನೆಯೆ ಮೊರೆಯಿಟ್ಟರು:

"ಸದಾನಂದ ಗೋವಿಂದಾ! ಸಲುಹಯ್ಯ ಎನ್ನನು! ಮನವೆನ್ನ ಮಾತು ಕೇಳದೋ ಗೋವಿಂದಾ! ಅದನ್ನು ಗೆಲ್ಲುವ ಬಗೆ ಎನಗಿಲ್ಲ. ದೇಹ ಕನಸಿನಂತಹದು; ಅದು ಸ್ಥಿರವಲ್ಲ. ಎನ್ನ ಬಿನುಗು ಬುದ್ಧಿಯ ಬಿಡಿಸಯ್ಯ! ಎನ್ನ ನೆನಹು ನಿನ್ನೊಳಗಿಟ್ಟು ನಡಿಸಯ್ಯ! ನಾನು ನಿನ್ನವನಲ್ಲವೇ? ನನ್ನ ದುರ್ವಾಸನೆಯ ಬಿಡಿಸೋ! ಸದ್ಗುಣವೆಂಬ ಧನವ ತುಂಬಿಸೋ! ನಿನ್ನಡಿಗಳ ನೆನಹು ಕೊಡೋ ಗೋವಿಂದಾ!" (೧೭೧) ಎಂದು ದಾಸರು ಭಗವಂತನನ್ನು ಅನನ್ಯಭಾವದಿಂದ ಪ್ರಾರ್ಥಿಸಿದರು. ಆಗ ಅಂತರ್ಮುಖರಾದ ದಾಸರಿಗೆ ತಮ್ಮ ಅವಗುಣಗಳು

ಕಾಣಿಸಿಕೊಂಡವು. ಅವುಗಳ ಅರಿವಿನಿಂದ ಅವರು ಮತ್ತಷ್ಟು ನೊಂದುಕೊಂಡರು. ಆಗ:

"ತರಳತನದಲಿ ಕೆಲವು ದಿನ ದುರು- । ಭರದ ಗರ್ವದಿ ಕೆಲವು ದಿನ ಮೈ ।
ಮರೆದು ನಿಮ್ಮಡಿಗೆರಗದಾದೆನು ವಿಷಯಕೇಳಿಯಲಿ ॥

ನರಕ-ಭಾಜನನಾಗಿ ಕಾಮಾ- । ತುರದಿ ಪರಧನ ಪರಸತಿಗೆ ಮನ ।
ಹರಿದ ಪಾಪವ ಕಳೆದು ರಕ್ಷಿಸು ನಮ್ಮನನವರತ ॥

ಮರೆದೆನಭ್ಯುದಯದಲಿ ನಿಮ್ಮನು । ಮರೆಯೆನಾಪತ್ತಿನಲಿ ಪೊರೆಯೆಂ- ।
ದೊರಲುವೆನು ಮನವೇಕಭಾವದೊಳಿಲ್ಲ ನಿಮ್ಮಡಿಯ ॥

ಮರೆದು ಬಾಹಿರನಾದವನ ನೀ । ಮರೆವರೇ? ಹಸು ತನ್ನ ಕಂದನ ।
ಮರೆವುದೇ? ಮಮತೆಯಲಿ ರಕ್ಷಿಸು ನಮ್ಮನನವರತ ॥

ಗತಿವಿಹೀನರಿಗಾರು? ನೀನೇ । ಗತಿ ಕಣಾ! ಪತಿಕರಿಸಿ ಕೊಡು ।
ಸದ್ಗತಿಯ ನೀನೆಲೆ ದೇವ!"

ಎಂದು ದಾಸರು ಒರಲಿದರು.

"ಏನು ಮಾಡಯ್ಯ? ಲಬಯುಲಾಸೆ ಬಿಡದು. ಜ್ಯೋತಿರ್ಮಯವಾದ ದೀಪದ ಬೆಳಕಿಗೆ ಕಾತುರದಿ ಬೀಳುವ ಪತಂಗದಂತೆ ನಾನು ವನಿತೆಯರ ಹೊಳಪಿಗೆ ಮನಸೋತ ಕಂಗಳನ್ನು ಹಿಂಬಾಲಿಸಿ ಹಾಳಾದೆನಯ್ಯ!" (೭೨), "ಎಂತಹುದೋ ನಿನ್ನಯ ಭಕುತಿ ಎನಗೆ ಮೂಢಾತ್ಮನಿಗೆ? ಸಂದ ವಯಸ್ಸನ್ನು ತಿಳಿದು ಕುಂದುತಿದೆ ಎನ್ನ ಮನ! ಅದರ ಅಂಧಕಾರವ ಬಿಡಿಸಿ, ಹೊಂದಿಸೈ ಜ್ಞಾನವನು!" (೧೭) ಎಂದು ದಾಸರು ಅಂಗಲಾಚಿ ಬೇಡಿಕೊಂಡರು.

ಆದರೂ ಪರಮಾತ್ಮನು ಅವರಿಗೆ ಒಲಿಯಲಿಲ್ಲ. ಆದುದರಿಂದ ಆತನನ್ನು ಒಲಿಸುವ ಪರಿಯೇ ತಮಗೆ ಗೊತ್ತಿಲ್ಲವೆಂದು ದಾಸರಿಗೆ ಅನಿಸಿತು. "ಆವ ಪರಿಯಲಿ ನಿಮ್ಮನೊಲಿಸಿ ಮೆಚ್ಚಿಪ ವಿಧವು ಅಣುಮಾತ್ರ ತೋರಲಿಲ್ಲ!", "ಎಳ್ಳು ಕಾಳಿನಷ್ಟು ಭಕ್ತಿ ಎನ್ನೊಳಗಿಲ್ಲ! ಗಾಣದ ಎತ್ತಿನಂದದಿ ನಾನು ಕಣ್ಣು ಮುಚ್ಚಿ ಪ್ರದಕ್ಷಿಣೆಮಾಡುವೆ!", "ಎನ್ನ ಅಳಿಲಸೇವೆಯನೊಪ್ಪಿಕೊಂಡು ನಿನ್ನ ಶರಣನ ಸಲುಹಯ್ಯ!" ಎಂದವರು ಬೇಡಿಕೊಂಡರು. ಮುಂದವರು ಪರಮಾತ್ಮನನ್ನು ಒಲಿಸುವ ಬಗೆಯನ್ನು, ಆತನನ್ನು ಒಲಿಸಿದ ಶರಣರಿಂದ ಅರಿಯಬೇಕೆಂದೆನಿಸಿ, ಅವರು ಶರಣರ ಸಹವಾಸವನ್ನು ನೀಡಲು ಭಗವಂತನನ್ನು ಬಿನ್ನಯಿಸಿದರು: "ಪರಮ ಭಾಗವತರ ಸಹವಾಸದೊಳಿರಿಸೆನ್ನ!", "ಎನಗೆ ಸಾಧುಸಂಗವ ಕೊಡಯ್ಯ!" ಎಂದವರು ಆತನನ್ನು ಪ್ರಾರ್ಥಿಸಿದರು. ತರುವಾಯ ಸತ್ಪುರುಷರ ಸಹವಾಸದಲ್ಲಿ ಹಲವು ದಿನ ಸಾಧನಮಾಡಿ ಅವರಿಂದ ಭಕ್ತಿಭಾವವನ್ನು ಬೆಳೆಸುವ ಬಗೆಯನ್ನು ಅವರು ಅರಿತಿರಬಹುದು.

## ಆತ್ಮಸಮರ್ಪಣ

ಭಾಗವತರಿಂದ ದಾಸರು ಭಗವಂತನಿಗೆ ಎಲ್ಲವನ್ನೂ ಅರ್ಪಿಸಿ, ಆತನ ಬಯಕೆಯಂತೆ, ಪ್ರೇರಣೆಯಂತೆ ನಡೆಯಲು ಕಲಿತಂತೆ ಕಾಣುವರು: "ತನು ನಿನ್ನದು, ಜೀವನ ನಿನ್ನದು ಸ್ವಾಮಿ! ಅನುದಿನದಲ್ಲಿ ಬಹ ಸುಖದುಃಖ ನಿನ್ನವಯ್ಯ! ಕಿವಿಯಿಂದ ಕೇಳುವ ಶ್ರುತಿ, ಕಂಗಳಿಂದ ನೋಡುವ ನೋಟ, ಗಂಧದ ಪರಿಮಳ, ಅನ್ನದ ರುಚಿ ಎಲ್ಲವೂ ನಿನ್ನವಯ್ಯ!" (೧೦) ಎಂದು ಸಾರಿದರು ದಾಸರು. ತಮ್ಮ ಮನ ವಚನದಿ ಜರುಗಿದ ಪಾಪಗಳನ್ನವರು ಕಾಲಕಾಲಕ್ಕೆ ಭಗವಂತನಿಗೆ ಅರ್ಪಿಸಿದರು. "ನನ್ನಿಂದ ನಾನೇ ಜನಿಸಿ ಬಂದೆನೇ ದೇವಾ! ನಿನ್ನ ಪ್ರೇರಣೆಯಂತೆ ನಡೆದು ನುಡಿದ ಮೇಲೆ, ನನ್ನ ತಪ್ಪುಗಳಿಗೆ ಹೊಣೆಗಾರರಾರು? ಅಂಧಕನ ಕೈಯಲ್ಲಿ ಕೋಲನಿತ್ತು ಕರೆದೊಯ್ಯುವ ಮುಂದಾಡಿಯು ಆತನನ್ನು ಕೆಡಹಲು, ಆತನು ಬಿದ್ದರೆ ಅದು ಯಾರ ತಪ್ಪು? ಕಂದನ ಆಡಿಸುವ ತಾಯಿ, ಕಂದ ಬಾವಿಯ ಅಂದಿ ನೋಡುತಿರೆ, ಅವನನ್ನು ಬೇಗ ಬಂದು ಅಪ್ಪದಿರೆ, ಅದು ಕಂದನ ತಪ್ಪೆ? ಭಾರ ನಿನ್ನದು, ದೂರು ನಿನ್ನದು, ಎಲ್ಲವೂ ನಿನ್ನದಯ್ಯ! ಇನ್ನು ನನ್ನನ್ನು ಕ್ಷೀರದೊಳದ್ದು, ಇಲ್ಲವೆ ನೀರಿನೊಳದ್ದು! ಇನ್ನು ನನ್ನ ತಪ್ಪುಗಳನೆಣಿಸದೆ ಎನ್ನನ್ನು ಕಾಯುವದು ನಿನ್ನ ಕೆಲಸ!" (೧೧೯) ಎಂದವರು ಭಗವಂತನಿಗೆ ಸರ್ವಸಮರ್ಪಣ ಮಾಡಿದರು.

ಇಷ್ಟಾದರೂ ದೇವರು ದಾಸರಿಗೆ ಒಲಿಯಲಿಲ್ಲ, ತನ್ನ ದರ್ಶನವನ್ನು ದಯ ಪಾಲಿಸಲಿಲ್ಲ. ಅದರಿಂದ ದಾಸರ ಕೊರಗಿಗೆ ಮಿತಿಯೇ ಉಳಿಯಲಿಲ್ಲ. "ನೀನೇ ಉಪೇಕ್ಷೆಯ ಮಾಡಿದರೆ ಬೇರೆ ಗತಿಯಾರೆನಗೆ ಮುಕುಂದಾ?" ಎಂದವರ ಅಂತ ರಂಗದ ಕುದಿಯು ಕೇಳಿತು. "ಈ ಕ್ಷಣತ್ರಯದಿ ಬಯಲಾಸೆಯಲಿ ಭ್ರಮೆ ಗೊಂಡೆ! ಹೇಸಿಕೆಯ ಸಂಸಾರದಿ ಸಿಲುಕಿ ಘಾಸಿಯಾದೆ! ಬೇಸರದಿ ಮನದಿ ನೊಂದೆ! ನಿನ್ನ ಪೊಂದಿದರೆ ನಾನು ಬದುಕುವ ಆಶೆ! ಇಂದು ಬಂದು ದಾಸನನು ಕರುಣಿಸಯ್ಯಾ!" (೪೮) ಎಂದು ದಾಸರು ಮೊರೆಯಿಟ್ಟರು. "ತಾಯನಗಲಿದ ಶಿಶುವಿನಂದದಿ ಬಾಯ ಬಿಡುವಂತಾಯ್ತಲೆ! ಚಿಂತಾಯಕನೆ ಎನ್ನನು ಬಿಡ ಬೇಡಯ್ಯ!", "ತೊರೆದು ಜೀವಿಸಬಹುದೇ ಹರಿ ನಿನ್ನ ಚರಣವನು? ನಾನು ಪ್ರಾಣವನು ಪರರಿಂಗೆ ಕೊಡಬಹುದು. ಆದರೆ ನಿಮ್ಮಡಿಯನ್ನು ಬಿಡಲರಿಯೆ ನಯ್ಯ!" (೧೦೧), "ಇನಿತು ಪರಿಯಲಿ ಹಲುಬಿದರೂ ನೀನು ಸುಮ್ಮನಿದ್ದರೆ ಅದು ನಿನಗೆ ಅಪಕೀರ್ತಿ ಎಂಬುದನ್ನು ಮರೆಯದಿರು! ಕರಪಿಡಿದು ಎನ್ನನ್ನು ಸಲುಹಯ್ಯ!" ಎಂದವರು ಪರಿಪರಿಯಾಗಿ ಹಲುಬಿದರು.

## ಭಕ್ತಿಯ ಪರಿಣತಿ

ಕೊನೆಗೊಮ್ಮೆ ದಾಸರ ಅನನ್ಯ ಶರಣಾಗತಿಯು ಅವರಿಗೆ ಭಗವಂತನ ಕರುಣ ವನ್ನೂ, ದರುಶನವನ್ನೂ ದಯಪಾಲಿಸಿತು. "ಬದುಕಿದೆನು! ಬದುಕಿದೆನು!

ಭವಹಿಂಗಿತು! ಪದುಮನಾಭನ ಪಾದದೊಲುಮೆ ಎನಗಾಯಿತು! ತಂದೆ ಕೇಶವರಾಯ ಬಂದೆನ್ನ ಹೃದಯದಲಿ ನೆಲೆಯಾಗಿ ನಿಂತ" (೮೨). ಈ ಬಗೆಯ ಧನ್ಯತೆಯ ಉದ್ಗಾರಗಳು ಅವರ ತಣಿದ ಎದೆಯಿಂದ ಹೊರಹೊಮ್ಮಿದವು. ಮುಂದವರಿಗೆ ಭಗವಂತನ ವೈಕುಂಠದ ದರ್ಶನಾನಂದವೇ ಲಭಿಸಿತು. ಅದನ್ನವರು ಚೆನ್ನಾಗಿ ಬಣ್ಣಿಸಿರುವರು. "ಇಷ್ಟು ದಿನ ಈ ವೈಕುಂಠ ಎಷ್ಟು ದೂರ ಎನ್ನುತ್ತಿದ್ದೆ. ಇಂದು ಸೃಷ್ಟಿಗೀಶ ಶ್ರೀರಂಗನನ್ನು ದೃಷ್ಟಿಯಿಂದ ನೋಡಿದೆ. ಅದು ವನ-ಉಪವನಗಳಿಂದ, ಘನ ಸರೋವರಗಳಿಂದ ಶೋಭಿಸುತ್ತಿತ್ತು. ಅಲ್ಲಿ ವಜ್ರ ವೈಡೂರ್ಯಗಳ ತೊಲೆಗಳಿದ್ದವು, ಪ್ರಜ್ವಲಿಪ ಮಹಾದ್ವಾರವಿದ್ದಿತು! ನಾನಲ್ಲಿ ನಿರ್ಜರದ ಋಕ್ಷಗಳನ್ನೂ, ತುಂಬುರ ನಾರದರನ್ನೂ, ಅಂಬುಜೋದ್ಭವ ಪ್ರಮುಖರನ್ನೂ ಕಂಡೆನು. ಇಷ್ಟೇ ಅಲ್ಲ. ನಾಗಶಯನನ ಮೂರ್ತಿಯ ಕಂಡೆ; ಭೋಗಿಭೂಷಣ ಶಿವನನ್ನು ಕಂಡೆ; ಭಾಗವತರ ತಿಮ್ಮೇಳವ ಕಂಡೆನು" (೩೧). ದಾಸರು ಎಲ್ಲೆಲ್ಲಿಯೂ ಶ್ರೀರಾಮನನ್ನು ಕಂಡರು. "ಎಲ್ಲಿ ನೋಡಿದಡಲ್ಲಿ ರಾಮ. ಇದ ಬಲ್ಲ ಜಾಣರ ದೇಹದಲ್ಲಿ ನೋಡಣ್ಣ! ಒಳಗಣ್ಣಿನಿಂದ ದೇವರ ನೋಡು! ಒಳಮೂಗಿಲಿ ಲೀಲಾವಿಲಾಸ ನೋಡು! ಒಳಗಿವಿಯಲ್ಲಿ ನಾದದ ಬೇರ ಕಾಣಯ್ಯ!" ಎಂದವರು ಅನ್ಯರಿಗೂ ಹೇಳತೊಡಗಿದರು: "ಒಳಹೊರಗೆ ನೀನಿಲ್ಲದಿಲ್ಲ ಕಾಣಯ್ಯ!" ಎಂದವರು ಸಾರಿದರು. ಕೊನೆಗೆ ದಾಸರು, "ನೀ ಮಾಯೆಯೊಳಗೋ, ನಿನ್ನೊಳು ಮಾಯೆಯೋ! ನೀ ದೇಹದೊಳಗೋ, ನಿನ್ನೊಳು ದೇಹವೋ?*; ಬಯಲು ಆಲಯದೊಳಗೋ, ಆಲಯವು ಬಯಲೊಳಗೋ; ಬಯಲು ಆಲಯವೆರಡು ನಯನದೊಳಗೋ! ನಯನ ಬುದ್ಧಿಯ ಒಳಗೋ, ಬುದ್ಧಿಯು ನಯನದ ಒಳಗೋ! ನಯನ ಬುದ್ಧಿಗಳೆರಡೂ ನಿನ್ನೊಳಗೋ ಹರಿಯೆ!" ಈ ಬಗೆಯಾಗಿ 'ಎಲ್ಲವೂ ನಿನ್ನಲ್ಲಿ, ನೀನು ಎಲ್ಲದರಲ್ಲಿ' ಎಂಬ ತಮ್ಮ ಸರ್ವಗತ ಬ್ರಹ್ಮನ ಅನುಭಾವವನ್ನು ಬಣ್ಣಿಸಿರುವರು (೫೬). ಈ ರೀತಿ ಅವರು 'ಸರ್ವಂ ಖಲು ಇದಂ ಬ್ರಹ್ಮ!' ಎಂದು ಬಣ್ಣಿತವಾದ ಉನ್ನತತಮ ಅನುಭಾವವನ್ನು ಪಡೆದರು. ತರುವಾಯ ಅವರು ಜನರಲ್ಲಿ ಭಕ್ತಿಪ್ರಸಾರದ ಕಾರ್ಯವನ್ನು ಮಾಡಲು ತೊಡಗಿದರು.

## ಕೊನೆಯ ಮಾತು

ಕನಕದಾಸರು ತಮ್ಮ ಕಾಲದ ಜನಜೀವನವನ್ನು ತಮ್ಮ ಕೆಲ ಪದಗಳಲ್ಲಿ ಚಿತ್ರಿಸಿರುವರು. ಅದನ್ನವರು 'ಕಲಿಯುಗದ ಮಹಿಮೆ' ಎಂದು ಸಂಬೋಧಿಸಿರುವರು: "ಸತ್ಯಧರ್ಮಗಳೆಲ್ಲ ಎತ್ತ ಪೋದವೊ ಕಾಣೆ. ಉತ್ತಮರ ಜೀವನಕೆ

---

* "मयि ते तेषु चाप्यहम् ।" (गीता ९–२९)

ದಾರಿಯಿಲ್ಲ. ನಿತ್ಯದಲಿ ಕಳವು-ವ್ಯಭಿಚಾರವುಳ್ಳವರೆಲ್ಲ ಅರ್ಥಸಂಪನ್ನರಾಗಿ ಸುಖವ ಅನುಭವಿಸುತಿಹರು. ಕೇವಲಾಧಮರೆಲ್ಲ ಸಿರಿಮದದಿ ಸೊಕ್ಕಿಹರು. ಕಾವರಾರೈ ಸಾಧುಸಜ್ಜನವನೀಗ?", "ನಡೆವ ಕಾರ್ಯಗಳೆಲ್ಲ ನುಡಿಯಲೆನ್ನಳವಲ್ಲ ....ತಡವ ಮಾಡಲಿ ಬೇಡ! ತಾಳಲಾರದು ಲೋಕ!" ಎಂದು ಕಳವಳಗೊಂಡು ದಾಸರು ಭಗವಂತನನ್ನು ಪ್ರಾರ್ಥಿಸಿದರು. ಅವರ ಬಿನ್ನಹವನ್ನು ಮನ್ನಿಸಿ ಭಗವಂತನು ಅಂದಿನ ವಿಷಮತೆಯನ್ನು ಅಳಿಸಿರಬೇಕು. ಆದರೆ ಇಂದಿನ ವಿಷಮತೆಯನ್ನು ಅಳಿಸಲು ಭಗವಂತನಿಗೆ ಪ್ರಾರ್ಥಿಸುವ ಮಹಾತ್ಮನಾರು? ತಮ್ಮ ಉನ್ನತ ಬಾಳು-ಬೋಧೆಗಳಿಂದ ಇಂದಿನ ಜನಜೀವನವನ್ನು ವಿಮಲಗೊಳಿಸುವವರಾರು? ಉನ್ನತಗೊಳಿಸುವವರಾರು?

ಇಂದು ಅಂಥ ಹಿರಿಯರು ಇಲ್ಲದುದರಿಂದ ಅಂದಿನ ದಾಸರಂಥ ಹಿರಿಯರ—ಮಹಾತ್ಮರ ಪಾವನಜೀವನವನ್ನು ನೆನೆಯೋಣ! ಅವರಿಂದ ದಿವ್ಯ ಬೆಳಕನ್ನೂ, ಬಲವನ್ನೂ ಪಡೆಯೋಣ! ನಮ್ಮನ್ನು ಉದ್ಧರಿಸಲು ಮರಳಿ ಅವತರಿಸಲು ಅವರನ್ನು ಬಿನ್ನವಿಸೋಣ!

ಅಳಿಯೆ ಜನತೆಯ ಗೋಳು । ಹೊಳೆಯೆ ಬೆಳಕಿನ ಬಾಳು ।
ಬೆಳೆಯೆ ಹುಲುಸಾಗಿ ಹಿರಿ ಭಕುತಿ, ಮರಳಿಲ್ಲಿ ।
ಇಳಿದುಬಾರಯ್ಯ! ದಾಸಯ್ಯ ॥

ಎಂದು ದಾಸರನ್ನು ಅನನ್ಯರಾಗಿ ಪ್ರಾರ್ಥಿಸೋಣ!

---

**ಸೂಚನೆ:**—ಕಂಸಗಳಲ್ಲಿಯ ಅಂಕಿಗಳು 'ಕನಕದಾಸರ ಕೀರ್ತನೆ' (ಉಡುಪಿ) ಇದರಲ್ಲಿ ಪದಗಳ ಕ್ರಮಾಂಕಗಳನ್ನು ಕಾಣಿಸುವುವು.

# ಕನಕದಾಸರ ಪವಾಡಗಳು

ಶ್ರೀ ಸುಬೋಧ ಎಂ. ರಾಮರಾವ್, ಬೆಂಗಳೂರು

ದಾಸವರ್ಯ ಶ್ರೀ ಕನಕದಾಸರು, ಕನ್ನಡನಾಡು–ನುಡಿಗಳನ್ನು ಪವಿತ್ರಗೊಳಿಸಿದ ಕರ್ಣಾಟಕ ಹರಿಭಕ್ತರಲ್ಲಿ ಅಗ್ರತರಗತಿಯ ಒಬ್ಬ ಮಹಾ ವ್ಯಕ್ತಿ. ಇವರು ಭಕ್ತಶ್ರೇಷ್ಠರೂ ಪವಾಡಪುರುಷರೂ ಮಾತ್ರವಲ್ಲದೆ, ಮೇಲ್ಮಟ್ಟದ ಕವಿಯೂ–ವಾಗ್ಗೇಯಕಾರರೂ ಆಗಿ ಕನ್ನಡನುಡಿ ಭಂಡಾರವನ್ನು ತುಂಬಿದ್ದಾರೆ.

ಕನಕದಾಸರು, ಕರ್ಣಾಟಕದಲ್ಲಿ ಹರಿದಾಸಪಂಥ ಸಂಸ್ಥಾಪಕರೆಂದೂ, ದಾಸಸಾಹಿತ್ಯ ನಿರ್ಮಾಪಕರೆಂದೂ ಸುಪ್ರಸಿದ್ಧರಾದವರು. ಶ್ರೀ ಪುರಂದರ ದಾಸಾರ್ಯರ ಸಮಕಾಲೀನರು. ಈ ಇಬ್ಬರು ಮಹನೀಯರೂ ವಿಜಯನಗರ ಸಾಮ್ರಾಜ್ಯದ ಸಾರ್ವಭೌಮರ ರಾಜಗುರುಗಳಾಗಿದ ಶ್ರೀ ವ್ಯಾಸರಾಯಸ್ವಾಮಿಗಳವರ ಶಿಷ್ಯರು. ಇಬ್ಬರಿಗೂ ಅವರೇ ಉಪದೇಶಕೊಟ್ಟು, ಕರ್ಣಾಟಕದ ಜ್ಞಾನಜ್ಯೋತಿಯನ್ನು ಬೆಳಗಿಸಿದರು. ಶ್ರೀ ಪುರಂದರದಾಸರು ಬ್ರಾಹ್ಮಣ ವರ್ಣದಲ್ಲಿ ಹುಟ್ಟಿ, ಚಿನಿವಾರ ವೃತ್ತಿಯನ್ನವಲಂಬಿಸಿ ಗಳಿಸಿದ ನವಕೋಟಿನಿಧಿಯನ್ನೂ ತ್ಯಾಗಮಾಡಿ, ಹರಿದಾಸತ್ವವನ್ನು ಕೈಕೊಂಡವರು; ಶ್ರೀ ಕನಕದಾಸರು ಹಾಲುಮತಸ್ಥ ಕುರುಬರಾಗಿ ಜನ್ಮಿಸಿ, ಢಣಾಯಕ ಅಧಿಕಾರನಡೆಸಿ, ಪುಣ್ಯವಶವಾಗಿ ದೊರೆತ ಕನಕ ಕೊಪ್ಪರಿಗೆಗಳ ಮಹದೈಶ್ವರ್ಯವನ್ನು ಸ್ವಾಮಿಸೇವೆಗಾಗಿ ವಿನಿಯೋಗಿಸಿ ಹರಿದಾಸರಾದವರು. ಇಬ್ಬರ ಕವಿತೆಗಳೂ ಮೃದುಮಧುರ ಕನ್ನಡದ ಲಲಿತಶೈಲಿಯಲ್ಲಿ ಶ್ರವಣ ಮನೋಹರವಾಗಿವೆ, ರಸವಂತವಾಗಿವೆ, ಭಗವದ್ಭಕ್ತಿ ಜ್ಞಾನವೈರಾಗ್ಯಪರ ಬೋಧನೆಗಳಿಂದ ತುಂಬಿ ತುಳುಕುತ್ತಿವೆ.

## ಜನನ ಪವಾಡ

ಕನಕದಾಸರು ಗುರುಮುಖದಿಂದ ಉಪದೇಶ ಪಡೆದು ದಾಸತ್ವಸ್ವೀಕಾರ ಮಾಡಿದ ತರುವಾಯ ಭಗವದನುಗ್ರಹದಿಂದ ಪವಾಡಗಳನ್ನೆಸಗಿದುದು ಮಾತ್ರವಲ್ಲ; ಅವರು ಮಾತಾಪಿತೃಗಳಿಂದ ಜನ್ಮಗೊಂಡುದೇ ಒಂದು ಪವಾಡವೆನ್ನಬಹುದಾಗಿದೆ. ಅವರ ತಂದೆ ಬೀರಪ್ಪ—ತಾಯಿ ಬಚ್ಚಮ್ಮ. ಧಾರವಾಡ ಜಿಲ್ಲೆಯ ಬಂಕಾಪುರ ತಾಲ್ಲೂಕಿನ ಬಾಡಗ್ರಾಮದ ಬೀರೇಗೌಡನು, ಸುತ್ತಲಿನ ಹತ್ತಿಪ್ಪತ್ತು ಗ್ರಾಮಗಳ ಢಣಾಯಕನಾಗಿ ರಾಜಮಾನ್ಯನಾಗಿದ್ದ ಗೌರವಶಾಲಿ, ಹೊಲಗದ್ದೆ ಮನೆ ಧನಧಾನ್ಯಗಳಿಂದ ಪುಷ್ಟನಾದ ವ್ಯಕ್ತಿ. ಲೌಕಿಕದ ಸಕಲ ವಿಧ ಅನುಕೂಲತೆಗಳಿಂದ ಕೂಡಿದ್ದರೂ ಮಕ್ಕಳಿಲ್ಲದ ಕೊರತೆಯೊಂದು ಆತನನ್ನು ಬಾಧಿಸುತ್ತಿತ್ತು. ವಯಸ್ಸಾಗುತ್ತಬಂದು ಗಂಡ ಹೆಂಡಿರಿಬ್ಬರಿಗೂ ತಲೆ ನರೆಯಿತು.

ಅವರೆಗೆ ಮಕ್ಕಳಾಗದುದು ಮುಂದೆ ವೃದ್ಧಾಪ್ಯದಲ್ಲಿ ಸಂತಾನವಾಗುವ ಆಸೆ ಯುಂಟೆ? ಆದರೂ ಆ ದಂಪತಿಗಳು ಹತಾಶರಾಗಲಿಲ್ಲ. ತಿರುಪತಿಯ ಶ್ರೀ ವೇಂಕಟರಮಣಸ್ವಾಮಿಗೆ ಶರಣುಬಿದ್ದು, ನಿಶ್ಚಲಭಕ್ತಿಯುತರಾಗಿ ವರ್ಷಾನು ಗಟ್ಟಲೆ ಸೇವೆ ಸಲ್ಲಿಸಿದರು. ಸ್ವಾಮಿಯ ಅನುಗ್ರಹದ ಫಲವೋ ಎಂಬಂತೆ ಮುದುಕಿ ಬಚ್ಚಮ್ಮನು ಗರ್ಭಿಣಿಯಾದಳು. ಎಲ್ಲರೂ ಪರಮಾಶ್ಚರ್ಯಪಟ್ಟರು. ನವಮಾಸ ಕಳೆಯಿತು. ಒಂದು ಶುಭಮುಹೂರ್ತದಲ್ಲಿ ಪುತ್ರರತ್ನವನ್ನು ಪ್ರಸವಿಸಿದಳು. ತಿರುಪತಿಯ ತಿಮ್ಮಪ್ಪನವರ ಪ್ರಸಾದದಿಂದ ಜನಿಸಿದ ಶಿಶುವಿಗೆ ತಿಮ್ಮನೆಂದೇ ನಾಮಕರಣ ಮಾಡಿದರು. ವೃದ್ಧದಂಪತಿಗಳು ಎಳೆಯ ಮಗುವಿನ ಆಟಪಾಟಗಳಿಂದ ಪರಮಾನಂದಗೊಂಡು, ಇದು ಆ ಭಗವಂತನ ಲೀಲೆಯೆಂದು ಸಂತೃಪ್ತಿಪಟ್ಟು ಕಾಲಕಳೆಯುತ್ತಿದ್ದರು.

ಕನಕದಾಸರ ಬಾಲ್ಯ–ಐಶ್ವರ್ಯಪ್ರಾಪ್ತಿಯ ವಿಚಾರಗಳೂ ಲೋಕ ವಿಲಕ್ಷಣವೆನ್ನಿಸುವಂತಿವೆ. ತಿಮ್ಮನು ಎಂಟು–ಹತ್ತು ವರ್ಷದವನಿರುವಾಗಲೇ ಬೀರೇಗೌಡನು ಮೃತ್ಯುವಶನಾದನು. ಮುದುಕಿ ಬಚ್ಚಮ್ಮನ ಪೋಷಣೆಯಲ್ಲಿದ್ದ ತಿಮ್ಮನು ಜೇಟಿ, ಮಲ್ಲಯುದ್ಧ, ಜೊತೆಯವರೊಂದಿಗೆ ವಿವಿಧ ಆಟಪಾಟಗಳು ಇವುಗಳಲ್ಲಿ ನಿರತನಾಗಿ, ಓದುಬರಹಗಳೆಂದರೆ ಲಕ್ಷ್ಯವಿಲ್ಲದೆ ನಿರಂಕುಶನಾಗಿ ಬೆಳೆಯತೊಡಗಿದನು. ತಾಯಿಯು ಆ ಮಗುವನ್ನು ಅಂಕೆಯಲ್ಲಿಟ್ಟುಕೊಳ್ಳಲು ಅಸಮರ್ಥಳಾಗಿ, ಅವನು ಹೇಗೆ ಬೆಳೆದು ಬುದ್ಧಿವಂತನಾಗುವನೋ, ಹೇಗೆ ವಂಶಕ್ಕೆ ಕೀರ್ತಿಪ್ರದನಾಗುವನೋ ಎಂದು ಚಿಂತಾಕ್ರಾಂತಳಾಗಿದ್ದಳು.

## ಕನಕಪ್ರಾಪ್ತಿ ಪವಾಡ

ಮುಂದೊಮ್ಮೆ ಅವರು ಆ ಗ್ರಾಮದಲ್ಲಿ ಕಾರಣಾಂತರವಾಗಿ ಭೂಶೋಧನೆ ಮಾಡಿಸುತ್ತಿರಲಾಗಿ, ನೆಲದಲ್ಲಿ ಹೂಳಲಟ್ಟಿದ್ದ ಕೊಪ್ಪರಿಗೆಗಳು ಕಂಡುಬಂದುವು. ಬೇರೆಯವರಿಗೆ ಮಣ[illegible] ಹೆಂಚುಚೂರುಗಳಿಂದ ತುಂಬಿದಂತೆ ಕಂಡುಬರುತ್ತಿದ್ದ ಆ ಕೊಪ್ಪರಿಗೆ[illegible]ತಿಮ್ಮಪ್ಪನು ನೋಡಿ, ಕೈಯಿಂದ ಮುಟ್ಟಿ ತೆಗೆದು ಕೊಟ್ಟರೆ ಅವೆಲ್ಲವೂ ಕನಕಮಯವಾಗಿ ಕಂಡುಬರುತ್ತಿದ್ದುವು. ತಿಮ್ಮಪ್ಪನ ಈ ಸುಕೃತ ವಿಶೇಷಕ್ಕಾಗಿ ಎಲ್ಲರೂ ಪರಮಾಶ್ಚರ್ಯಗೊಂಡು, ಪುಣ್ಯವಂತನಾದ ಆತನನ್ನು ಕನಕಪ್ಪ–ಕನಕನಾಯಕ ಎಂಬ ಗೌರವನಾಮದಿಂದ ಸಂಬೋಧಿಸುತ್ತ ಬಂದರು. ಕ್ರಮಕ್ರಮವಾಗಿ ಜನತೆಗೆ ತಿಮ್ಮಪ್ಪನೆಂಬ ಅವನ ಜನ್ಮನಾಮ ಮರೆತುಹೋಗಿ, ಕನಕನಾಯಕನೆಂಬ ಹೆಸರೇ ರೂಢಿಯಲ್ಲಿ ಬಂತು.

ಒಬ್ಬ ಮನುಷ್ಯನಿಗೆ ಆಕಸ್ಮಾತ್ತಾಗಿ ಅಧಿಕೈಶ್ವರ್ಯ ಪ್ರಾಪ್ತವಾದರೆ, ಅದು ಅವನಿಗೆ ಅಹಂಕಾರ ದುರಭಿಮಾನ ದಂಭ ದರ್ಪಗಳನ್ನೂ, ಕಾಮ ಕ್ರೋಧ ಲೋಭ ಮದ ಮತ್ಸರಾದಿಗಳನ್ನೂ ಉಂಟುಮಾಡಿ, ಅವನನ್ನು ಸ್ವಜನರಿಂದ

ದೂರಗೊಳಿಸಿ ಧರ್ಮಬಾಹಿರನನ್ನಾಗಿ ಮಾಡುವುದು ಲೋಕಸಾಮಾನ್ಯ. ಆದರೆ, ನಿರಂಕುಶಪ್ರವೃತ್ತಿಯ, ಆಟಪಾಟ ವಿನೋದಿಯಾದ ಕನಕನಾಯಕನಲ್ಲಿ ಈ ಐಶ್ವರ್ಯಪ್ರಾಪ್ತಿಯು ಘನತೆ ಗಾಂಭೀರ್ಯಗಳನ್ನೂ ದೈವಭಕ್ತಿ ಔದಾರ್ಯ ಭಾವಗಳನ್ನೂ ಉಂಟುಮಾಡಿತು. ಈ ಆಶ್ಚರ್ಯವನ್ನು ಕಂಡು ಊರಿನ ಹಿರಿಯರೂ, ಅವನ ಬಂಧು ಬಾಂಧವರೂ ಬೀರೇಗೌಡನ ಮಗನು ಧನವಂತನಾದುದರೊಂದಿಗೆ ಘನವಂತನಾದುದೂ ಒಂದು ಪವಾಡವೆಂದೇ ಬಗೆದು ಹರ್ಷಗೊಂಡರು. ಅವನ ಉದ್ಧತ ಗುಣ ನಡತೆಗಳೂ, ಹುಡುಗಾಟಿಕೆಯ ಆಟಪಾಟಗಳೂ ದೂರವಾಗಿ, ಕನಕನಾಯಕನು ತನ್ನ ಆ ಅಪೂರ್ವ ನಿಧಿಯನ್ನು ಉತ್ತಮ ರೀತಿಯಲ್ಲಿ ವಿನಿಯೋಗಿಸಿ ಹೇಗೆ ಸಾರ್ಥಕಗೊಳಿಸಬಹುದೆಂದು ಗ್ರಾಮದ ಹಿರಿಯರೊಂದಿಗೆ ಯೋಚಿಸುತ್ತಲೂ, ತನ್ನ ಹೊಲ ಮನೆಗಳ–ಢಣಾಯಕತನದ ಅಧಿಕಾರ ವಿಚಾರ ಇವುಗಳನ್ನು ಕುರಿತು ಆಪ್ತಾಲೋಚನೆ ಮಾಡುತ್ತಲೂ ಆ ಪ್ರಾಂತದಲ್ಲೇ ಒಬ್ಬ ಗಣ್ಯವ್ಯಕ್ತಿಯೆಂದು ಪ್ರಸಿದ್ಧನಾದನು.

## ಕನಕನಾಯಕನು ದೈವಭಕ್ತನಾದನು

ಧನಧಾನ್ಯ ಸಮೃದ್ಧಿ, ತುಂಬುಯೌವನ, ದಿವ್ಯಾರೋಗ್ಯಭಾಗ್ಯ, ಸುರೂಪ ಸಂಪತ್ತು, ಸ್ವಜನಾನುರಾಗ, ರಾಜಮಾನ್ಯತೆಯ ಢಣಾಯಕನ ಅಧಿಕಾರ ಇಷ್ಟೆಲ್ಲವೂ ಒಬ್ಬ ವ್ಯಕ್ತಿಯಲ್ಲಿ ಕಲೆತಿರುವಾಗ ಅವನಿಗೆ ವಿವಾಹಕ್ಕೆ ಕನ್ಯೆ ದೊರೆಯುವುದು ದುರ್ಲಭವೆ? ಯುಕ್ತಕಾಲದಲ್ಲಿ ಬಂಧುಗಳೆಲ್ಲ ಕಲೆತು, ಕನಕನಾಯಕನಿಗೆ ಸುಂದರಳಾದ ಒಬ್ಬ ಕನ್ಯಾಮಣಿಯೊಂದಿಗೆ ವಿವಾಹ ಮಹೋತ್ಸವವನ್ನು ನೆರವೇರಿಸಿದರು. ವಂಶಗೌರವದಿಂದಲೂ, ಉತ್ತಮ ಗುಣ ನಡತೆಗಳಿಂದಲೂ, ತೇಜಸ್ವಿತೆಯಿಂದಲೂ ಪ್ರೌಢನೆಂದು ತೋರ್ಪಟ್ಟ ಆತನ ಮೇಲೆ ಭಗವದನುಗ್ರಹವೂ ಉಂಟಾಯಿತೋ ಎಂಬಂತೆ, ಆನೇಗೊಂದಿ ಸಂಸ್ಥಾನದ ಮಹಾರಾಜನು ಬಂಕಾಪುರ ಪ್ರಾಂತವನ್ನು ಆತನ ಸ್ವಾಧೀನಕ್ಕೆ ಕೊಟ್ಟು, ಅದರ ಸರ್ವಾಧಿಕಾರವನ್ನೂ ನೋಡಿಕೊಂಡು ಆಳಿಕೊಂಡು ಬರುವಂತೆ ಅನುಮತಿ ಕೊಟ್ಟನು. ಅಧಿಕಾರ ಪ್ರಾಪ್ತವಾಯಿತೆಂದು ನಾಯಕನ ಕಣ್ಣು ಕಿವಿಗಳು ಮಾಂದ್ಯವೆನ್ನಿಸಲಿಲ್ಲ. ನಾಲಿಗೆಯು ಒರಟಾಗಲಿಲ್ಲ. ಹಣ ಹೊನ್ನುಗಳ ಹೊಳಪು ಹರಣವಿತ್ತ ಹೃದಯನಿವಾಸಿ ಶ್ರೀಹರಿಯನ್ನು ಮರೆವಂತಹ ಮಂಕುತನವನ್ನು ಆತನಿಗುಂಟುಮಾಡಲಿಲ್ಲ. ಆಗಲಾತನು, ತನಗೆ ದೊರೆತಿದ್ದ ಕನಕ ಕೊಪ್ಪರಿಗೆಗಳ ಅಪಾರ ನಿಧಿಯನ್ನುಪಯೋಗಿಸಿ, ಕಾಗಿನೆಲೆಯಲ್ಲಿದ್ದ ಶ್ರೀ ಆದಿಕೇಶವ ಸ್ವಾಮಿಯ ದೇವಾಲಯವನ್ನು ಜೀರ್ಣೋದ್ಧಾರಗೊಳಿಸಿ ಸುತ್ತಲೂ ಪ್ರಾಕಾರ ಮಂಟಪಾದಿಗಳಿಂದ ಕಂಗೊಳಿಸುವಂತೆ ಮಾಡಿದನು. ನಿತ್ಯೋತ್ಸವ, ಮಾಸೋತ್ಸವ, ಸಂವತ್ಸರೋತ್ಸವ, ರಥೋತ್ಸವಾದಿಗಳೂ, ಶಾಸ್ತ್ರೋಕ್ತವಾದ ನಿರಂತರ

ಸ್ವಾಮಿ ಸೇವೆಯೂ ನಡೆದುಬರುವಂತೆ ವ್ಯವಸ್ಥೆಗೊಳಿಸಿದನು. ಮುಂದೆ ಆ ಪ್ರಾಂತದವರೆಲ್ಲ ಪವಾಡಪುರುಷ ಕನಕನಾಯಕನ ಪುಣ್ಯದಿಂದ ತಿರುಪತಿಯ ವೇಂಕಟರಮಣನ ಸಾನ್ನಿಧ್ಯವು ತಮ್ಮ ಊರಿಗೇ ಬಂದಂತಾಯಿತೆಂದು ಹರ್ಷಗೊಂಡು ಬೆಟ್ಟದೊಡೆಯನಿಗೆ ಸಲ್ಲಿಸಬೇಕಾದ ತಮ್ಮ ಕಾಣಿಕೆಯನ್ನು ಕಾಗಿನೆಲೆಯ ಆದಿಕೇಶವನಿಗೇ ಸಲ್ಲಿಸಿ ಧನ್ಯರಾದೆವೆಂದುಕೊಳ್ಳುತ್ತಿದ್ದರು. ದೂರದ ಬೆಟ್ಟದಲ್ಲಿದ್ದ ದೇವರು ಮನೆಯ ಬಾಗಿಲಿಗೇ ಬಂದಂತಾಯಿತೆಂದು ಸಮಾಧಾನಪಟ್ಟರು.

## ಕನಕನಾಯಕನು ಕನಕದಾಸರಾದನು

ಮುಂದೆ ದಿನಗಳು ಸಂದಂತೆಲ್ಲ, ನಾಯಕನ ಜೀವಿತದಲ್ಲಿ ಹಲವಾರು ಬದಲಾವಣೆಗಳುಂಟಾದುವು. ವೃದ್ಧಾಪ್ಯದಲ್ಲಿ ಪಡೆದು ಪ್ರೀತಿಯಿಂದ ಕಾಪಾಡಿದ ತಾಯಿ ತೀರಿಹೋದಳು. ವಂಶಾಭಿವೃದ್ಧಿಗೊಂದು ಸಂತಾನವನ್ನೀಯದೆ, ಆತನ ಪತ್ನಿಯೂ ಗತಿಸಿದಳು. ನಾಯಕನ ಮನಸ್ಸು ಅತ್ಯಂತ ನಿರುತ್ಸಾಹಗೊಂಡು ಮುಂದೆ ಮಾರ್ಗ ತೋರದಂತಾಯಿತು. 'ದೇವಾ, ನನ್ನನ್ನೇಕೆ ಮರೆತೆ' ಎಂದುಕೊಳ್ಳತೊಡಗಿದನು. ಇನ್ನೂ ಪ್ರಾಯ ಕುಗ್ಗಿರಲಿಲ್ಲ. ಮನಸ್ಸು ಭಕ್ತಿ ವೈರಾಗ್ಯಪರವಾಗಿರಲಿಲ್ಲ. ಅಧಿಕಾರಮೋಹ ಇಂಗಿರಲಿಲ್ಲ. ಆಗ ಒಂದು ದಿನ, ಆತನಿಗೊಂದು ಕೌತುಕದ ಕನಸಾಯಿತು. ಅದರಲ್ಲಿ "ಎಲೋ ಕನಕಾ, ನನ್ನ ದಾಸನಾಗೋ!" ಎಂದು ಯಾರೋ ಹೇಳಿದಂತಾಯಿತು. ಕನಕನಾಯಕನು, ಕನಸಿನಲ್ಲೇ—"ಢಣಾಯಕನಾಗಿ ಅಧಿಕಾರಮಾಡಬೇಕಾದ ನಾನು ದಾಸನಾಗಲಾ? ಜೋಳಗೆ ಹಿಡಿದು, ಊರೂರು ತಿರುಗಲಾ? ನಾನಿದಕ್ಕೆ ಒಪ್ಪಲಾರೆ!" ಎಂದುಬಿಟ್ಟನು. ಹೀಗೆ ಮತ್ತೂ ಒಂದೆರಡು ಬಾರಿ ಕರೆಬಂದಿತು. ಮುಂದೊಮ್ಮೆ ನೆರೆಯ ಗ್ರಾಮದವರೊಂದಿಗೆ ಗಡಿಸಂಬಂಧ ವ್ಯವಹಾರವುಂಟಾಗಿ, ಕದನ ಕೈಗಟ್ಟಿತು. ಕಾಳಗದಲ್ಲಿ ತೊಡಗಿದ ಕನಕನಾಯಕನಿಗೆ, ಶತ್ರುಗಳ ಆಯುಧಗಳ ಗಾಯದಿಂದ ಅಧಿಕ ರಕ್ತಸ್ರಾವವಾಗಿ ದೇಹದ ಮೇಲಿನ ಸ್ಮೃತಿ ತಪ್ಪಿತು. ಆ ಮರವೆಯಲ್ಲೂ, ಹಿಂದಿನಂತೆಯೇ—"ಎಲೋ ಕನಕಾ, ಈಗಲಾದರೂ ನನ್ನ ದಾಸನಾಗುವಿಯೇನೋ?" ಎಂದು ಹೇಳಿದುದು ಕೇಳಿಸಿತು. ಆಗಲೂ, ನಾಯಕನು —"ಏಕೆ ನನ್ನನ್ನಿಂತು, ದಾಸನಾಗು, ದಾಸನಾಗೆಂದು ಕಾಡುತ್ತಿರುವೆ! ನನಗೀಗ ಮೈಯೆಲ್ಲ ಗಾಯವಾಗಿ ನೋವಿನಿಂದ ನರಳುತ್ತಿರುವೆನು. ಇದೆಲ್ಲ ಗುಣವಾಗಲಿ. ನೋಡೋಣ" ಎಂದು ಉತ್ತರವಿತ್ತನು. "ದಾಸನಾಗು, ಒಡನೆ ಎಲ್ಲ ವಾಸಿಯಾಗುವುವು. ನನ್ನನ್ನು ಯಾರೆಂದು ತಿಳಿದೆ? ನಿನ್ನನ್ನು ಯುದ್ಧದಲ್ಲಿ ಗಾಯಗೊಳಿಸಿದವನೂ ನಾನೇ! ಈಗ ನೋಡು" ಎಂದು ಆ ವ್ಯಕ್ತಿ ಮೈಮೇಲೆ ಕೈಯಾಡಿಸಲು, ಗಾಯುಗಳೆಲ್ಲ ಮಾಯವಾದುವು. ಮೈನೋವು ಬಳಲಿಕೆಗಳೆಲ್ಲ ಪರಿಹಾರವಾಗಿ ಲವಲವಿಕೆಯುಂಟಾಯಿತು. ನಾಯಕನಿಗೆ ಅತ್ಯಾಶ್ಚರ್ಯ

ವುಂಟಾಗಿ, ಏನು ಹೇಳಲೂ ತೋರದೆ ಎದ್ದು ಕುಳಿತನು. ಆಗ ಆ ಅಪೂರ್ವ ವ್ಯಕ್ತಿಯು, ಅವನ ನಾಲಿಗೆಯನ್ನು ಮುಂದಕ್ಕೆಳೆದು ಅದರ ಮೇಲೆರೆಡು ಬೀಜಾಕ್ಷರಗಳನ್ನು ಬರೆದು ಅದೃಶ್ಯವಾಯಿತು. ಒಡನೆ ಕನಕನು ಎಚ್ಚೆತ್ತು ನೋಡಲು ಯಾರನ್ನೂ ಕಾಣದೆ, ಮೈಯಲ್ಲಿ ವಿಶೇಷ ಲವಲವಿಕೆ ಉತ್ಸಾಹಗಳು ಕಂಡು ಬರುತ್ತಿರಲು—ದಂಭ ದುರಭಿಮಾನ ಅಹಂಕಾರಗಳು ನಿರ್ಮೂಲವಾಗಿ ಕೈ ಮುಗಿದು—"ದೇವಾ, ನನ್ನನ್ನು ಕ್ಷಮಿಸು. ನಿನ್ನಾಜ್ಞೆಯಂತೆಯೇ ನಿನ್ನ ದಾಸನಾಗುತ್ತೇನೆ. ಆದರೆ, ನಾನು ಬೇಡಿದಾಗ ನೀನು ದರ್ಶನ ಕೊಡುವ ಕೃಪೆ ಮಾಡಬೇಕು" ಎಂದು ಬೇಡಿಕೊಂಡನು. ಅಂದಿನಿಂದ 'ನಾನಿನ್ನು ಕೇಶವ ಸ್ವಾಮಿಯ ದಾಸನಾಗಿ, ಆತನ ಸೇವೆಯಲ್ಲಿ ನಿರತನಾಗಿರುತ್ತೇನೆ' ಎಂದು ನಿರ್ಧರಿಸಿದನು.

ಹೀಗೆ ಕನಕನಾಯಕನು, ಕನಕದಾಸರಾದುದೂ ಒಂದು ಪವಾಡವೇ ಆಯಿತು.

ಮುಂದೆ ಅಧಿಕಾರವು ತಾನೇ ಬಿಟ್ಟುಹೋಯಿತು. ದಾಸರು ಏಕನಾದವೊಂದನ್ನು ಕೈಯಲ್ಲಿ ಧರಿಸಿ, ಕೇಶವಸ್ವಾಮಿಯ ಸನ್ನಿಧಿಯಲ್ಲಿ ಕುಳಿತು ಕವನ ಮಾಡಲಾರಂಭಿಸಿದರು.

**ಸುವ್ವಿಮಟ್ಟು—ರೂಪಕತಾಳ**

ಈಶ ನಿನ್ನ ಚರಣಸೇವೆ । ಆಸೆಯಿಂದ ಮಾಡುವೆನು ॥
ದೋಷರಾಶಿ ನಾಶಮಾಡು । ಶ್ರೀಶ ಕೇಶವಾ ॥

ಎಂದು ಪ್ರಾರಂಭಿಸಿ ಶ್ರೀಹರಿಯ ಕೇಶವ ನಾರಾಯಣಾದಿ ಚತುರ್ವಿಂಶತಿ ನಾಮಗಳ ಮೇಲೂ ನಾಮಕ್ಕೊಂದು ನುಡಿಯಂತೆ ಹಾಡಿ—

ಸತ್ಯವಾದೀ ನಾಮಗಳನು । ನಿತ್ಯದಲ್ಲು ಪಠಿಸುವರನು ॥
ಅರ್ತಿಯಿಂದ ಸಲಹುವನು । ಕರ್ತೃ ಕೇಶವ ॥
ಮರೆಯುದಲೇ ಹರಿಯ ನಾಮ । ಬರೆದು ಓದಿ ಕೇಳಿದರ್ಗೆ ॥
ಕರೆದು ಮುಕ್ತಿ ಕೊಡುವ–ನೆಲೆಯಾದಿಕೇಶವ ॥

—ಕಾಗಿನೆಲೆಯಾದಿಕೇಶವ.

ಎಂದು ಇಪ್ಪತ್ತೈದು ನುಡಿಗಳ ಪದವನ್ನು ರಚಿಸಿರುವರು.

## ಕೋಣಮಂತ್ರ–ಪವಾಡ

ತರುವಾಯ ಕನಕದಾಸರಿಗೆ ವ್ಯಾಸರಾಯಸ್ವಾಮಿಗಳ ಶಿಷ್ಯತ್ವ ವಹಿಸಿ ಉಪದೇಶ ಪಡೆಯಬೇಕೆಂದು ಭಗವದಾಜ್ಞೆಯಾಗಲು, ಗುರುಗಳನ್ನು ಹುಡುಕಿ

ಕೊಂಡು ಹೊರಟರು. ಅವರಿಗೆ ವ್ಯಾಸರಾಯರಿಂದಾದ ಮಂತ್ರೋಪದೇಶವೂ ಒಂದು ಪವಾಡವೇ ಆಯಿತು. ಆಗ ಗುರು ವ್ಯಾಸರಾಯರು ಮದನಪಲ್ಲಿ ಪ್ರಾಂತದಲ್ಲಿ **ವ್ಯಾಸಸಮುದ್ರವೆಂಬೊಂದು** ಕೆರೆಯನ್ನು ಕಟ್ಟಿಸುತ್ತಿದ್ದರು. ಕನಕದಾಸರು ಬಂದು ದರ್ಶನ ಮಾಡಿ ವಂದಿಸಲು ಸ್ವಾಮಿಗಳು ನೀನು ಯಾರೆಂದೂ, ಏಕೆ ಬಂದೆಯೆಂದೂ ಕೇಳಿದರು. ದಾಸರು, ತಾನು ಢಣಾಯಕ ನಾಗಿದ್ದ ಕನಕನೆಂದೂ ಮಂತ್ರೋಪದೇಶ ಪಡೆಯಲು ಬಂದೆನೆಂದೂ ಹೇಳಿದರು. "ಕುರುಬನಿಗೆಂತಹ ಮಂತ್ರವೋ ಕೋಣಮಂತ್ರ" ಎಂದು ಸ್ವಾಮಿಗಳು ಪರಿಹಾಸ್ಯ ಮಾಡಲು, ದಾಸರು ಅಷ್ಟೇ ಸಾಕೆಂದು ನುಡಿದು ಒಂದು ಏಕಾಂತ ಸ್ಥಳದಲ್ಲಿ ಕುಳಿತು 'ಕೋಣ–ಕೋಣ' ಎಂದು ಜಪಿಸತೊಡಗಿದರು. ಅವರ ಮನಶ್ಶಕ್ತಿಯೆಂಥಾದ್ದೋ, ದೈವಾನುಗ್ರಹವೆಂಥಾದ್ದೋ ಎಂದು ಎಲ್ಲರೂ ಆಶ್ಚರ್ಯಪಡುತ್ತಿರಲು ಭವ್ಯಾಕಾರದ ಯಮದೇವರ ಕೋಣವೇ ಬಂದು ಎದುರಿಗೆ ನಿಂತಿತು. ದಾಸರು ಅದನ್ನು ಜೊತೆಗೇ ಕರೆತಂದು ಸ್ವಾಮಿಗಳನ್ನು ಕಂಡು, 'ಮಹಾಸ್ವಾಮಿ, ಗುರೂಪದೇಶದಂತೆ ಕೋಣ ಬಂದಿದೆ! ಏನು ಕೆಲಸ ಮಾಡಿಸಲಿ' ಎಂದು ಕೇಳಿದರು.

ವ್ಯಾಸರಾಯರು ಪರ್ವತಾಕಾರದ ಆ ಕೋಣವನ್ನು ನೋಡಿ, ಆಶ್ಚರ್ಯ ಪಟ್ಟು, 'ಭಲೆ, ಒಳ್ಳೇ ಕೋಣವನ್ನೇ ತಂದಿರುವೆ. ಇದರಿಂದ ಅಲ್ಲಿ ತೂಬಿಗೆ ಅಡ್ಡವಾಗಿರುವ ಆ ದೊಡ್ಡ ಬಂಡೆಯನ್ನು ಕಿತ್ತು ಒಗೆಯಿಸು' ಎಂದರು. ಶಿಷ್ಯ ಕನಕದಾಸರು, ಕೋಣವನ್ನು ಆ ಬಳಿಗೆ ಕರೆದುಕೊಂಡು ಹೋಗಿ ಗುರುಗಳು ಹೇಳಿದಂತೆ ಸೂಚನೆ ನೀಡಲು, ಆ ಕೋಣವು ಒಮ್ಮೆ ತನ್ನ ಕೊಂಬುಗಳನ್ನು ಆ ಬಂಡೆಗೆ ಹಚ್ಚಿ ಬಲವಾಗಿ ನೂಕಲು, ಆ ದೊಡ್ಡ ಬಂಡೆಯು ಕಿತ್ತು ಹೊರಳಿ ಆಚೆಗೆ ಬಿದ್ದುಬಿಟ್ಟಿತೆಂದು ಗುರುತುಗಳನ್ನು ಈಗಲೂ ತೋರಿಸುತ್ತಾರೆ. ಅಂದು ಹಾಗೆ ಕಟ್ಟಲ್ಪಟ್ಟ ತೂಬು ಲಕ್ಷ್ಮೀನಾರಾಯಣ ತೂಬು ಎಂದು ಪ್ರಸಿದ್ಧವಾಗಿದೆ.

ಕನಕದಾಸರ ಯೋಗ್ಯತೆಯನ್ನೂ ಆತ್ಮೌನ್ನತ್ಯದ ಮಟ್ಟವನ್ನೂ ಅರಿತ ವ್ಯಾಸರಾಯರು, ತರುವಾಯ ಅವರಿಗೆ ಉಪದೇಶ ಕೊಟ್ಟು ಶಿಷ್ಯನನ್ನಾಗಿ ಸ್ವೀಕರಿಸಿದರು.

## ಅವರ ವಾಕ್ಚಾತುರ್ಯ

### ವೈಕುಂಠಕ್ಕೆ ಹೋಗಲು ಅರ್ಹರಾರು?

ಶ್ರೀ ವ್ಯಾಸರಾಯರಂತಹ ಮಹಾ ಪಂಡಿತರು, ಪುರಂದರದಾಸರೊಂದಿಗೂ ಕನಕದಾಸರೊಂದಿಗೂ ಕೂಡಿ ಕನ್ನಡ ಪದಗಳನ್ನು ಹೇಳಿಕೊಳ್ಳುತ್ತ, ಭಗವ ದ್ವಿಷಯ ವಿಚಾರದಲ್ಲಿ ತೊಡಗಿರುತ್ತಿದ್ದುದು, ಮಠದಲ್ಲಿದ್ದ ಪಂಡಿತವರ್ಗಕ್ಕೆ ಅಸಹನೆಯನ್ನುಂಟುಮಾಡಿತು. ಒಮ್ಮೆ ಶ್ರೀ ವ್ಯಾಸರಾಯರಿಗೆ ಕನಕದಾಸರ

ಯೋಗ್ಯತೆಯನ್ನು ತಮ್ಮ ವರಿಗೆ ತಿಳಿಸಬೇಕೆಂದು ಅಪೇಕ್ಷೆಯಾಯಿತು. ಒಂದು ದಿನ ವಿದ್ವದ್ಗೋಷ್ಠಿ ನೆರೆದಿದ್ದಾಗ, "ಇಲ್ಲಿ ನೆರೆದಿರುವ ಇಷ್ಟು ಮಂದಿ ವಿದ್ವಾಂಸರು, ಮಹಾ ಪಂಡಿತರು, ಪುರಾಣಿಕರು, ತತ್ವಜ್ಞರು ಮುಂತಾದವರಲ್ಲಿ ವೈಕುಂಠಕ್ಕೆ ಹೋಗಲು ಅರ್ಹರು ಯಾರು?" ಎಂಬ ಒಂದು ಕೌತುಕದ ಪ್ರಶ್ನೆ ಯನ್ನೆತ್ತಿದರು. ಅಷ್ಟು ಮಂದಿ ಪ್ರಾಜ್ಞರಲ್ಲಿ ಯಾರಿಗೂ ವ್ಯಕ್ತಿಶಃ ನಾನು ಹೋಗಲರ್ಹನೆಂದು ಹೇಳುವುದಕ್ಕಾಗಲೀ, ಇಂಥವರೇ ಹೋಗುವರೆಂದು ನಿರ್ಧರಿಸ ಲಿಕ್ಕಾಗಲೀ ಧೈರ್ಯ ಬರಲಿಲ್ಲ. ಆಗ ಸ್ವಾಮಿಗಳು, "ಏನೋ ಕನಕಾ, ಇವರು ಮಹಾ ತತ್ವಜ್ಞರು, ಇವರು ಶ್ರೇಷ್ಠ ಪುರಾಣಿಕರು, ಇವರು ಆರು ಶಾಸ್ತ್ರಗಳನ್ನೂ ಕರತಲಾಮಲಕವಾಗಿ ತಿಳಿದ ಮಹಾ ವಿದ್ವಾಂಸರು, ಇವರು ಹೋಗಬಹುದೇನೋ ವೈಕುಂಠಕ್ಕೆ? ಇವರು ಹೋಗಬಹುದೇನೋ" ಎಂದು ಪ್ರಶ್ನಿಸುತ್ತಾ ಬಂದರು. ದಾಸರು "ಇಲ್ಲ ಮಹಾಸ್ವಾಮಿ ಸಾಧ್ಯವಿಲ್ಲ, ಹೋಗ ಲಾರರು!" ಎಂದು ಹೇಳುತ್ತಾ ಬಂದರು. "ಈ ಪುರಂದರದಾಸರು ಹೋಗ ಬಹುದೇನೋ? ನಾನು ಹೋಗಬಹುದೇನೋ?" ಎಂದು ಕೇಳಲು ಅದಕ್ಕೂ 'ಇಲ್ಲ' ಎಂಬ ಉತ್ತರವೇ ಬಂತು. ಇನ್ನು ಉಳಿದವರೊಬ್ಬರು ಕನಕದಾಸರು. "ನೀನು ಹೋಗಬಹುದೇನೋ ಕನಕಾ?" ಎಂದರು ಸ್ವಾಮಿಗಳು. ಆಗ ದಾಸರು, "**ನಾನು** ಹೋದರೆ ಹೋಗಬಹುದು ಒಡೆಯಾ!" ಎಂದರು ದಾಸರು. ಆ ಮಾತನ್ನು ಕೇಳಿ ಸಕಲ ಪಂಡಿತರೂ ರೇಗಿ ಬೆಂಕಿಬೆಂಕಿಯಾದರು. "ನಮ್ಮಂತಹ ತತ್ವಜ್ಞರಾದ ವಿದ್ವಾಂಸರಲ್ಲ; ಯತೀಶ್ವರರಾದ ತಾವಲ್ಲ, ಅಪ ರೋಕ್ಷ ಜ್ಞಾನಿಗಳಾದ ಈ ಪುರಂದರದಾಸರಲ್ಲ! ಈ ಹಂಡೇಕುರುಬ, ಈ ದಾಸ ಹೋಗಬಲ್ಲನಂತೆ ವೈಕುಂಠಕ್ಕೆ! ಸ್ವಾಮಿಗಳು ಇವನಿಗೆ ಕೊಟ್ಟ ಸಲಿಗೆಯಿಂದ, ಎಲ್ಲರ ಮಾನ ಮರ್ಯಾದೆಯೂ ಸೂರೆಹೋಯಿತು. ಮಠದ ಗೌರವಕ್ಕೂ ಚ್ಯುತಿಬರುವಂತಾಯಿತು" ಎಂಬ ನಿಷ್ಠುರದ ಉದ್ಗಾರಗಳನ್ನೆತ್ತಿದರು. ಆಗ ಸ್ವಾಮಿಗಳು ಹುಸಿನಗೆಯನ್ನು ಪ್ರಕಟಿಸಿ—"ಏನೋ ಕನಕ ಹಾಗೆಂದರೆ?" ಎಂದು ಕೇಳಲು, "ನನ್ನೊಡೆಯಾ, ನಾನು ಯಾರನ್ನೂ ಅವಮಾನಗೊಳಿಸಲಿಲ್ಲ. **ನಾನು** ಎಂಬ ಅಹಂಕಾರ, ಮಮಕಾರಗಳು ಹೋದರೆ ಹೊಗಬಹುದೆಂದೆ!" ಎಂದರು ದಾಸರು. ಆಗ ಎಲ್ಲರೂ ದಾಸರ ಆ ಒಂದು ಸಣ್ಣ ಮಾತಿನಲ್ಲಿ ಅಡಗಿದ್ದ ಅರ್ಥಗಾಂಭೀರ್ಯಕ್ಕಾಗಿ ಮೆಚ್ಚಿ ತಲೆದೂಗಿದರು.

## ಏಕಾಂತ ಸ್ಥಳವಿಲ್ಲ

ಈ ಇಪ್ಪತ್ತನೆಯ ಶತಮಾನದಲ್ಲಿ ದೃಷ್ಟಿಗೋಚರರಾಗಿ ಸಿದ್ಧಿ ಪಡೆದು, ಜಗತ್ಪ್ರಸಿದ್ಧರಾದ ಶ್ರೀ ರಾಮಕೃಷ್ಣಪರಮಹಂಸರಂತೆಯೇ ಕನಕದಾಸರೂ ಶಾಲೆ ಯಲ್ಲಿ ಕಲಿತು ಶಾಸ್ತ್ರಪಾಂಡಿತ್ಯ ಪಡೆದವರಲ್ಲ. ಆದರೆ ಪರಮಹಂಸರು ಕಾಳಿಕಾ

ಮಾತೆಯು ಅನುಗ್ರಹಕ್ಕೆ ಪಾತ್ರರಾದಂತೆ, ದಾಸರೂ ಸಹ ಭಗವಂತನ ಅನುಗ್ರಹಕ್ಕೆ ಪಾತ್ರರಾದ ತತ್ವಜ್ಞಾನಿಗಳು. ತತ್ವನಿರೂಪಣೆಗೆ ಅವರು ಶಾಸ್ತ್ರ ಪಙ್ತಿಗಳನ್ನು ಉದಹರಿಸಿ ಹೇಳಲಾರದಿದ್ದರೂ ತತ್ವವೇ ಮೈಯುಂಡ ಮಹಾ ವ್ಯಕ್ತಿಗಳಾಗಿದ್ದರು. ಒಮ್ಮೆ ಶ್ರೀ ವ್ಯಾಸರಾಯರು ಮಠದಲ್ಲಿದ್ದ ಶಿಷ್ಯವರ್ಗದವರನ್ನೆಲ್ಲ ಕರೆದು, ಒಬ್ಬೊಬ್ಬರಿಗೂ ಎರಡೆರಡು ಬಾಳೆಯಹಣ್ಣುಗಳನ್ನು ಕೊಟ್ಟು, ಇದನ್ನು ಯಾರೂ ಕಾಣದಂತಹ ಏಕಾಂತಸ್ಥಳದಲ್ಲಿ ತಿಂದು ಬನ್ನಿರಿ" ಎಂದು ನುಡಿದು, ಕನಕದಾಸರಿಗೂ ಎರಡು ಹಣ್ಣುಗಳನ್ನು ಕೈಗೆ ಹಾಕಿದರು. ಎಲ್ಲರೂ ಒಡನೆ ಹೊರಟು, ಯಾರೂ ಕಾಣದಂತೆ ಬಾಗಿಲ ಹಿಂದುಗಡೆಯೋ ನದಿಯ ಬಳಿ ನಿರ್ಜನಸ್ಥಳದಲ್ಲೋ, ಖಾಲಿ ಕೋಣೆಯಲ್ಲೋ ತಿಂದು ಬಂದರು. ಆದರೆ ಕನಕದಾಸರು, ಸ್ವಾಮಿಗಳವರ ಮಾತಿನ ಮರ್ಮವನ್ನರಿತು ಏಕಾಂತಸ್ಥಳವನ್ನು ಎಲ್ಲೂ ಕಾಣದೆ, ಆ ಹಣ್ಣುಗಳನ್ನು ತಿನ ದೆ ಹಾಗೆಯೇ ತಂದು ಸ್ವಾಮಿಗಳ ಎದುರಿಗಿಟ್ಟರು. ಸ್ವಾಮಿಗಳು—"ಏನೋ ಕನಕಾ, ನಿನಗೆಲ್ಲೂ ಏಕಾಂತ ಸ್ಥಳ ದೊರಕಲಿಲ್ಲವೇ?" ಎನ್ನಲು, "ಸ್ವಾಮಿಾ, ನನಗೆ ಯಾರೂ ಕಾಣದ ಏಕಾಂತ ಸ್ಥಳ ಎಲ್ಲೂ ದೊರೆಯಲಿಲ್ಲ! ತತ್ವಾಭಿಮಾನಿ ದೇವತೆಗಳಿರದ, ವಾಯು ಸೂರ್ಯ ಚಂದ್ರಾದಿಗಳಿಗೆ ಪ್ರವೇಶವಿಲ್ಲದ, ಸರ್ವಸಾಕ್ಷಿಯೂ ಸರ್ವತ್ರ ವ್ಯಾಪ್ತನೂ ಆದ ಭಗವಂತನು ಕಾಣದ ಏಕಾಂತ ಸ್ಥಳವಾವುದೋ ನಾನು ಕಾಣಲಾರದಾದೆ, ಒಡೆಯಾ!" ಎಂದು ಬಿನ್ನವಿಸಿದರು. ದಾಸರ ಆ ಮಾತನ್ನು ಕೇಳಿದ ಸಕಲ ಶಾಸ್ತ್ರಪಂಡಿತರೂ, ವಿದ್ವಾಂಸರೂ, ಆ ಭಕ್ತವರ್ಯರ ಭಗವನ್ನಿಷ್ಠೆ, ತತ್ವಜ್ಞಾನ ಇವುಗಳಿಗಾಗಿ ಅತ್ಯಾಶ್ಚರ್ಯಪಟ್ಟು ಈ ಎಲ್ಲ ವಿಚಾರಗಳೂ ನಮಗೂ ತಿಳಿದಿದ್ದರೂ ಅನುಭವಕ್ಕೆ ಬರಲಿಲ್ಲವಲ್ಲಾ ಎಂದು ಮರುಗಿ, ಅವರ ಜ್ಞಾನಕ್ಕಾಗಿ ದಾಸರನ್ನು ಶ್ಲಾಘಿಸಿದರು.

### "ಅಂಗೈಯಲ್ಲಿರುವುದೇನು?"

ಕನಕದಾಸರಿಗಿದ್ದ ಅಪರೋಕ್ಷ ಜ್ಞಾನಸಾಮರ್ಥ್ಯವನ್ನು ಪ್ರಕಟಗೊಳಿಸುವ ಮತ್ತೊಂದು ಸಂಗತಿ ಮಠದಲ್ಲಿ ನಡೆಯಿತು. ವ್ಯಾಸರಾಯಸ್ವಾಮಿಗಳು ಒಂದು ದಿನ ಪೂಜಾ ಮಂಗಳಾರತಿಗಳೆಲ್ಲವೂ ಮುಗಿದ ತರುವಾಯ, ತಮ್ಮ ಅಂಗೈಯಲ್ಲಿ ಏನೋ ಇಟ್ಟುಕೊಂಡು ಮುಷ್ಟಿಯಾಗಿ ಮಾಡಿಕೊಂಡು ಸಭಿಕರನ್ನು ನೋಡಿ "ನನ್ನ ಕೈಯಲ್ಲಿರುವುದೇನೆಂದು ಹೇಳಿದವರಿಗೆ ಮೊದಲು ತೀರ್ಥ!" ಎಂದರು. ಎಲ್ಲರೂ ಕೆಲಹೊತ್ತು ನಿಶ್ಶಬ್ದವಾಗಿ ನಿಟ್ಟಿಸುತ್ತಿದ್ದು ಕೊನೆಗೆ ಒಬ್ಬರು ಅಂಗಾರ ವಿದೆಯೆಂದರು. ಮತ್ತೊಬ್ಬರು ತುಲಸೀದಳವಿದೆಯೆಂದರು. ಇನ್ನೊಬ್ಬರು ಉತ್ತತ್ತಿ ಎಂದರು. ಬೇರೊಬ್ಬರು ಗಂಧದ ಗುಳಿಗೆ ಎಂದರು. ಹೀಗೆಲ್ಲ ಹೇಳುತ್ತಿರಲು ಶ್ರೀಗಳವರು ಮಂದಹಾಸವನ್ನು ಬೀರುತ್ತಾ, "ಕನಕಾ ನನ್ನ ಅಂಗೈ

ಯಲ್ಲಿರುವುದೇನೋ?" ಎಂದು ಕೇಳಿದರು. ಆಗಲಾ ಭಕ್ತಶಿರೋಮಣಿಯು ಕ್ಷಣಕಾಲ ಧ್ಯಾನಿಸಿ ನೋಡಿ, ಪ್ರತ್ಯಕ್ಷ ಕಂಡರೋ ಎಂಬಂತೆ.

"ಈತನೀಗ ವಾಸುದೇವನು! ಲೋಕದೊಡೆಯ।
ಈತನೀಗ ವಾಸುದೇವನು ॥
ಈತನೀಗ ವಾಸುದೇವ ಈ ಸಮಸ್ತ ಲೋಕದೊಡೆಯ।
ದಾಸಗೊಲಿದು ತೇರತೇಜಿಗಳನೆ ಪಿಡಿದು ನಡೆಸಿದಾತ ॥"

ಎಂಬ ಕೀರ್ತನೆಯನ್ನು ಹಾಡಿ ಕೈಯಲ್ಲಿರುವುದು ವಾಸುದೇವ ಸಾಲಿಗ್ರಾಮ ಎಂಬರ್ಥವನ್ನು ಸೂಚಿಸಿದರು. ಶ್ರೀಗಳವರು ಮುಷ್ಟಿಯನ್ನು ತೆರೆದು ತೋರಿಸಲಾಗಿ ಶಾಸ್ತ್ರವಿಧಿಗೆ ಅನುಸಾರವಾಗಿದ್ದಷ್ಟು ಚಕ್ರ ಸುಳಿಗಳೊಂದಿಗೆ ಕೂಡಿ ಶೋಭಿಸುತ್ತಿದ್ದ ಶ್ರೀ ವಾಸುದೇವ ಸಾಲಿಗ್ರಾಮವನ್ನು ಕಂಡು ಎಲ್ಲರೂ ಪರಮಾಶ್ಚರ್ಯಪಟ್ಟು ಅವರ ಅದ್ಭುತಜ್ಞಾನ ಸಾಮರ್ಥ್ಯವನ್ನು ಶ್ಲಾಘಿಸಿದರು.

## ಶ್ರೀ ವ್ಯಾಸರಾಜರ ಮಾನಸಪೂಜೆ

ಒಂದಾನೊಂದು ದಿನ ಪ್ರಾತಃಕಾಲ ಶ್ರೀ ವ್ಯಾಸರಾಜರು ಸ್ನಾನಾಹ್ನಿಕಗಳನ್ನು ತೀರಿಸಿಕೊಂಡು ಮಾನಸಪೂಜೆಗೆ ಪ್ರಾರಂಭಿಸಿದ್ದರು. ಆ ವೇಳೆಯಲ್ಲೇ ಹೊರಗೆ ಕುಳಿತು, ಕನಕದಾಸರೂ ಮಾನಸಪೂಜೆಯಲ್ಲಿ ತೊಡಗಿದ್ದರು. ಸ್ವಾಮಿಗಳು ತಮ್ಮ ಹೃದಯಕಮಲದ ದಿವ್ಯಪೀಠದಲ್ಲಿ ಇಷ್ಟದೈವದ ಭವ್ಯಮೂರ್ತಿಯನ್ನು ಸ್ಥಾಪನೆ ಮಾಡಿ, ದಿವ್ಯರತ್ನಾಭರಣ ಕಿರೀಟಕುಂಡಲಾದಿಗಳಿಂದ ಅಲಂಕರಿಸಿ, ತುಲಸೀ–ಪುಷ್ಪಾದಿಗಳಿಂದ ಅರ್ಚಿಸಿದರು. ಅಷ್ಟರಲ್ಲಿ ಸ್ವಾಮಿಗೆ ವೈಜಯಂತೀಮಾಲೆಯನ್ನು ಸಮರ್ಪಿಸಬೇಕೆಂಬ ಭಾವವು ಮನಸ್ಸಿಗೆ ಹೊಳೆಯಿತು. ಅದನ್ನು ಸ್ವಾಮಿಯ ಕಂಠಕ್ಕೆ ಹಾಕಲು, ಅದು ತಲೆಯಮೇಲೆ ಕಿರೀಟವಿದ್ದಂತೆಯೇ ಹಿಡಿಸುವಂತಿರಲಿಲ್ಲ. ಏನು ಮಾಡಬೇಕೆಂದು ಸ್ವಾಮಿಗಳು ಮನಸಾ ಕೈಯಲ್ಲೇ ಮಾಲೆಯನ್ನು ಹಿಡಿದುಕೊಂಡು ಚಿಂತಿಸತೊಡಗಿದರು. ಅಷ್ಟರಲ್ಲಿ ಹೊರಗೆ ಕುಳಿತಿದ್ದ ಕನಕದಾಸರು, "ಮಹಾಪ್ರಭೋ, ಯೋಚಿಸುವುದೇಕೆ? ಸ್ವಾಮಿಯ ಕಿರೀಟ ತೆಗೆದು ಮಾಲೆಯನ್ನು ಸಮರ್ಪಿಸೋಣವಾಗಲಿ!" ಎಂದು ಕೂಗಿ ಹೇಳಿದರು. ತಮ್ಮ ಮನಸ್ಸಿನ ಯೋಚನೆಯನ್ನೂ ಭೇದಿಸಿ ತಿಳಿದ ಕನಕದಾಸರ ಅತಿಮಾನುಷ ಮಹಿಮೆಯು ಶ್ರೀಗಳವರಿಗೆ ಪರಮಾದ್ಭುತವೆನಿಸಿತು.

## ಉಡುಪಿಯಲ್ಲಿ ಶ್ರೀಕೃಷ್ಣಸಂದರ್ಶನ

ಕನಕದಾಸರು ಕನ್ನಡನಾಡಿನ ಸಕಲ ವೈಷ್ಣವಕ್ಷೇತ್ರಗಳನ್ನೂ ಸಂದರ್ಶಿಸುವ ತಮ್ಮ ಸಂಕಲ್ಪದಂತೆ, ಉಡುಪಿಯ ಶ್ರೀಕೃಷ್ಣದರ್ಶನಕ್ಕೂ ಹೋದರು. ಪರ್ಯಾಯ ಶ್ರೀಗಳವರು, ಶ್ರೀಕೃಷ್ಣದೇವಾಲಯದ ಗರ್ಭಗುಡಿಯಲ್ಲಿ ಸ್ವಾಮಿಯ ಪೂಜೆಯಲ್ಲಿ

ನಿರತರಾಗಿದ್ದಾರೆ, ಸಹಸ್ರಾರುಮಂದಿ ಬ್ರಾಹ್ಮಣ ಸುವಾಸಿನಿಯರು ದೇವಾಲಯ ದಲ್ಲಿ ನೆರೆದು ಸಂಭ್ರಮದಿಂದ ಓಡಾಡುತ್ತಿದ್ದಾರೆ. ಅಂತಹ ಸಂಭ್ರಮದಲ್ಲಿ, ಕೊಳಕುಬಟ್ಟೆಯ ಬಡತಿರುಕನಂತಿರುವ ಕನಕದಾಸರನ್ನು ಒಳಕ್ಕೆ ಬಿಡುವವರಾರು? ದಾಸರಿಗೆ ಸ್ವಾಮಿ ಸಂದರ್ಶನಕ್ಕೆ ಅವಕಾಶವೇ ಇಲ್ಲದಂತಾಯಿತು. ಆಗ ಅವರಿಗುಂಟಾದ ಮನದುಬ್ಬಸವನ್ನೂ, ಕಳವಳವನ್ನೂ ವರ್ಣಿಸಲಳವಲ್ಲ! ಆದರೆ ಮಾಡುವುದೇನು? ಆ ದಿನ ಹೇಗಾದರೂ ಸ್ವಾಮಿ ಸಂದರ್ಶನ ಮಾಡಿಯೇ ತೀರಬೇಕೆಂದು ಸಂಕಲ್ಪಮಾಡಿ, ದಾಸರು ಮಹಾದ್ವಾರದಲ್ಲಿ ಹೋಗಿ ನಿಂತರು. ಅಲ್ಲಿದ್ದವರು ಶೂದ್ರನ ನೆರಳು ದೇವರ ಮೇಲೆ ಬೀಳುತ್ತದೆಂದು ಬಾಗಿಲು ಮುಚ್ಚಿಬಿಟ್ಟರು. ಮುಂದೆ ಉಪಾಯ ತೋರದಾಯಿತು, ಆದರೂ ದಾಸರು ಹತಾಶರಾಗದೆ, ಗರ್ಭಗುಡಿಯ ಹಿಂಭಾಗಕ್ಕಿದ್ದ ಕಿಟಕಿಯ ಬಳಿಗೆ ಹೋಗಿ, ಅಲ್ಲಿ ನಿಂತು ಶ್ರೀಕೃಷ್ಣಸ್ವಾಮಿಯನ್ನು—

**ರಾಗ ಕೇದಾರಗೌಳ—ರೂಪಕ ತಾಳ**

**ತೊರೆದು ಜೀವಿಸಬಹುದೆ ಹರಿ ನಿಮ್ಮ ಚರಣಗಳ ।** ॥ ಪ ॥

ಬರಿಯ ಮಾತ್ಯಾಕಿನ್ನು ಕುರಿತು ಪೇಳುವೆನು ॥ ಅನು ॥

ತಾಯಿ ತಂದೆಯನಗಲಿ ತಪವ ಮಾಡಲಿಬಹುದು ।
ದಾಯಾದಿ ಬಂಧುಗಳ ಬಿಡಲಿಬಹುದು ॥
ರಾಯ ಮುನಿದರೆ ಮತ್ತೆ ರಾಜ್ಯವನು ಬಿಡಬಹುದು ।
ಕಾಯಜಪಿತ ನಿನ್ನಡಿಯನರಘಳಿಗೆ ಬಿಡಲಾಗದು ॥ ೧ ॥

ಒಡಲು ಹಸಿಯಲು ಅನ್ನವಿಲ್ಲದಲೆ ಇರಬಹುದು ।
ಪಡೆದ ಕ್ಷೇತ್ರವ ಬಿಟ್ಟು ಹೋಗಬಹುದು ॥
ಮಡದಿ ಮಕ್ಕಳ ಕಡೆಗೆ ತೊಲಗಿಸಿಬಿಡಬಹುದು ।
ಕಡಲೊಡೆಯ ನಿನ್ನಡಿಯನರಘಳಿಗೆ ಬಿಡಲಾಗದು ॥ ೨ ॥

ಪ್ರಾಣವನು ಪರರು ಬೇಡಿದರೆತ್ತಿಕೊಡಬಹುದು ।
ಮಾನದಲಿ ಮನವ ತಗ್ಗಿಸಲಿಬಹುದು ॥
ಪ್ರಾಣನಾಯಕನಾದ ಆದಿಕೇಶವರಾಯ ।
ಜಾಣ ಶ್ರೀಕೃಷ್ಣ ನಿನ್ನಡಿಯ ಬಿಡಲಾಗದು ॥ ॥ ೩ ॥

ಎಂಬ ಪದವನ್ನು ಹಾಡುತ್ತಾ, ತದೇಕಧ್ಯಾನದಿಂದ ಸ್ವಾಮಿಯನ್ನು ಸ್ತುತಿಸತೊಡಗಿದರು. ಆಹಾ, ಅವರ ನಿರ್ಮಲ ಮನೋಭಾವನೆಯೆಂಥಾದ್ದೋ! ಪೂರ್ವಾಭಿಮುಖವಾಗಿ ಸ್ವಾಮಿಗಳಿಗೆ ಎದುರಾಗಿದ್ದು ಪೂಜೆ ತೆಗೆದುಕೊಳ್ಳುತ್ತಿದ್ದ, ಮಂತುಪಾಶಧರ ಶ್ರೀಕೃಷ್ಣಸ್ವಾಮಿಯು ಒಡನೆಯೇ ಪಶ್ಚಿಮಾಭಿಮುಖವಾಗಿ

ಕನಕದಾಸರಿದ್ದ ಕಿಟಕಿಯ ಕಡೆಗೆ ತಿರುಗಿಬಿಟ್ಟನು. ಶ್ರೀವರನ ದಿವ್ಯಮಂಗಳ ವಿಗ್ರಹಕ್ಕೆ ಪರಿಪರಿಯ ಪೂಜಾ ನೈವೇದ್ಯಾದಿಗಳನ್ನು ಸಮರ್ಪಿಸುತ್ತಿದ್ದ ಸ್ವಾಮಿಗಳು, ದೇವರ ವಿಗ್ರಹದ ಮುಂಭಾಗವು ಅದೃಶ್ಯವಾಗಿ, ಹಿಂಭಾಗವು ಕಾಣತೊಡಗಿದು ದನ್ನು ಕಂಡು ಭ್ರಾಂತರಾದರು. ಆಗಲವರು, ಪರಿವಾರದವರಿಂದ ವಿಚಾರ ತಿಳಿದು, ಕನಕದಾಸರ ಭಕ್ತಿ ಭಾಗ್ಯಕ್ಕೆ ಎಣೆಯಿಲ್ಲವೆಂದು ಅವರನ್ನು ಪರಿಪರಿಯಿಂದ ಶ್ಲಾಘಿಸಿದರು. ತಮ್ಮ ಅಗಾಧ–ಅತಿಮಾನುಷ ಮಹಿಮೆಯಿಂದ, ಸ್ವಾಮಿಯ ಶಿಲಾಮೂರ್ತಿಯನ್ನೇ ತಮ್ಮ ಕಡೆಗೆ ತಿರುಗಿಸಿಕೊಂಡು, ಕಣ್ಣುಗಳಲ್ಲಿ ಆನಂದ ಬಾಷ್ಪಗಳನ್ನು ಸುರಿಸುತ್ತಾ, ಮಹದಾನಂದಸ್ವಾಂತರಾಗಿ ಭಜನೆ ಮಾಡುತ್ತಾ ಕುಳಿತಿದ್ದ ಆ ಭಕ್ತವರೇಣ್ಯರನ್ನು ಕಂಡು, ನೆರೆದಿದ್ದ ಸಮಸ್ತ ಜನರೂ ಅವರ ಅಪಾರ ಮಹಿಮೆಗಾಗಿ ಅದ್ಭುತಪಟ್ಟು, ದಾಸರ ಪಾದಗಳಿಗೆ ನಮಿಸಿ ಮನಸಾರೆ ಹೊಗಳಿದರು. ಅಂದಿನಿಂದ ಉಡುಪಿಯಲ್ಲಿ ಶ್ರೀಕೃಷ್ಣದರ್ಶನ ಮಾಡುವವರು, ಪ್ರಾರಂಭಕ್ಕೆ 'ಕನಕನ ಕಿಂಡಿ' ಎಂದು ಹೆಸರಾದ ಆ ಕಿಟಕಿಯ ಮೂಲಕ ಸಂದರ್ಶನಮಾಡಿ, ತರುವಾಯ ಗರ್ಭಗುಡಿಯೊಳಕ್ಕೆ ಹೋಗಿ ನೋಡುವ ರೂಢಿ ಬಿದ್ದು, ಇಂದಿಗೂ ಹಾಗೆಯೇ ನಡೆಯುತ್ತಿದೆ.

### ತಿರುಪತಿಯ ವೇಂಕಟೇಶನ ಕಲ್ಯಾಣಮಹೋತ್ಸವಕ್ಕೆ ಹೋದರು

ಅವರು ತಿರುಪತಿಯ ಶ್ರೀ ವೇಂಕಟೇಶ್ವರ ಸನ್ನಿಧಿಗೆ ಸಂದರ್ಶನವಿತ್ತ ಸಂದರ್ಭದಲ್ಲಿ ನಡೆದ ಒಂದು ವಿಚಿತ್ರವನ್ನು **ಕರ್ಣಾಟಕ ಭಕ್ತ** ವಿಜಯಕಾರರು ವರ್ಣಿಸಿದ್ದಾರೆ. ಕಾಗಿನೆಲೆಯಲ್ಲಿದ್ದ ಕನಕದಾಸರನ್ನು ಶ್ರೀವೇಂಕಟರಮಣ ಸ್ವಾಮಿಯು, "ಕನಕಾ, ನನ್ನ ವಿವಾಹಮಹೋತ್ಸವಕ್ಕೆ ಬಾರೋ!" ಎಂದು ಆಹ್ವಾನಿಸಿದನಂತೆ! ಸ್ವಾಮಿಯ ಕಲ್ಯಾಣಮಹೋತ್ಸವ ಪ್ರತಿವರ್ಷ ವೈಶಾಖ ಶುದ್ಧದಲ್ಲಿ ದಶಮಿಯಂದು ನಡೆಯುವುದು. ದಾಸರು ಹೊರಟರು. ಅತ್ತ ಬೆಟ್ಟದ ಮೇಲೆ ಮಹಂತರಿಗೆ "ನನ್ನ ಭಕ್ತ ಕನಕದಾಸ ಬರುತ್ತಾನೆ. ಆತನನ್ನು ಯೋಗ್ಯ ಗೌರವದಿಂದ ಸ್ವಾಗತಿಸಿರಿ," ಎಂದು ಸ್ವಾಮಿಯ ಅಪ್ಪಣೆಯಾಯಿತು. ಮಹಂತನ ಪರಿವಾರದವರು, ಓಲಗ ತಾಳಮೇಳಗಳು, ದೇವಸ್ಥಾನದ ಬಿರುದು ಬಾವಲಿ ಗಳೊಂದಿಗೆ ಬೆಟ್ಟವನ್ನಿಳಿದು ಬರುತ್ತಿದ್ದಾರೆ. ಭಗವಂತನ ಸಂದೇಶಾನುಸಾರ ಬರುವ ಆ ಭಕ್ತಮಹಾಶಯನು ಹೇಗಿರುವನೋ, ಎಂತಹ ಮಹಿಮಾವಂತನೋ ಎಂದು ಎಲ್ಲರೂ ಕೌತುಕಗೊಂಡಿದ್ದಾರೆ. ದಾಸರು ಎಂದಿನಂತೆಯೇ ತಮ್ಮ ಸಾಧಾರಣ ಉಡಿಗೆ, ಒಂದು ಕಂಬಳಿ, ತಲೆಗೆ ಸುತ್ತಿದ ಒಂದು ವಸ್ತ್ರ, ಕೈಯಲ್ಲೊಂದು ಏಕನಾದ ಇವುಗಳೊಂದಿಗೆ ಗೋವಿಂದರಾಜ ಪಟ್ಟಣದಿಂದ ಹೊರಟು, ಕಪಿಲತೀರ್ಥದಲ್ಲಿ ಸ್ನಾನಮಾಡಿ, ಢಾಳಾಗಿ ತ್ರಿಪುಂಡ್ರಗಳನ್ನು ಧರಿಸಿ, ಬೆಟ್ಟವನ್ನೇರಲು ಹೊರಟಿದ್ದಾರೆ. ನೋಟಕ್ಕೆ ಸಾಮಾನ್ಯ ತಿರುಪೆಗಾರನಂತೆ ಕಾಣುತ್ತಿದ್ದ ಅವರ ವಿಷಯದಲ್ಲಿ ಯಾರ ಲಕ್ಷ್ಯವೂ ಬೀಳಲಿಲ್ಲ. ಮಹಂತನ

ಪರಿವಾರದವರು ಇಳಿದು ಬರುತ್ತಾ, ದಾಸರನ್ನೇ ಕಂಡು, ಅವರ ವಿಷಯದಲ್ಲಿ ಯಾವ ಮಹತ್ವವನ್ನೂ ಕಾಣದೆ, ಅವರನ್ನೂ ದಾಟಿ ಕೆಳಕ್ಕಿಳಿದು ಗಾಳಿಗೋಪುರದ ವರೆಗೂ ಬಂದರು. ಮತ್ತೆ ಕೆಲವರು, ಆ ಕಂಬಳಿಯ ಮನುಷ್ಯನನ್ನು ಕೇಳಿ ನೋಡೋಣ ಎಂದುಕೊಂಡು ಹಿಂದಕ್ಕೆ ಹೋಗಿ "ಏನಯ್ಯಾ, ಯಾರು ನೀನು? ಯಾವ ಊರು ನಿನ್ನದು? ಕನಕದಾಸರು ಎಲ್ಲಿ ಬರುತ್ತಿದ್ದಾರೆ?" ಎಂದು ಕೇಳಿದರು. ಆಗ ದಾಸರು, "ಅಯ್ಯಾ ನನ್ನದು ಯಾವ ಊರೆಂದು ಹೇಳಲಿ? ನಾನಾರೆಂದಾದರೂ ಹೇಗೆ ಹೇಳಲಿ! ದಾಸರು ಹಿಂದೆ ಬರುವವರಿಗೆ ಮುಂದೆ–ಮುಂದೆ ಬಂದವರಿಗೆ ಹಿಂದೆ" ಎಂದು ಉತ್ತರಿಸಿದರು. ಅವರು ಆ ಮಾತಿನ ಅರ್ಥವೇನೆಂದು ತೋರದೆ, ಎಲ್ಲೋ ಹುಚ್ಚುಮನುಷ್ಯ ಎಂದುಕೊಂಡು ಹೊರಟು ಹೋದರು. ದಾಸರು ಬೆಟ್ಟವನ್ನೇರಿ ಹೋಗಿ ದೇವರ ದರ್ಶನಮಾಡಿ, ಆಯಾಸ ದಿಂದ ಕಂಗೆಟ್ಟು, ಎಲ್ಲೋ ಒಂದೆಡೆ ಮಲಗಿಬಿಟ್ಟರು. ಮಹಂತನ ಕಡೆಯವರು ಎಷ್ಟೋ ಹೊತ್ತು ಕಾದುನೋಡಿ, ದಾಸರು ಬರಲಿಲ್ಲವೆಂದುಕೊಂಡು, ಹಿಂದಿರುಗಿ ದರು. ಅತ್ತ ದಾಸರು ಆ ಪರಸ್ಥಳದಲ್ಲಿ ಹೇಳಿಕೇಳುವವರಿಲ್ಲದೆ, ಅನ್ನ ನೀರು ಗಳಿಲ್ಲದೆ ಬಳಲಿ–"ನಿನ್ನ ಮದುವೆಗೆಂದು ಬರಹೇಳಿ, ಇಲ್ಲಿ ನನ್ನನ್ನೇ ಅನ್ನವಿಲ್ಲದೆ ಕೊಲ್ಲುವೆಯಾ?" ಎಂಬರ್ಥದಲ್ಲಿ:

### ರಾಗ ಪಂತುವರಾಳಿ—ಅಟ ತಾಳ

ಬಂದೆವಯ್ಯ ಗೋವಿಂದಶೆಟ್ಟಿ ನಿಮ್ಮ।
ಹರಿವಾಣ ತೀರ್ಥ ಪ್ರಸಾದವುಂಟೆನಲಾಗಿ॥

* * *

ಒಡೆದ ಮಡಕೆಯನೆಲ್ಲ ಆರೆದು ನಾಮನ ಮಾಡಿ।
ಕೊಡುವೆ ನೀ ಕಾಸಿಗೆ ಒಂದೊಂದನು॥
ಒಡಲು ತುಂಬಿ ಮಿಕ್ಕ ಓಗರ ಮಾರಿಸಿ।
ಒಡವೆಯ ಗಳಿಸುವ ಕಡುಲೋಭಿ ಶೆಟ್ಟಿ॥ ॥ ೨ ॥

ಶೇಷಗಿರಿಯಲ್ಲಿ ವಾಸಮಾಡಿಕೊಂಡು।
ದೇಶಕ್ಕೆ ಪ್ರಸಾದ ನಡಿಸುವ ಶೆಟ್ಟಿ॥
ಆಸೆ ಮಾಡಿ ಹಣಕಾಸುಗಳಿಪ ಆದಿ।
ಕೇಶವ ನಾರಾಯಣ ತಿಮ್ಮಶೆಟ್ಟಿ॥ ॥ ೩ ॥

ಎಂಬುದಾಗಿ ದೇವರನ್ನು ಪರಿಹಾಸ್ಯಮಾಡಿ, ನಿಂದಾಸ್ತುತಿಯಿಂದ ಹಾಡಿದರು. ಆಗ ಸ್ವಾಮಿಯು ತಾನೇ ಪಾಚಕನ ವೇಷದಿಂದ ಬಂದು, ಅವರಿಗೆ ದಿವ್ಯ ಮೃಷ್ಟಾನ್ನಭೋಜನ ಮಾಡಿಸಿ, ತಾನು ಹೊದೆಯುವ ದಿವ್ಯ ಪಟ್ಟವಳಿಯ ವಸ್ತ್ರವನ್ನು ಹೊದಿಸಿ, ಆದರಿಸಿದನು.

## ದಾಸರು, ದೇವರನ್ನು ತೋರಿಸಿದ ಪವಾಡ

ಒಂದು ದಿನ ವ್ಯಾಸರಾಯರು, "ಕನಕಾ ನಿನಗೆ ಬೇಕೆಂದಾಗ ದೇವರು ಕಾಣಿಸುವನಂತೆ! ಜನರಿಗೂ ಒಮ್ಮೆ ದೇವರನ್ನು ತೋರಿಸಬಾರದೇನೋ?" ಎಂದರು. "ಆಗಲಿ, ನನ್ನೊಡೆಯಾ, ನಾಳೆ ಪೂಜಾಕಾಲದಲ್ಲಿ ಬರುವಂತೆ ಕೇಳಿಕೊಳ್ಳುತ್ತೇನೆ" ಎಂದು ನುಡಿದರು.

ಮಾರನೆಯ ದಿನ ಮಧ್ಯಾಹ್ನ ಮಠದಲ್ಲಿ ಪೂಜಾಕಾಲ. ಆ ಊರಲ್ಲಿ ಯಾರೂ ಎಂದೂ ನೋಡಿರದ ಒಂದು ದೊಡ್ಡ ಜೂಲುನಾಯಿ ಬಂದು ಮಠವನ್ನು ಹೊಕ್ಕಿತು. ಜನರೆಲ್ಲರೂ–'ಹಚ, ಹಚ, ನಾಯಿ ಒಳಕ್ಕೆ ಬಂತು' ಎಂದು ಕೂಗಿಕೊಂಡರು. ಮಠದ ಪೂಜಾಪರಿವಾರದ ದಿಂಡೆಯರಿಬ್ಬರು, ಬಡಿಗೆಯನ್ನು ತಂದು, ಅದನ್ನು ಆಚೆಗೆ ಹೊಡೆದಟ್ಟಿದರು. ಬಗುಳುತ್ತಾ ಹೊರಕ್ಕೆ ಬರುತ್ತಿದ್ದ ಭೈರವರೂಪೀ ಪರಮಾತ್ಮನನ್ನು ಗುರುತಿಸಿದ ಕನಕದಾಸರು:

"ಜೂಲ್ಬಾಲದ ನಾಯಕರೇ–ನೀವೇನೇನೂಟಾ ಮಾಡಿದಿರಿ?" ಎಂಬ ಪದವನ್ನು ಹಾಡಿ, ಮೈಮೇಲೆ ಕೈಯಾಡಿಸಿ, ಆದರಿಸಿದರು. ಲೀಲಾ ಭೈರವನು, 'ಅಲ್ಲವೋ ಕನಕಾ! ನನ್ನನ್ನು ಬಡಿಗೆಯಿಂದ ಹೊಡೆಸಬೇಕೆಂದು ಎಷ್ಟು ದಿನಗಳಿಂದ. ಕಾದಿದ್ದೆಯೋ?' ಎನ್ನಲು, 'ದೇವಾ, ಕಾಳಗದಲ್ಲಿ ನೀನಂದು ನನಗೆ ಪೆಟ್ಟು ಕೊಡಿಸಿ ಕೆಡಹಿದಂದಿನಿಂದ' ಎಂದರು. ಏಕಾಂತ ಭಕ್ತರಿಗೂ, ಭಗವಾನನಿಗೂ ಇಂತಹ ಲೀಲಾಪ್ರಸಂಗಗಳು ಆಗಾಗ ನಡೆದುದುಪಾಂಡುರಂಗನ ಭಕ್ತರನೇಕರ ಚರಿತ್ರೆಗಳಲ್ಲಿ ಕಂಡುಬರುತ್ತಿವೆ.

ಸ್ವಾಮಿಗಳು "ಏನು ನಿನ್ನ ದೇವರು ಬರಲಿಲ್ಲವಲ್ಲೋ?" ಎಂದರು. "ಬಂದಿದ್ದ ನನ್ನೊಡೆಯಾ! ಮಠದ ಬ್ರಾಹ್ಮಣರು ಬಡಿಗೆಯಿಂದ ಹೊಡೆದಟ್ಟಿದರು" ಎಂದರು ದಾಸರು! "ದೇವರನ್ನು ಹೊಡೆಯುತ್ತಾರೇನೋ!" ಎನ್ನಲು, "ದೇವರು ಭೈರವರೂಪಿನಿಂದ ವೈಲಿಗೆಯಲ್ಲಿ ಬಂದಿದ್ದ. ಅದಕ್ಕೇ ಬಡಿಗೆಯ ಏಟು ಬಿತ್ತು!" ಎಂದರು. "ಹಾಗಾದರೆ ಈ ದಿನ ಮಡಿಯಲ್ಲಿ ಬರಲಿ" ಎಂದರು, ಸ್ವಾಮಿಗಳು. ದಾಸರು ಭಗವಂತನಲ್ಲಿ "ದೇವಾ, ಈ ದಿನ ನೀನು ಮಡಿಯಲ್ಲಿ ಬಂದು ದರ್ಶನಕೊಡು" ಎಂದು ಬೇಡಿದರು.

ಆ ದಿನ ಮಧ್ಯಾಹ್ನ ಪೂಜಾಕಾಲದಲ್ಲಿ, ದೊಡ್ಡದೊಂದು ನಾಗಸರ್ಪವು, ಹೆಬ್ಬಾಗಿಲಿಂದ ಒಳಹೊಕ್ಕು, ಜನರ ಮಧ್ಯದಿಂದ ಸ್ವಾಮಿಗಳಿದ್ದೆಡೆಗೆ ಬರ ತೊಡಗಿತು. ಜನರೆಲ್ಲ ಆಕಸ್ಮಾತ್ತಾಗಿ ಆ ಫಟಸರ್ಪವನ್ನು ಕಂಡು ಬೆದರಿಬಿದ್ದು– "ಅಯ್ಯೋ ಹಾವು ಹಾವು" ಎಂದು ಅತ್ತಿತ್ತ ಓಡಿಹೋದರು. ಸ್ವಾಮಿಗಳು ಮಾತ್ರ ಸಮಾಧಾನದಿಂದ ಕುಳಿತಿದ್ದು, ಹಾವು ಹತ್ತಿರಕ್ಕೆ ಬಂದೊಡನೆಯೇ, ಹೆಡೆಯಮೇಲೆ ಕೈಯಾಡಿಸಿ, ದೊಡ್ಡದೊಂದು ಹರಿವಾಣದಲ್ಲಿ ಹಾಲು ತರಿಸಿ

ಕುಡಿಯಲಿಟ್ಟರು. ಸರ್ಪರೂಪಿನಿಂದ ಬಂದಿದ್ದ ಪರಮಾತ್ಮನು, ಹಾಲು ಕುಡಿದು, ಯಾರಿಗೂ ತೊಂದರೆ ಮಾಡದೆ ಹೊರಟು, ಎಲ್ಲೋ ಅದೃಶ್ಯವಾಗಿ ಹೋಗಿಬಿಟ್ಟಿತು.

ಸಕಲ ಪ್ರಾಣಿಗಳಲ್ಲೂ ಅಂತರ್ಯಾಮಿಯಾಗಿರುವ ದೇವರನ್ನು ಜ್ಞಾನಿಗಳು ಮಾತ್ರ ನೋಡಿ, ತಿಳಿದು ಪೂಜಿಸುವರು.

ಕಾಳಿ, ಚಂಡಿ, ಚಾಮುಂಡಾದಿ ದೇವತೆಗಳಿಗೆ ಪಶುಬಲಿ ಕೊಡುತ್ತಿದ್ದ ತಮ್ಮ ಜಾತಿಯವರಿಗೆ ತಮ್ಮ ಬೋಧನೆಗಳಿಂದ ಪ್ರೇರಿಸಿ, ದಾಸರು ಸಾತ್ವಿಕ ಪೂಜೆ ಮಾಡುವಂತೆ ಸುಧಾರಿಸಿದರು.

ಮಹಾಕವಿಗಳೆನಿಸಿ, ನಳಚರಿತ್ರೆ, ಹರಿಭಕ್ತಿಸಾರ, ಮೋಹನತರಂಗಿಣಿ, ರಾಮಧಾನ್ಯಚರಿತೆ, ತಿರುಕನ ಕನಸು, ನರಸಿಂಹಸ್ತುತಿ ಇತ್ಯಾದಿ ಕವನಗಳನ್ನು ರಚಿಸಿ, ಕನಕದಾಸರು ಪ್ರಾಸಾದಿಕ ಕವಿಗಳೆಂದು ಮಾನ್ಯರಾದರು.

ಬೇಲೂರು ಶ್ರೀ ಕೇಶವಸ್ವಾಮಿಯ ಸನ್ನಿಧಿಯಲ್ಲೂ ವಾಸಿಸಿ, ಹಲವು ಮಹಿಮೆಗಳನ್ನು ಪ್ರಕಟಿಸಿದರು.

## ನಿರ್ಯಾಣ ಪವಾಡ

ಕನಕದಾಸರ ನಿರ್ಯಾಣವೂ ಒಂದು ಪವಾಡವಾಗಿಯೇ ನಡೆದುಹೋಯಿತು.

ತೊಂಭತ್ತು ವರ್ಷಕಾಲ ಜೀವಿಸಿದ್ದರೂ ಸಕಲೇಂದ್ರಿಯ ಪಾಟವದಿಂದ ದೃಢಾಂಗರಾಗಿದ್ದ ದಾಸರು, ತಮ್ಮ ಕೊನೆಗಾಲದಲ್ಲಿ ಕಾಗಿನೆಲೆಯ ಶ್ರೀ ಆದಿಕೇಶವ ಸ್ವಾಮಿಯ ಪಾದದಲ್ಲಿ ತನುಸಮರ್ಪಣೆ ಮಾಡಿದರೆಂದು ಕೆಲವರೂ, ತಿರುಪತಿಯಲ್ಲಿ ಅವರನ್ನು ಕಂಡೆವೆಂದು ಕೆಲವರೂ ಹೇಳುವರು.

ಕರ್ಣಾಟಕ ಭಕ್ತವಿಜಯಕಾರರು ಕನಕದಾಸರ ನಿರ್ಯಾಣ ವಿಚಾರವನ್ನು ಕುರಿತು ಹೀಗೆಂದು ಉಲ್ಲೇಖಿಸಿದ್ದಾರೆ. "ಕನಕದಾಸರು ಪುರಂದರದಾಸರ ತಂಬೂರಿಯನ್ನು ತಿರುಪತಿಯ ಭಂಡಾರದಲ್ಲಿಟ್ಟರು, ತಮ್ಮ ಏಕತಾರೆಯನ್ನೂ ದಂಡವನ್ನೂ ವೇಂಕಟಪತಿಯ ಗರ್ಭಗೃಹ ಪ್ರವೇಶಮಾಡುವ ದ್ವಾರದ ಮೇಲ್ಭಾಗ ದಲ್ಲಿ ಬಂಧಿಸಿದರು. ವ್ಯಾಸರಾಯ ಗುರುಗಳಿಗೆ ನಮೋ ಎಂದರು, ಪುರಂದರ ದಾಸರ ಪಾದವೇ ಗತಿಯೆಂದರು, ದೇವರ ಸೇವೆಗೆಂದು ಒಳಗೆ ಪ್ರವೇಶಮಾಡಿದರು.

ಮಹಂತರು ಬಲು ಹೊತ್ತಾದರೂ ದಾಸರು ಏಕಾಂತಸೇವೆಯಿಂದ ಹೊರಗೆ ಬರಲಿಲ್ಲವೆಂದು ತೆರೆಯನ್ನು ತೆರೆದರು, ಗರ್ಭಗುಡಿಯಲ್ಲಿ ಕನಕದಾಸರು ಕಾಣಿಸಲಿಲ್ಲ."

ಹೀಗೆ ಅತಿಮಾನುಷ ರೀತಿಯಿಂದ ಅದೃಶ್ಯರಾದ ಮಹಾಮಹಿಮರು ಶ್ರೀ ಕನಕದಾಸರು.

# ಕನಕದಾಸರು ಚಿತ್ರಿಸಿದ ಜನಜೀವನ

**ಶ್ರೀ ಬೆಟಗೇರಿ ಕೃಷ್ಣಶರ್ಮ, ಧಾರವಾಡ**

ಪುರಾಣಪುರುಷರ ಪವಾಡಗಳನ್ನೂ ಮತತತ್ತ್ವಗಳ ಸಾಧನೆ–ಆಚಾರಗಳ ವಿಷಯವನ್ನೂ ಹೇಳಲು ಹೊರಟ ಪ್ರಾಚೀನ ಕನ್ನಡಸಾಹಿತ್ಯದಲ್ಲಿ, ಆ ಆ ಕಾಲದ ಜನಜೀವನದ ವಾಸ್ತವಸ್ವರೂಪ ಮೂಡಿ ನಿಂತುದು ಅಪೂರ್ವವೆಂದೇ ಹೇಳಬಹುದು. ಕೆಲವು ಜನ ಕವಿಗಳ ಕೃತಿಗಳಲ್ಲಿ—ಅಲ್ಲಿ ಇಲ್ಲಿ—ಅಲ್ಪಸ್ವಲ್ಪ—ಜನಜೀವನಚಿತ್ರದ ಗುರುತುಗಳು ಕಾಣಬಹುದಾದರೂ, ಅವು ಕೂಡ ಶೈಲಿಯ ರಂಜಕತೆ, ಅರ್ಥಾಲಂಕಾರ, ಕವಿಸಮಯಗಳ ಬಲೆಯಲ್ಲಿ ಸಿಕ್ಕಿಕೊಂಡು, ತಮ್ಮ ವಾಸ್ತವಸ್ವರೂಪವನ್ನು ಕಳೆದುಕೊಂಡಿವೆ. ದೇಶಿ-ಮಾರ್ಗಗಳ ಸಮನ್ವಯರೀತಿಯಲ್ಲಿ ಕೃತಿಯನ್ನು ರಚಿಸುವೆವೆಂದು ಪ್ರತಿಜ್ಞೆ ಮಾಡಿ ಹೊರಟ ಅನೇಕ ಜನ ಕನ್ನಡ ಮಹಾಕವಿಗಳು, ಭಾಷೆಯ ದೃಷ್ಟಿಯಿಂದ ತಮ್ಮ ಪ್ರತಿಜ್ಞೆಯನ್ನು ಪೂರಯಿಸಿರುವರಲ್ಲದೆ, ಜನಜೀವನದ ವಾಸ್ತವದೃಷ್ಟಿಯಿಂದಲ್ಲ. ಆದರೆ ಕವಿ ಕನಕದಾಸರು ಈ ಸಂಪ್ರದಾಯ ನಿಯಮಕ್ಕೆ ಅಪವಾದದಂತಿದ್ದಾರೆ. ಅವರು ತಮ್ಮದೊಂದು ವರ್ಣಕಕೃತಿಯಲ್ಲಿ ಸಮಕಾಲೀನ ಕನ್ನಡಿಗರ ಜನಜೀವನದ ವಿವಿಧ ಚಿತ್ರಗಳನ್ನು, ವಾಸ್ತವಮಾರ್ಗದವರಾಗಿಯೇ ರೇಖಿಸಿದ್ದಾರೆ. ಅವರ ಈ ಸಾಹಿತ್ಯರಚನಾ ಕಾರ್ಯ, ಕನ್ನಡ ಸಾಹಿತ್ಯಪ್ರಪಂಚದಲ್ಲಿ ಅವರ ವ್ಯಕ್ತಿವೈಶಿಷ್ಟ್ಯವನ್ನು ಮೆರೆಯಿಸುವಂತಹುದಾಗಿದೆ.

ಕನಕದಾಸರು ಇಂದು ಬಹುಜನರಿಗೆ ಪರಿಚಿತರಾಗಿದ್ದುದು ಹರಿದಾಸರೆಂದು; ಹರಿದಾಸೋಚಿತ ಭಕ್ತಿಗೀತಗಳ ಕರ್ತೃಗಳೆಂದು—ಕನಕದಾಸರ ಭಕ್ತಿಗೀತಗಳನ್ನು ಹಾಡುವವರನ್ನು ನಮ್ಮ ನಾಡಿನಲ್ಲಿ ಎಲ್ಲಕಡೆಗೂ ಕಾಣಬಹುದು. ಕನ್ನಡ ಹರಿದಾಸಪರಂಪರೆಯಲ್ಲಿಯೂ ಅವರಿಗೆ ಮೇಲಿನ ಸ್ಥಾನ ದೊರೆತು '**ಯಮಧರ್ಮಾಂಶರು**' '**ತುಂಬುರನ ಅವತಾರಿಗಳು**' ಎಂಬ ಮನ್ನಣೆಗೆ ಪಾತ್ರರಾದುದು, ಅವರ ಭಕ್ತಿಗೀತಗಳ ಪ್ರಭಾವದಿಂದಲೇ ಹೊರತು, ವೈಶಿಷ್ಟ್ಯಪೂರ್ಣವಾದ ಅವರ ವರ್ಣಕಕಾವ್ಯಗಳ ಕಾರಣದಿಂದ ಅಲ್ಲ. ಕನಕದಾಸರ ಸಾಹಿತ್ಯವನ್ನು ಕ[illegible]ಂಕಷವಾಗಿ ಅಭ್ಯಾಸಮಾಡಿದವರಿಗೆ, ಮೊದಲು ಕವಿಯಾಗಿದ್ದ ಕನಕ, ಆಮೇಲೆ ಹರಿದಾಸದೀಕ್ಷೆ ಪಡೆದು ಭಕ್ತಕವಿಯಾಗಿದ್ದಾನೆಂಬ ಸಂಗತಿಯು ಮನವರಿಕೆಯಾಗದಿರದು.

'**ನಳಚರಿತ್ರೆ**' '**ರಾಮಧಾನ್ಯಚರಿತೆ**' '**ಹರಿಭಕ್ತಿಸಾರ**' ಈ ಕೃತಿಗಳು ಕನಕದಾಸರ ಪೂರ್ವಜೀವನದ ಕೃತಿಗಳಾಗಿರಬಹುದು. ಏಕೆಂದರೆ ಇವುಗಳಲ್ಲಿ 'ಕಾಗಿನೆಲೆಯ ಕನಕದಾಸನ' ಹೆಸರು ಎಲ್ಲಿಯೂ ಕಂಡುಬರುವುದಿಲ್ಲ. 'ಕಾಗಿನೆಲೆಯ ಆದಿಕೇಶವನ' ಅಂಕಿತವೂ ಕಂಡುಬರುವುದಿಲ್ಲ. '**ವರಪುರದ**

**ಚೆನ್ನಿಗರಾಯ' 'ವರಪುರದ ಚೆನ್ನಕೇಶವ' 'ವರಪುರದ ರಾಯಕೇಶವ'** ಎಂಬ ಅಂಕಿತಗಳು ಕಂಡುಬರುತ್ತವೆ; ಕವಿಯ ನಾಮನಿರ್ದೇಶ ಇಲ್ಲವೇ ಇಲ್ಲ. ಇವು ಕನಕದಾಸರ ಕೃತಿಗಳೆಂದು ಉಲ್ಲಿಖಿತ ಪರಂಪರೆಯಿರುವುದರಿಂದ, ನಾವೂ ಅದನ್ನು ಒಪ್ಪಿಕೊಳ್ಳಬೇಕು—ಇಷ್ಟೆ; ಈ ಕೃತಿಗಳಲ್ಲಿ ಕಂಡುಬರುವ **'ವರಪುರ'** ಯಾವುದೆಂಬುದನ್ನು ಖಂಡಿತವಾಗಿ ಹೇಳುವುದು ಕಷ್ಟ. ಕನಕದಾಸರ ಮೂಲ ಸ್ಥಳವಾದ **'ಬಾಡ'**ವೂ ಇರಬಹುದು; ಆಮೇಲಿನ ಅವರ ಸಾಧನ ಕ್ಷೇತ್ರವಾದ **'ಕಾಗಿನೆಲೆಯೂ'** ಇರಬಹುದು. ಕಾಗಿನೆಲೆಯಿಂದ ೧॥–೨ ಮೈಲುಗಳ ಅಂತರದ ಮೇಲೆ, ಕನಕದಾಸರ ಉಪಾಸನೆಗೆ ಸಂಬಂಧಿಸಿದುದೆಂದು ಹೇಳುವ **'ಚೆನ್ನಕೇಶವಸ್ವಾಮಿ'** ಯ ಗುಡಿಯೊಂದು ಇದೆ. ಇಲ್ಲಿ ಹೇಳಿದ ಕೃತಿಗಳಲ್ಲಿ ಅಂಕಿತಗೊಂಡಿರುವ 'ಚೆನ್ನಿಗರಾಯ' 'ಚೆನ್ನಕೇಶವ' ಎಂಬ ಪದಗಳನ್ನು ನೋಡಿದರೆ, ಕಾಗಿನೆಲೆಯ ಆದಿಕೇಶವ ಆಮೇಲೆ ಕನಕದಾಸರ ಉಪಾಸ್ಯದೈವತವಾಗಿರಬಹುದೆಂದು ಊಹಿಸುವಂತಿದೆ. ಕಾಗಿನೆಲೆಯ ಭಾಗದಲ್ಲಿ ಪ್ರಚಾರದಲ್ಲಿರುವ ಲೋಕಕಥೆಯನ್ನು ನಂಬುವುದಾದರೆ, ಕಾಗಿನೆಲೆಯಲ್ಲಿ ಆದಿ ಕೇಶವನ ಮೂರ್ತಿಯನ್ನು ಪ್ರತಿಷ್ಠೆಮಾಡಿದವರು ಕನಕದಾಸರೇ—ಎಂಬುದನ್ನು ಒಪ್ಪಿಕೊಳ್ಳಬೇಕಾಗುತ್ತದೆ.

ಕನಕದಾಸರ ಕೆಲವು ಭಕ್ತಿಗೀತಗಳಲ್ಲಿ **'ಬಾಡದಾದಿ ಕೇಶವ'** ಎಂದೂ, ಇನ್ನು ಕೆಲವು ಗೀತಗಳಲ್ಲಿ **'ಕಾಗಿನೆಲೆಯ ಆದಿಕೇಶವ'** ಎಂದೂ ಬೇರೆ ಬೇರೆ ಅಂಕಿತಗಳನ್ನು ನಾವು ಕಾಣುವೆವು. ಇದರಿಂದ ಒಂದು ಮಾತನ್ನು ನಾವು ಭಾವಿಸಬಹುದು; 'ಬಾಡದಾದಿಕೇಶವ' ಎಂಬ ಅಂಕಿತದ ಭಕ್ತಿಗೀತಗಳು ಅವರ ಮೊದಲಕೃತಿಗಳಾಗಿರಬಹುದು; 'ಕಾಗಿನೆಲೆಯಾದಿಕೇಶವ' ಎಂಬ ಅಂಕಿತ ವನ್ನೊಳಗೊಂಡ ಭಕ್ತಿಗೀತಗಳು ತರುವಾಯದ ಕೃತಿಗಳಾಗಿರಬಹುದು. ಏಕೆಂದರೆ ಕನಕದಾಸರು ತಮ್ಮ ಜೀವನದ ಕೊನೆಯಭಾಗವನ್ನು ಕಾಗಿನೆಲೆಯಲ್ಲಿಯೇ ಕಳೆದರೆಂಬುದಕ್ಕೆ ಅನೇಕ ಲೋಕಕಥೆಗಳ ಪ್ರಮಾಣಗಳಿವೆ; ಅಲ್ಲದೆ ದಾಸದೀಕ್ಷೆ ಯನ್ನು ಪಡೆದಮೇಲೆ ಬರೆದಿರಬಹುದಾದ **'ಮೋಹನತರಂಗಿಣಿ'** ಎಂಬ ದೀರ್ಘವಾದ ವರ್ಣಕಕೃತಿಯಲ್ಲಿ:

**"ಕೃತಿಯಕೇಳ್ದ ಕನಕದಾಸೋತ್ತಮ ಕೇಳ್ದವ ।**
**ಳತಿ ಸುಜ್ಞಾನವಧೂಟಿ ॥**
**ಕೃತಿಗೆ ಕರ್ತನು ಕಾಗಿನೆಲೆಯಾದಿಕೇಶವ ।**
**ಕೃತಿಕೇಳ್ದರೆ ಪುಣ್ಯವಹುದು ॥"** (ಸಂಧಿ ೨, ಪದ್ಯ ೧)

ಎಂದು—ಕೃತಿಕಾರನೆಂದು ತಮ್ಮ ಹೆಸರನ್ನೂ, ಕೃತಿಯ ದೈವತ ಕಾಗಿನೆಲೆಯ ಆದಿಕೇಶವನೆಂಬುದನ್ನೂ ಕವಿ ಸ್ಪಷ್ಟವಾಗಿ ಹೇಳಿದ್ದಾನೆ. ಅಲ್ಲದೆ ಕಾಗಿನೆಲೆಯ



ಕಾಗಿನೆಲೆಯಲ್ಲಿರುವ ಶ್ರೀನರಸಿಂಹಸ್ವಾಮಿ



ಕಾಗಿನೆಲೆಯಲ್ಲಿರುವ ಶ್ರೀನರಸಿಂಹಸ್ವಾಮಿ ಉತ್ಸವಮೂರ್ತಿ

ಆದಿಕೇಶವನ ಹೆಸರು ಸಂಧಿಸಂಧಿಯಲ್ಲಿಯೂ ಕಾಣುವುದು. ಕನಕದಾಸರ ನಾಮನಿರ್ದೇಶವೂ ಅನೇಕ ಕಡೆಗಿದೆ.

**'ಮೋಹನತರಂಗಿಣಿ'** ಕಾವ್ಯದ ಕಥಾವಸ್ತು ಸಂಪೂರ್ಣವಾಗಿ ಪೌರಾಣಿಕ. ಭಾಗವತ, 'ಹರಿವಂಶ' ಪುರಾಣಗಳಲ್ಲಿ ಅಡಕವಾದ ಕಥಾಭಾಗವದು:

> " ಪೂಸರದಹನ ಕಾಮೋತ್ಪತ್ತಿ ವರಶಂಬ ।
> ರಾಸುರವಧೆ, ಕಂತುಸುತನ ॥
> ಭಾಸುರಲೀಲೆ ಬಾಣನಗಿದ್ದ ಜಯಲ-।
> ಕ್ಷ್ಮೀಶನ ಕೃತಿಯ ವರ್ಣಿಪೆನು ॥ "

ಎಂದು ಕೃತಿಸಂಕಲ್ಪವಚನಗಳನ್ನು ಪ್ರಾರಂಭದಲ್ಲಿಯೆ ಹೇಳಿದ ಕನಕದಾಸರು, ತಮ್ಮ ಸಂಕಲ್ಪಾನುಸಾರವಾಗಿ ಕಾವ್ಯವನ್ನು ಕೊನೆಗೊಳಿಸುವಲ್ಲಿ ಯಶಸ್ವಿಗಳಾಗಿದ್ದಾರೆ. ಕಾವ್ಯದುದ್ದಕ್ಕೂ ತಮ್ಮ ವ್ಯಕ್ತಿತ್ವವನ್ನು ಪ್ರಕಟಿಸಿದ್ದಾರೆ. ಕನ್ನಡದಲ್ಲಿ ಈ ಮಾದರಿಯ ಚಿತ್ರಕಕಾವ್ಯ ಇನ್ನೊಂದಿಲ್ಲ—ಎನ್ನುವಂತಿದೆ ಮೋಹನತರಂಗಿಣಿ. 'ಕೇಳ್ವರಿಗಿದು ತನಿಬೆಲ್ಲದಚ್ಚು' ಎಂದು ಕವಿಯು ಆತ್ಮವಿಶ್ವಾಸದಿಂದ ಹೇಳಿದ ಮಾತಿನ ಸತ್ಯತೆ ಈ ಕೃತಿಯ ಪುಟಪುಟದಲ್ಲಿಯೂ ಅಭಿವ್ಯಕ್ತವಾಗಿರುವುದು.

**'ಮೋಹನತರಂಗಿಣಿ'** ಒಂದು ಹೃದಯಸ್ಪರ್ಶಿಯೆನಿಸುವಂತಹ ವರ್ಣಕ ಕಾವ್ಯ. ಕರ್ಮಠ ಪಂಡಿತವರ್ಗ ಈ ಕೃತಿರೀತಿಯನ್ನು ಒಪ್ಪದಿರಬಹುದಾದರೂ ಸಹೃದಯರಾದ ಪಂಡಿತ-ಪಾಮರಸಮೂಹದ ಮನಸ್ಸನ್ನು ಇದು ಆಕರ್ಷಿಸದೆ ಬಿಡದು. ಇದಕ್ಕೆ ಕಾರಣವೇನೆಂಬುದಕ್ಕೆ ಕವಿಯ ಈ ವಚನಗಳನ್ನೇ ನೋಡಿಕೊಳ್ಳಬೇಕು:

> **" ನಾಡೊಳಗುಳ್ಳ ಜಾಣರು ಜಾಣೆಯರೊಡ ।**
> **ನಾಡುವ ಸವಿಮಾತುಗಳ ॥**
> **ಪಾಡುಗಬ್ಬವ ಪರುಠನಿಸಿದ ಬಗೆಯನೀ ।**
> **ನೋಡು ಮಾನಿನಿ ಮುಂದೆಮುಂದೆ ॥ "**

ತಿರುಳ್ಗನ್ನಡ ನಾಡಿನಲ್ಲಿ ಹುಟ್ಟಿಬೆಳೆದು, ಕನ್ನಡಿಗರ ನಡೆನುಡಿಗಳನ್ನು ಕಣ್ಣಾರೆ ಕಂಡ ಕನಕದಾಸರು, ತಮ್ಮ ಕಾವ್ಯವನ್ನು ಎಲ್ಲರೂ ಆಡುವ ಭಾಷೆಯಲ್ಲಿ ಬರೆದಿದ್ದಾರೆ. ಇದರಲ್ಲಿ ಕಾಣುವ ಪಡೆನುಡಿ, ನಾಣ್ನುಡಿ, ನುಡಿಯ ನಡಿಗೆ, ನಗೆಮಾತು, ಅಲಂಕಾರ ಎಲ್ಲವೂ ಕನ್ನಡ ಜಾನಪದದ ಬಳಕೆಯವಾಗಿವೆ. ಎಂತಲೇ ಕೃತಿಯನ್ನು ಮನವಿಟ್ಟು ಕೇಳುವ **'ಸುಜ್ಞಾನವಧೂಟಿ'** ಎಲ್ಲರ ಪ್ರತಿನಿಧಿಯಾಗಿ ಕಾವ್ಯದ ಪ್ರಸಾದಗುಣವನ್ನು ಹೀಗೆ ಹೊಗಳಿ ಹಾಡಿರುವಳು:

> **" ವಾಣಿಯ ಧವನೆಂಬ ವ್ಯವಹಾರಿ ಪಟ್ಟಿಯ ।**
> **ಗೋಣಿಯೊಳ್ ತುಂಬಿದ ರತ್ನ ॥**
> **ಓಣಿಯೊಳ್ ಚೆಲ್ಲಿದಂತಿದೆ ನಿನ್ನ ಕೃತಿಯೆಂಬ ।**
> **ಮಾಣಿಕ ಮನ್ಮನೋನಾಥ ॥ "**

'ಪಟ್ಟೆಯ ಗೋಣಿಯೊಳ್ ತಂಬಿದ ರತ್ನ ಓಣಿಯೊಳ್ ಚೆಲ್ಲಿದಂತಿದೆ!' ಪಂಡಿತ ಪಾಮರರೆನ್ನದೆ ಎಲ್ಲ ರಸಿಕರೂ ಈ ಕೃತಿರತ್ನದ ಪ್ರಯೋಜನವನ್ನು ಪಡೆಯುವಂತಿದೆ. ವಸ್ತುಕಕಾವ್ಯಗಳ ದುರ್ಬೋಧತೆಯನ್ನೂ ಬಹುಜನರಿಗೆ ಅವು ನಿಷ್ಪ್ರಯೋಜಕವಾಗಿರುವುದನ್ನೂ ಚೆನ್ನಾಗಿ ಅರಿತ ಕನಕದಾಸರು, ರಸಿಕ ವಿಮರ್ಶಕಳಾದ ತಮ್ಮ ಪ್ರೇಯಸಿಯಿಂದ, ಕಾವ್ಯರೀತಿಯ ವಿಷಯಕವಾದ ತಮ್ಮ ಮನದ ಇಂಗಿತವನ್ನು ಹೀಗೆ ಆಡಿಸಿದ್ದಾರೆ:

"ಮೂಣದೆ ಅರಸುವಂತೆ ಮಾಡದಿರಧಿಕ ಸು ।
ಜಾಣರ ಜ್ಞಾನಲೋಚನಕೆ ॥
ಕಾಣಬರ್ಪಂತ ಕನ್ನಡವಾಕ್ಯದೆ ನೆರೆ ।
ಜಾಣ ಸತ್ಕೃತಿಯ ವಿಸ್ತರಿಸು ॥"

ಕಾವ್ಯದ ಕಥಾವಸ್ತು ದ್ವಾಪರಯುಗದಲ್ಲಿ ನಡೆದುದು; ಸೌರಾಷ್ಟ್ರ ದೇಶದಲ್ಲಿಯ ದ್ವಾರಕೆಯ ಶ್ರೀಕೃಷ್ಣನ ಜೀವನವನ್ನು ಒಳಗೊಂಡುದು. ಆದರೆ ಕಾವ್ಯದಲ್ಲಿ ಚಿತ್ರಿತವಾದ ದೇಶ-ಕಾಲಗಳ ವರ್ಣನೆಗಳು, ಕನಕದಾಸರ ದೇಶ-ಕಾಲಗಳನ್ನೇ ಪ್ರತಿಬಿಂಬಿಸಿ ತೋರಿಸುವಂತಿರುವುವು. ಶ್ರೀಕೃಷ್ಣನೂ ಅವನ ಪರಿವಾರ-ಪರಿಜನರೂ ನಮಗೆ ದ್ವಾಪರಯುಗದ ದ್ವಾರಕೆಯವರಾಗಿ ಕಾಣದೆ, ಕನಕದಾಸರ ಕಾಲದ ಕನ್ನಡರಾಯ, ಅವನ ಪರಿವಾರ-ಪರಿಜನರಾಗಿ ಕಾಣುವರು.

ಕನಕದಾಸರು ಹುಟ್ಟಬೆಳೆದ ಕಾಲವೆಂದರೆ ಕ್ರಿ.ಶ. ಸುಮಾರು ೧೫ನೆಯ ಶತಮಾನದ ಕೊನೆಯ ದಶಕದಿಂದ ೧೬ನೆಯ ಶತಮಾನದ ೮ನೆಯ ದಶಕದ ವರೆಗಿನ ಅವಧಿ. ಈ ಅವಧಿಯಲ್ಲಿ ವಿಜಯನಗರ ಸಾಮ್ರಾಜ್ಯದ ಅತ್ಯುನ್ನತಾವಸ್ಥೆ, ಪತನ ಎರಡೂ ಆಗಿವೆ. ದೀರ್ಘಕಾಲ ಬದುಕಿದ ಕನಕದಾಸರು ಎರಡನ್ನೂ ಕಣ್ಣಾರೆ ಕಂಡಿರಬಹುದಾಗಿದೆ. ಕನಕದಾಸರು ತಮ್ಮ ಈ ಕಾವ್ಯವನ್ನು ವಿಜಯನಗರ ಸಾಮ್ರಾಜ್ಯದ ಅತ್ಯುತ್ಕರ್ಷಕಾಲದಲ್ಲಿಯೇ ರಚಿಸಿರುವರೆಂದು ಹೇಳಬಹುದು. ಏಕೆಂದರೆ, ಕಾವ್ಯನಾಯಕ ಶ್ರೀಕೃಷ್ಣನ ರಾಜಧಾನಿ ದ್ವಾರಕೆಯು, ವಿಜಯನಗರದ ಸ್ವರೂಪವನ್ನು ಪಡೆದಿದೆ; ಪೌರಾಣಿಕ ಶ್ರೀಕೃಷ್ಣ, ವಿಜಯನಗರದ ಕೃಷ್ಣದೇವರಾಯ—ಇವರಲ್ಲಿ ಗುಣ-ಸ್ವಭಾವಗಳ ಸಮತೆ ಕಂಡುಬರುತ್ತದೆ.

ಸಾಂಪ್ರದಾಯಿಕ ಕಾವ್ಯಗಳಂತೆ, ಈ ಕವಿಯೂ ತನ್ನ ಕೃತಿಯನ್ನು ಸಮುದ್ರ, ಮೇರುಪರ್ವತ, ಅದರ ದಕ್ಷಿಣಭಾಗದ ದೇಶಗಳು,—ಇವುಗಳ ವಿವರಣೆಯಿಂದಲೇ ಪ್ರಾರಂಭಮಾಡುತ್ತಾನೆ. ಆದರೆ ಇವಗಳ ವರ್ಣನೆಯ ರೀತಿಯಲ್ಲಿ ರಂಜಕತೆಗಿಂತ ಹೆಚ್ಚಾಗಿ ವಾಸ್ತವತೆಯೇ ಮೂಡಿ ನಿಂತಿರುವುದು. ಕಡಲ ತೆರೆಗಳ ಚಿತ್ರಣವಿದು:

"ಹೊದ್ದಿರಲೂರ್ವಿಯ ಹೆರಸಾರು-ಸಾರೆಂದು ।
ಬುದ್ಧಿಗಲಿಸಿ ಕೇಳದಿರಲು ॥
ಗದ್ದಿಸಿ ತೆರೆಗೆಯ್ಗಳಿಂದ ತಾಡಿಸುವಂತೆ ।
ಗುದ್ದಿತು ಜಲನಿಧಿ ತಟವ ॥"

ಈ ಬಗೆಯ ಬಣ್ಣನೆ ಇನ್ನೆಲ್ಲಿಯಾದರೂ ದೊರೆಯುವುದೆ? ಮೇರು ಪರ್ವತವು ಈ ಕವಿಯ ಕಣ್ಣಿಗೆ ಹೇಗೆ ಕಂಡಿದೆ ಗೊತ್ತೇ?

"ಎಂಬತ್ತುನಾಲ್ಕು ಲಕ್ಷದ ಜೀವರುಗಳೆಂ ।
ದೆಂಬ ಬೀಜವ ಸೃಷ್ಟಿಕರ್ತ ॥
ಮುಂಬೆಳಸಿಗೆ ಪಣತವ ಕಟ್ಟಿದಂದದಿ ।
ಪೊಂಬೆಟ್ಟ ಕಣ್ಗೆ ರಂಜಿಸಿತು ॥"

ಮಲೆನಾಡಿನಲ್ಲಿ ಹುಟ್ಟಿ ಬೆಳೆದ ಕವಿ, ಅಲ್ಲಿ ಮನೆ-ಮನೆಯಲ್ಲಿಯೂ 'ಪಣತ' ಕಟ್ಟಿ, ಮುಂದಿನ ಬೆಳೆಗಾಗಿ ಬತ್ತದ ಬೀಜಗಳನ್ನು ಸಂಗ್ರಹಿಸಿ ಇಟ್ಟಿರುವುದನ್ನು ಚೆನ್ನಾಗಿ ನೋಡಿದವನಾಗಿದ್ದಾನೆ.

ದೇಶದಲ್ಲಿ ಎಲ್ಲಿ ನೋಡಿದಲ್ಲೆಲ್ಲ ಗ್ರಾಮ, ನಗರ, ಪಟ್ಟಣ, ಖೇಡ, ಖರ್ವಡ, ಪುರ ಮೊದಲಾದ ಜನವಸತಿಯ ಊರುಗಳಲ್ಲದೆ 'ಬೀಳುವಳ್ಳಿಗಳು' ಇರಲಿಲ್ಲ. ನದಿಯ ದಂಡೆಯಲ್ಲಿ ಷಡ್ದರ್ಶನಾಚಾರ್ಯರು ವಾಸಿಸುತ್ತಿರುವ '**ಅಗ್ರಹಾರ**'ಗಳೂ, ಮನ್ನೆಯರು ಇರುವ '**ವೀರಮಾನ್ಯ**' ಪುರಗಳೂ ಇದ್ದವು. ಯಾವುದೇ ಗ್ರಾಮ, ಉಪಗ್ರಾಮಗಳಲ್ಲಿ ನೋಡಿದರೂ ಹರಿ-ಹರರ ದೇವಾಲಯಗಳಿರುವುವು; ಅನೇಕ ಅತಿಥಿ-ಅಭ್ಯಾಗತರಿಂದ ತುಂಬಿದ ಅನ್ನಸತ್ರಗಳಿರುವುವು. ಅವುಗಳ ಬಳಿಯಲ್ಲಿಯೇ ತಿಳಿನೀರಿನಿಂದ ತುಂಬಿದ ಕೊಳಗಳಿರುವುವು.

"ಸಮಯನಿಷ್ಠರು ಉನ್ನತಕೀರ್ತಿವಿದರು ವಿ ।
ಕ್ರಮವಿದ್ಯಾ ಭಾಗ್ಯಾಧಿಕರು ॥
ಸುಮತಿಗಳು ಅಭವಾಚ್ಯುತ ಭಜಕರು ಸಂ ।
ಭ್ರಮದಿ ವರ್ತಿಸುವರೆಲ್ಲೆಡೆಯು ॥"

ದಾರಿ-ದಾರಿಗಳ ಇಬ್ಬದಿಯಲ್ಲಿಯೂ ಸಾಲುಮರಗಳು. ಕೆರೆಬಾವಿಗಳು ಇಲ್ಲದ 'ಅಗ್ಗಡದೆಡೆ' ಗಳಲ್ಲಿ, ಕಾವಡಿಗಳಲ್ಲಿ ನೀರುತಂದು ಹನಿಸುವ ಅರವಟ್ಟಿಗೆಗಳಿರುವುವು. ನೆರಳಿಗಾಗಿ ಅರವಟ್ಟಿಗೆಗಳ ಬಳಿಯಲ್ಲಿಯೇ ಧರ್ಮಧ್ವಜಗಳನ್ನು ಕಟ್ಟಿಕೊಂಡು ನಿಂತ 'ನರಾಶ್ರಯ ಮಠ'ಗಳಿರುವುವು. ಶೀಲವಂತರಾದ ಶ್ರೀವೈಷ್ಣವರು ಅಲ್ಲಲ್ಲಿ ಏಕಾಂತಕುಟೀರಗಳಲ್ಲಿ ತಾವೇ ಅಡಿಗೆಮಾಡಿಕೊಂಡು ಉಣ್ಣುವರು. ಮಿಕ್ಕ ಜನರಿಗಾಗಿ ಇಕ್ಕೆಲದ ಸಾಲುಮರದ ನೆಳಲಲ್ಲಿ, ಬೆಲ್ಲದ ಪಾನಕವನ್ನೂ, ಅಲ್ಲ-ಕೆನೆಮೊಸರುಗಳಿಂದ ಕೂಡಿದ ಬುತ್ತಿಯನ್ನೂ ಅಲ್ಲಲ್ಲಿ

ಇರಿಸಿಕೊಂಡು, ದಾರಿಕಾರರನ್ನು ಕರೆಕರೆದು ಉಣಬಡಿಸುವರು. ಅಲ್ಲಿಯ ಅನೇಕ ಕೆರೆಗಳಿಂದ ಹೊಲ-ತೋಟಗಳತ್ತ ಹೊರಟು ಹರಿಯುತ್ತಿರುವ ಕಾಲುವೆಗಳನ್ನು ಕವಿ ಹೀಗೆ ಚಿತ್ರಿಸಿದ್ದಾನೆ:

> “ಮಳೆಗಾಲದೊಳುಬ್ಬಿ ಬೇಸಗೆಯೊಳು ಕಾಲು- ।
> ಹೊಳೆಯಾದುದೆಂಬ ನಿಂದೆಯನು ।
> ತಳೆಯದೆ ತೂಬಲಿ ಪೊರಮಟ್ಟ ಕುಲ್ಯಗ- ।
> ಳೆಳೆಯಗಲದೆ ಚಲಿಸುವುವು ॥”

ಇಂತಹ ಕಾಲುವೆಗಳ ಸಮೃದ್ಧಜಲದಿಂದ ಬೆಳೆಯುತ್ತಿರುವ ಬತ್ತದ ಗದ್ದೆಗಳನ್ನು ಬಣ್ಣಿಸಿದ ಕವಿ, ಕಬ್ಬಿನ ತೋಟಗಳನ್ನೂ ಆಲೆಯಮನೆಗಳನ್ನೂ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿರುತ್ತಾನೆ. ಆಲೆಗಾಗಿ ಕಬ್ಬುಗಳನ್ನು ಕಡಿಯುವವರ ವರ್ಣನೆಯಿದು:

> “ಖಂಡೆವೆಂಗಳನಗಲಿದ ಚದುರರು ತಮ್ಮ ।
> ದಂಡಿಪ ಸ್ಮರಚಾಪವೆಂದು ॥
> ಭಂಡಿ-ಪೆರ್ಗುಡುಗೋಲುಗಳಿಂದಲಡಿಗಿಕ್ಕಿ ।
> ಖಂಡಿಸುವರು ಕಬ್ಬುಗಳನು ॥”

ಆಲೆಯಮನೆಗಳ ಮುಂದೆ ಕಾಣುವ ಬೆಲ್ಲ-ಸಕ್ಕರೆಗಳ ಬಗೆಗೆ ಕವಿ ಹೀಗೆ ಹೇಳಿದ್ದಾನೆ:

> “ಮುದ್ದು ನಾಲುಕು ಮೂಲೆಯಾದಂತೆ ತನಿಬೆಲ್ಲ- ।
> ದುದ್ದುಕ, ವರ ಪಂಚಧಾರೆ ॥
> ಬಿದ್ದಿಹುದಾಲೆಯ ಮನೆ-ಮನೆಗಳ ಮುಂದೆ ।
> ಹೆದ್ದೊರೆಯ ಮಳಲೊಟ್ಟಲಂತೆ ॥”

ಇದೆಲ್ಲ ದೇಶವರ್ಣನೆಯನ್ನು ನೋಡಿದರೆ, ಇದು ಕನ್ನಡ ನಾಡಿನ ನೈಸರ್ಗಿಕ ವರ್ಣನೆಯಾಗಿಯೇ ಕಾಣುವುದು. ಸೌರಾಷ್ಟ್ರ ದೇಶದಲ್ಲಿ ಶ್ರೀವೈಷ್ಣವರು ಎಲ್ಲಿಂದ ಬರಬೇಕು? ಮುದ್ದೇ ನಾಲ್ಕು ಮೂಲೆಯನ್ನು ಹೊಂದಿ ಬಿದ್ದಂತಿರುವ ಬೆಲ್ಲದ ಚೌಕುಗಳೂ, ಮಳಲೊಟ್ಟಲಂತಹ ಸಕ್ಕರೆಯೂ, ಸಮುದ್ರದಿಂದ ಸುತ್ತುವಡೆದ ದ್ವಾರಕೆಯಲ್ಲಿ ಎಲ್ಲಿ ಸಿಕ್ಕಬೇಕು?

ಕನಕದಾಸರು ನಗರವರ್ಣನೆಯಲ್ಲಿ ವಿಜಯನಗರದ ನಾಗರಿಕರ ದೈನಂದಿನ ಜೀವನವನ್ನೇ ರೇಖಿಸಿದ್ದಾರೆ. ಕಂದಕ, ಕೋಟೆ, ಅಳ್ವೇರಿ, ತೆನೆ, ಕೋಟೆಯ ಹುಲಿಮುಖ, ಕೊತ್ತಳ— ಇವುಗಳನ್ನೆಲ್ಲ ನಮಗೆ ತೋರಿಸಿದ ಕನಕದಾಸರು, ನಮ್ಮನ್ನೆಲ್ಲ ನಗರದ ಅಂಗಡಿಬೀದಿಯಲ್ಲಿ ಸುತ್ತಾಡಿಸುತ್ತಾರೆ. ಮೊದಲು ಬೆಳ್ಳಿಲೆಗಳ

ಅಂಗಡಿಗಳು, ಆಮೇಲೆ ಗಂಧದ ಅಂಗಡಿಗಳು, ಬಳಿಕ ಪುಷ್ಪದಂಗಡಿಗಳು, ತರುವಾಯ ಕರ್ಪೂರ, ಕಸ್ತೂರಿ, ಜವಾಜಿ, ಪುಣುಗು, ಪರಿಪರಿಯ ಪರಿಮಳ ತೈಲ ಇವುಗಳನ್ನಿರಿಸಿವ ಅಂಗಡಿಗಳು, ಅವಾದ ಮೇಲೆ ಔಷಧೀದ್ರವ್ಯಗಳನ್ನು ಮಾರುವ ಗಂದಿಗವಸರಗಳು. ಬಳಿಕ ಹಣ್ಣುಹಂಪಲಗಳ ಅಂಗಡಿಗಳು, ಹಾಗೆಯೇ ಮುಂದು ವರಿದರೆ ನಾನಾ ಧಾನ್ಯರಾಶಿಗಳನ್ನು ಒಳಗೊಂಡ ದೂಸಿಗವಸರಗಳು, ಹತ್ತಿರ ದಲ್ಲಿಯೇ ಚಿತ್ರಿಗ-ಶಿಲ್ಪಿಗರ ಕೇರಿಗಳು. ಅಲ್ಲಿಯೇ ಕಂಚುಗಾರ, ಕೈದುಗಾರ, ಮಂಚಗಾರ, ಸಂಚುಗಾರ (ಓಜ) ಮೊದಲಾದ ಪಾಂಚಾಳರ ಮನೆಗಳಿರುವುವು. ಕವಿ ತೋರಿಸಿದ ಬಳೆಗಾರರ ಅಂಗಡಿಗಳನ್ನು ನೋಡಿ:

"ಕಳೆವೆತ್ತ ವಾರನಾರಿಯರ ಕನ್ನಿಕೆಯರ ।
ಮೊಳೆಮೊಲೆಗಳ ನೋಡಿ ನಗತ ॥
ಎಳವೆರಲ್ಗಳ ಚಟುಕೊತ್ತಿ ಕೈದೊಡಿಸುವ ।
ಬಳೆಗಾರರಿರ್ದರಿಕ್ಕೆಲದಿ ॥"

ಬಟ್ಟೆಯಂಗಡಿಗಳ ಸಾಲುಮಳಿಗೆಗಳಲ್ಲಿ ಬಗೆಬಗೆಯ 'ದೀಪ್ತಿಯ ಬಟ್ಟೆ', 'ಝುಲ್ಲಿ', ನಾನಾವರ್ಣದ 'ಚಿತ್ರಾಂಬರನಿಚಯ', ದೇವಾಂಗ ವಸ್ತ್ರ—ಇವೆಲ್ಲ ಒಟ್ಟಲೊಟ್ಟಲಾಗಿ ತುಂಬಿದ್ದುವು. ಮುಂದೆ ಸೊನ್ನಗಾರರ ಬಗೆಗೂ ರತ್ನದ ಸಾಣೆ ಗಾರರ ಬಗೆಗೂ ಹೇಳಿ ಕವಿಯು, ಸೆಟ್ಟಿಗಳ ವಿಷಯವನ್ನು ಹೇಳುತ್ತಾನೆ:

"ಚಪ್ಪನ್ನ ದೇಶದ ನಾಣೆಯಂಗಳ ನೋಟ ।
ತಪ್ಪದ ಚಪಾಸೆಟ್ಟಿಗಳು ॥
ಒಪ್ಪವಹೆದು ಕುಳಿತಿರ್ದರು ಹಣ-ಹೊನ್ನ ।
ಕುಪ್ಪೆಯ ಮುಂದಿಟ್ಟುಕೊಂಡು ॥"

ಮುಂದೆ ಚಿನ್ನವರದರನ್ನೂ ಸಾಗರ ವ್ಯಾಪಾರಿಗಳನ್ನೂ ತೋರಿಸಿ, ಕವಿಯು ಹೊಲ, ತೋಟ, ಕಾಡುಗಳಿಗೆ ಹೋಗಿ ಮಾರಾಟಮಾಡುವವರ ಪರಿಚಯ ಮಾಡಿ ಕೊಟ್ಟು, ಕುದುರೆ, ಆನೆ, ದನ--ಇವುಗಳ ಪೇಟೆಯನ್ನು ತೋರಿಸುತ್ತಾನೆ. ಬಳಿಕ ತಾಳ, ಮದ್ದಳೆ, ಆವುಜ, ಶ್ರುತಿ, ಮುಖವೀಣೆ—ಮೊದಲಾದ ವಾದ್ಯಗಳನ್ನೊಡ ಗೊಂಡು ಶುದ್ಧ, ಸಾಳಗ ಎರಡೂ ಪದ್ಧತಿಗಳಲ್ಲಿ ಹಾಡುವ ಗಾಯಕಿಯರನ್ನೂ, ನೃತ್ಯಮೇಳದವರನ್ನೂ, ನಟ್ಟುವರನ್ನೂ, ವಾದ್ಯವಾದನಕಾರರನ್ನೂ ಪರಿಚಯ ಮಾಡಿಕೊಟ್ಟು, ಹಾಗೆಯೇ ಗರಡಿಯಾಳುಗಳನ್ನೂ, ಕತ್ತಿ-ಸುರಗಿಗಳ ವರಸೆಗಾರ ರನ್ನೂ, ಅವಸರದಿಂದಲೇ ಪರಿಚಯಮಾಡಿಕೊಟ್ಟು, ಬ್ರಾಹ್ಮಣರ ಬೀದಿಗೆ ರಸಿಕ ರನ್ನು ಕರೆದೊಯ್ಯುವನು.

ಎಲ್ಲರ ಮನೆಗಳೂ ಹೊಂಬಣ್ಣದ ತಗಡಿನ ಚಪ್ಪರದಿಂದ ಕೂಡಿದುವು. ಮನೆಮನೆಗೂ ಅಚ್ಚುಕಟ್ಟಾದ ಪಟ್ಟಶಾಲೆಯಿರುವುದು. ಪ್ರತಿಯೊಂದು ಮನೆಯ

ಎದುರು ಬದಿಯಲ್ಲಿ ತುಳಸಿಯ ಮಂಟಪವಿರುವುದು. ಆ ಮಂಟಪಗಳಲ್ಲಿ ಶ್ರೀಹರಿಯ ಧ್ಯಾನ-ಭಜನೆಗಳು ನಡೆದಿರುವುವು. ಅನೇಕ ಮನೆಗಳಲ್ಲಿ ಸಾತ್ತ್ವಿಕ ಪೌರಾಣ, ಶಾಸ್ತ್ರಾರ್ಥ ಗೋಷ್ಠಿಗಳು ನಡೆದಿರುವುವು. ಬೇರೆ ಅನೇಕ ಮನೆಗಳಲ್ಲಿ ಗಾಣದಂಡಿಗೆಯ ಭಾಗವತರ ಸಂಕೀರ್ತನೆ ಕೇಳಿಸುತ್ತಿರುವುದು. ಅಲ್ಲಲ್ಲಿ 'ರಾಮಾನುಜ ವ್ಯಾಖ್ಯಾನ ಸುತತ್ತ್ವದ ಭೂವಿಾಸುರರು ಸಂದಣಿಸಿಹರು'. ಸಾಮ ವೇದದ ಘೋಷಣೆ ಎಲ್ಲೆಲ್ಲಿಯೂ ಕಿವಿಗೆ ಬೀಳುವುದು. ಅಲ್ಲಲ್ಲಿ ಅನೇಕ ಕಡೆಗೆ ವಿಷ್ಣುಪ್ರೀತ್ಯರ್ಥವಾದ ಹೋಮ-ಹವನಗಳು ಕಂಗೊಳಿಸುವುವು. ಆ ಬೀದಿಯಲ್ಲಿ **'ಕೇಳುವ ಕೆಲವು ವಿದ್ಯಾರ್ಥಿಗಳಿಗೆ ಕೂಳು-ವೀಳೆಯವಿತ್ತು....ಪ್ರತಿದಿವಸ ಪಾಠ ಹೇಳುವ'** ವೈದಿಕ ಪಾಠಶಾಲೆಗಳಲ್ಲದೆ, 'ಸಣ್ಣವರುಗಳನೋದಿಸುತಿರ್ಪ ಕಸೆಗೋಲ ಅಣ್ಣಗಳು' ಚೌಪದಿ ಕವಿತೆಗಳನ್ನು ಕಲಿಸುವ ಪ್ರಾಥಮಿಕ ಶಾಲೆಗಳೂ ಇರುವುವು. ಕನ್ನಡಕವನ್ನು ಹಾಕಿಕೊಂಡಿದ್ದು ಬಣ್ಣಗಂಬಿಗಳಿಂದ ಬರೆವ ಪುಸ್ತಕ ಲಿಖಿತಜ್ಞರೂ ಅಲ್ಲಿ ವಾಸಿಸುತ್ತಿರುವರು.

ಪುಷ್ಕರಣಿಗಳಲ್ಲಿ ಸ್ನಾನಮಾಡುವ ಸಂಪ್ರದಾಯವಂತ ಬ್ರಾಹ್ಮಣರನ್ನೂ ಕವಿಯು ನಮಗೆ ತೋರಿಸುತ್ತಾನೆ. ಅವರೆಲ್ಲರೂ 'ಹಚ್ಚಡ-ಚಿಂದಿಗುಪ್ಪಸಗಳನು ಇಂಬಿಟ್ಟ' ಬರಿಮೈಯುವರು ಸ್ವಚ್ಛವಾದ ಬೈರ್ವಾಸದೊಂದಿಗೆ, ತಂಪಾದ ನೀರಿಗೆ ಬೆಚ್ಚದೆ, 'ಶ್ರೀವತ್ಸಲಾಂಛನಾ, ಶರಣು' ಎನ್ನುತ್ತ ಮುಳುಮುಳುಗಿ ಮಿಾಯು ವವರು. ಮಿಂದಾದ ಮೇಲೆ ಪಟ್ಟಾವಳಿ ಧೋತ್ರವನ್ನು ಉಟ್ಟು, ಬೈರ್ವಾಸವನ್ನು ಹೊದ್ದುಕೊಳ್ಳುವರು; ಬೇರೆ ಕೆಲವರು ತಳಿರುಗಾವಿಯನ್ನು ಉಟ್ಟುಕೊಳ್ಳುವರು.

ಸ್ನಾನಮಾಡುವ ಈ ಬ್ರಾಹ್ಮಣರ ಗುಂಪಿನಲ್ಲಿ ಕನ್ನಡ ನಾಡಿನ ತ್ರಿಮತಸ್ಥರೂ ಕಾಣುವರು. ಕೆಲವರು ಪಟ್ಟೆ ನಾಮ-ತಿರುಚೂರ್ಣಗಳ ಲಾಂಛನದವರಾದರೆ, ಇನ್ನು ಕೆಲವರು ಗೋಪಿಚಂದನ-ಪಂಚಮುದ್ರೆಗಳನ್ನು ಧರಿಸಿದವರು. ಬೇರೆ ಕೆಲವರು ಭಸಿತ-ಗಂಧಾಕ್ಷತೆಗಳ ಭಾಳಲಾಂಛನದವರು.

ಕನಕದಾಸರಿಗೆ ತ್ರಿಮತಸ್ಥರಲ್ಲಿಯೂ ಸಾಮರಸ್ಯವಿರುವುದೆಂಬುದನ್ನು ತೋರಿಸಬೇಕೆಂಬ ಅಪೇಕ್ಷೆಯೇನೋ! ಆತನ ಈ ಸದಪೇಕ್ಷೆಯೇ ಶೈವ-ವೈಷ್ಣವ ದಲ್ಲಿ ನಂಟುಬೆಳೆದ ಪುರಾಣ ಕಥೆಯನ್ನು ಕಾವ್ಯವಸ್ತುವನ್ನಾಗಿ ಆಯ್ದುಕೊಂಡಿರ ಬಹುದು. ಬಾಣಾಸುರನು ತೀಕ್ಷ್ಣ ಶಿವಭಕ್ತ; ಶ್ರೀಕೃಷ್ಣನ ಮೊಮ್ಮಗನಾದ ಅನಿರುದ್ಧ ಪರಮ ವೈಷ್ಣವ. ಹೆಣ್ಣು-ಗಂಡುಗಳ ಪರಸ್ಪರ ಹೃದಯಾಕರ್ಷಣೆ, ಎಂತಹ ಉಗ್ರ ಮತಾಭಿಮಾನವನ್ನೂ ಹಿಂಜರಿಸಿ, ಶೈವ-ವೈಷ್ಣವಕುಲಗಳಲ್ಲಿ ಬಾಂಧವ್ಯ ಬಳೆಯಿಸಬಲ್ಲುದೆಂಬುದನ್ನು ಕವಿ ಈ ಕೃತಿಯಲ್ಲಿ ಸಿದ್ಧಮಾಡಿ ತೋರಿ ಸಲು ಹವಣಿಸಿದಂತಿದೆ.

ತನ್ನ ಈ ಅಪೇಕ್ಷೆಯನ್ನು ಪೂರಯಿಸಬೇಕೆಂಬ ಹಂಬಲದಿಂದಲೋ, ಆಗಿನ ಕಾಲದ ಸಮಾಜದಲ್ಲಿ ರೂಢಿಯಿದ್ದುದರಿಂದಲೋ ಕನಕದಾಸರು ತ್ರಿಮತಸ್ಥ

ಬ್ರಾಹ್ಮಣರನ್ನೂ—ಸತ್ರದ ಮನೆಗಳಲ್ಲಿ—ಸಹಪಾಂಕ್ತರನ್ನಾಗಿ ಊಟಕ್ಕೆ ಕುಳ್ಳಿರಿಸಿ ನಮಗೆ ತೋರಿಸುತ್ತಾರೆ. ಅನ್ನಾಹಾರಗಳಿಗೆ ಸಮೃದ್ಧವಾದ ಕಾಲವದು. ಸತ್ರದ ಊಟವೂ ಎಷ್ಟೊಂದು ಸಿರಿವಂತಿಕೆಯದು!

ಹಂಕಿಗೊಂಡು ಕುಳಿತ ಬ್ರಾಹ್ಮಣರಿಗೆಲ್ಲ ಗಂಧಾಕ್ಷತೆಗಳನ್ನು ಕೊಟ್ಟಾಯಿತು. ಎಲ್ಲರೆದುರೂ 'ಕದಳಿಯ ಪರ್ಣ, ದೊನ್ನೆಯ'ಗಳನ್ನು ತಂದಿರಿಸಿದರು. ಸತ್ರದಲ್ಲಿ ಅಡಿಗೆ ಮಾಡುವವರೂ ಊಟಕ್ಕೆ ಬಡಿಸುವವರೂ ಕನ್ನಡಿಗರಲ್ಲ, ತಿಗುಳರು. ಅವರು ಮೊದಲು 'ಪಾತ್ರಾಭಿಗಾರ'ವನ್ನು ಮಾಡಿ ಪರಮಾನ್ನ, ಸಣ್ಣಕ್ಕಿಯೋಗರ, ತೊವ್ವೆ, ಪಳಿದ್ಯ—ಇವನ್ನೆಲ್ಲ ಕ್ರಮವಾಗಿ ಬಡಿಸಿದರು. ಫೇಣಿ, ಸುಖೀನುಂಡಿ, ವಡೆ, ಗಾರಿಗೆ ಮೊದಲಾದ ನಾನಾ ಭಕ್ಷ್ಯಭೋಜ್ಯಗಳನ್ನು ನೀಡಿದರು. 'ಹುಳಿದಾಳಿದ ಸಾರು, ಸಿಖರಿಣಿ, ನಿಂಬೆಹಣ್ಣಿನ ಕೂಟ' ಇವುಗಳನ್ನು ಬಡಿಸುತ್ತಿರುವಾಗ, ಒಗ್ಗರಣೆಯ ಇಂಗಿನ ಕಂಪು ಸುಳಿದು ಹೊರಗಡೆಯೆಲ್ಲ ತುಂಬಿ ನಿಂತಿತು. ದೊನ್ನೆಯ ತುಂಬಿ ಹೊರಸೂಸುವವರೆಗೂ ಹೊಸತುಪ್ಪವನ್ನು ತಂದು ನೀಡಿದರು. ಆಗ 'ಅನಲಾಕೃತಿಯ ಬ್ರಾಹ್ಮಣರು' ಆಪೋಶನವ ಕೊಂಡರು; ಉಣ್ಣಲು ಆರಂಭಿಸಿದರು.

ಶುಭ್ರವಾದ ಸಣ್ಣಕ್ಕಿಯ ಅನ್ನದಲ್ಲಿ ತೊವ್ವೆಯನ್ನು ಕಲಸಿ, ದೊಡ್ಡದೊಡ್ಡ ತುತ್ತುಗಳನ್ನು ಮಾಡಿ ಎಲ್ಲರೂ ಉಣ್ಣಲು ತೊಡಗಿದರು.

> "ಮಲ್ಲಿಗೆಯರಳಂತೆ ಬಿಚ್ಚೋಗರ, ಮೊಸ- ।
> ರೊಳ್ಳೆಯ ಬಹಳುಪ್ಪುಗಾಯಿ ॥
> ಗಲ್ಲಿಸಿ ಗಟ್ಟಿಯ ಕಟ್ಟಿದ ಪಿರಿಯರು ।
> ಪುಲ್ಲಿಗೆಗಳು ತರತರಿಸೆ ॥"

ಊಟದ ಕೊನೆಯಲ್ಲಿ ರಸಾಯನವನ್ನು ರುಚಿನೋಡಿ, ಹಸನಾದ ನೀರ್ಮಜ್ಜಿಗೆಯನ್ನು ಕುಡಿದು, ಎಲ್ಲರೂ ತುಂಬಿದ ಹೊಟ್ಟೆಯವರಾಗಿ ಏಳಲಾರದೆ ಎದ್ದರು. ಸತ್ರದ ಮುಂಬದಿಯ ಕಾಲುವೆಯಲ್ಲಿ ಕೈ ತೊಳೆದು, ಕರ್ಪೂರಮಿಶ್ರ ತಾಂಬೂಲವನ್ನು ತೆಗೆದುಕೊಂಡರು. ಸಂನ್ಯಾಸಿಗಳ ಮಠ-ಮಠಗಳಲ್ಲಿಯೂ, ದೇಶ-ವಿದೇಶಗಳಿಂದ ಬಂದ ಅತಿಥಿ-ಅಭ್ಯಾಗತರಿಗಾಗಿ ಇದೇ ಬಗೆಯ ಭೋಜನ ಸಮಾರಂಭ ನಿತ್ಯವೂ ನಡೆಯುತ್ತಿತ್ತು.

ಅರಸುಕುಲದಲ್ಲಿಯೇ ಹುಟ್ಟಿದವರಾದ ಕನಕದಾಸರಿಗೆ ಅರಮನೆಯ ನುಡಿವಳಿ-ನಡೆವಳಿಗಳೆಲ್ಲ ಚೆನ್ನಾಗಿ ಗೊತ್ತು. ದ್ವಾರಕೆಯ ಅರಮನೆಯನ್ನು ಬಣ್ಣಿಸಲು ಹೊರಟ ಅವರು, ತಾವು ನೋಡಿದ ವಿಜಯನಗರದ ಅರಮನೆಯನ್ನೇ ಕಣ್ಣ ಮುಂದೆ ನಿಲ್ಲಿಸಿದ್ದಾರೆ. ಅರಮನೆಯಲ್ಲಿಯ 'ಬಾಹತ್ತರ ನಿಯೋಗ'ದವರಾದ ಕಟ್ಟಿಗೆಕಾತಿ, ಪಾಠಕಿ, ಸಂಬಳಿಗೆಗಾತಿ, ಮೊಗವಾಡದವಳು, ಗಿಂಡಿ

ಯುವಳು, ಕಾಳಾಂಜಿಯುವಳು, ಬೀಸಣಿಕೆಯುವಳು, ಚಾಮರದಾಕೆ, ಕಠಾರಿಯುವಳು, ಕನ್ನಡಿಯುವಳು, ಹಾವುಗೆಯಾಕೆ, ಸಂಗೀತಗಾತಿಯರು—ಮೊದಲಾಗಿ ಒಬ್ಬೊಬ್ಬರನ್ನೂ ಕ್ರಮದಿಂದ ಕವಿ ರಸಿಕರಿಗೆ ಪರಿಚಯಮಾಡಿಕೊಡುವನು. ಅರಮನೆಯಲ್ಲಿ ನಡೆಯುವ ರಾಜ-ರಾಣಿಯರಾಡುವ ನಗೆಮಾತು, ಕೊಂಕುಕಟಕಿಗಳೆಲ್ಲ ನಮ್ಮ ನಾಡಿನ ಜಾಣ-ಜಾಣೆಯರಾಡುವ ಸವಿಮಾತುಗಳೆ. ಅವರು ನಕ್ಕು ಕೆಲೆದಾಡುವಾಗ, ನಮಗವರು ರಾಜ-ರಾಣಿಯರೆಂಬ ಗಂಭೀರವ್ಯಕ್ತಿಗಳಾಗಿ ಕಾಣುವುದಿಲ್ಲ; ನಾಡಿನ ಸುಖಸಂಸಾರಿಗಳಾದ ಸಾಮಾನ್ಯ ಗೃಹಸ್ಥ-ಗೃಹಿಣಿಯರಾಗಿಯೇ ತೋರುತ್ತಾರೆ.

ಮಳೆಗಾಲ ಬಂದಿತು. 'ಸುರಿವ ಸೊಂಡಿಲ ನೀರ್ಗರೆಯುತ ಬಂದುಹೊ ಬಿರುಗಾಳಿ ಮದಗಜದಂತೆ!' ಸಂತತಧಾರೆ ಇಳೆಯೊಳು ಸುರಿಯಿತು. ಆಗ ಶ್ರೀಕೃಷ್ಣರಾಯನು ಸತಿಯರೊಂದಿಗೆ ಹರ್ಮ್ಯವನ್ನೇರಿ, ಹರುಷದಿಂದ ನೋಡುತ್ತಿರುವಾಗ:

"ಕೊಡೆ ಮೇಣಗಪ್ಪಡಗೊಂಗಡಿ ಬಹುರಮ್ಯ ।
ವಡೆದಿರ್ದ ಸಕಲಾತಿ ತಳೆದು ॥
ಬಿಡೆಯವಿಲ್ಲದೆ ಪುರದೊಳು ನೀರ್ಮನುಜರಂತೆ ।
ಎಡೆಯಾಡುತಿರ್ದರೂರುಗರು ! ॥"

ಈ ಊರುಗರು ಕನ್ನಡಿಗರೇ ಅಲ್ಲವೆ?

ರಾಜ-ರಾಣಿಯರು ಕೂಡಿ ತೋಟಕ್ಕೆ ಹೋದುದನ್ನು ಕವಿ ವರ್ಣಿಸಿದ್ದಾನೆ. ಅಲ್ಲಿ ಎಲ್ಲರೂ ಮಳಲೊಟ್ಟಿಲುಗಳನ್ನೇರಿ 'ಪಾರುಗುಪ್ಪೆ' ಆಟವನ್ನಾಡಿ ದಣಿದರು. ರಾಣಿಯರು ಹೂದೋಟದಲ್ಲಿ ತಿರುಗಾಡಿ ಹೂಗಳನ್ನು ಕೊಯ್ದರೆಂದು ಹೇಳುವುದು ಹೊಸಮಾತಲ್ಲ. 'ಅಂಬೆಹಳದಿ, ಕಾರ್ಗೆಣಸು, ನೀರುಳ್ಳಿ, ಕೊತ್ತುಂಬರಿ, ಕರಿಬೇವು, ಸಿಂಬೆ, ಕೂಗಲಿ, ಪಿಪ್ಪಲಗಾಯಿ' ಇವುಗಳನ್ನು ಕೊಯ್ದುಕೊಂಡರೆಂದು ಹೇಳುವುದರಲ್ಲಿ, ಕವಿಯ ಜನಜೀವನ ಚಿತ್ರಣದ ವೈಶಿಷ್ಟ್ಯ ಎದ್ದು ಕಾಣುತ್ತದೆ.

ರುಕ್ಮಿಣೀದೇವಿಯ ಬಸಿರು, ಬಯಕೆ, ಹೆರಿಗೆ; ಹೆತ್ತ ಮಗುವು ಅರಿಯದಂತೆ ಮಾಯವಾಗಲು ಆಕೆ ಅಳಲಿದ ಪರಿ; ರತಿ-ಮನ್ಮಥರ ನಲ್ಮಾತುಗಳು, ಶಿವನ ಉರಿಗಣ್ಣಿಂದ ಪತಿಯು ಬೂದಿಯಾದಾಗ ರತಿಯು ರೋದಿಸಿದ ರೀತಿ, ರತಿಯು ಶಂಬರಾಸುರನಲ್ಲಿದ್ದಾಗ ಪಟ್ಟ ಪಾಡು, ರತಿ-ಪ್ರದ್ಯುಮ್ನರ ಮದುವೆ, ಮನೆತುಂಬಿಸುವುದು, ಗರ್ಭಾದಾನ.... ಇವೆಲ್ಲ ಘಟನೆಗಳಲ್ಲಿಯೂ ಕನಕದಾಸರು ಕನ್ನಡ 'ಜನಜೀವನದ ಮೆರುಗನ್ನು ಮಿಂಚಿಸದೆ ಬಿಟ್ಟಿಲ್ಲ. ಚೊಚ್ಚಲು ಬಸುರಿಯಾದ ರತೀದೇವಿಯ ಹೆರಿಗೆಯ ಕಾಲದ ವಿವರಗಳನ್ನೇ ನೋಡಿರಿ:

ಬೇನೆ ತಿನ್ನುತ್ತ ರತಿದೇವಿ—

" ಅರಗಿಳಿಯೆಂಬಂತೆ ನುಡಿವಳು ಕೋಕಿಲ ।
ಸ್ವರದಿಂದ ಕೂಗುವಳೊಡನೆ ॥
ಮೊರೆವಳು ಪೆಣ್ಣುಂಬಿಯೆನೆ ಹೆರಲಾರದೆ ।
ಮರುಗುವಳಬುಜಾಯತಾಕ್ಷಿ ॥"

" ಕೇಶವ ನಾರಾಯಣ ಕೃಷ್ಣ ಗೋವಿಂದ ।
ವಾಸುದೇವಾಚ್ಯುತ ತನ್ನ ॥
ಬೇಸರ ಪರಿಹರಿಸುವುದೆಂದು ಬಿಡದೆ ಸ- ।
ರ್ವೇಶ ನಾಮದಿ ನರಳಿದಳು ॥"

ಹರಿಭಕ್ತರಾದ ಕನಕದಾಸರು ರತಿಯು ಗಂಡುಮಗುವನ್ನು ಹೆತ್ತು ಪ್ರಸೂತ ವೇದನೆಯಿಂದ ಮುಕ್ತಳಾದುದನ್ನು ಎಂತಹ ಚತುರೋಕ್ತಿಗಳಿಂದ ಹೇಳಿದ್ದಾರೆ, ನೋಡಿ:

" ಎಡರೆಂಬ ಲವಣಾಬ್ಧಿಯನೀಂಟುವೊಡೆ ನೆರೆ ।
ಕೊಡಸೂನು ಕೃಷ್ಣನಂಘ್ರಿಗಳ ॥
ಬಿಡದುಚ್ಚರಿಸಿ ಸದ್ಭಕ್ತರು ಮೋಕ್ಷವ ।
ಪಡೆವಂತೆ ಪಡೆದಳರ್ಭಕನ ॥"

ಸೂಲಗಿತ್ತಿಯರು ಕೂಸನ್ನು ನೋಡಿ, ಗಂಡು ಮಗುವೆಂದು ಹೇಳಿದಾಗ, ಅಜ್ಜಿ ರುಕ್ಮಿಣೀದೇವಿ, ತಂದೆ ಕುಸುಮಕೋದಂಡ—ಇವರೆಲ್ಲ ಹಿಗ್ಗಿದರು. ಚಿನ್ನದ ರಸವನ್ನು ಸಗಣಿಯಲ್ಲಿ ಎರೆದು ಗಟ್ಟಿಗೊಳಿಸುವಂತೆ, ಸೂಲಗಿತ್ತಿಯರು ಹಸು ಮಗುವಿನ ಮೈಗೆ ಗೋಮಯವನ್ನು ಲೇಪಿಸಿದರು. ಬೆಳ್ಳಿಯ ಪಿಡಿಯ ಕತ್ತಿಯನ್ನು ತಂದು 'ಮರುವುಟ್ಟ ತಳ್ಳಿಯ ತೊಡಕು ಬೇಡೆನುತ', ಹಾರಯಿಸಿ, ಕೂಸಿನ ಹೊಕ್ಕುಳ ಬಳ್ಳಿಯನ್ನು ಕೊಯ್ದರು. ಈ ಬಸಿರಿನ ಮಾಸದ ಬೀಜ ಇನ್ನೊಂದು ಶಿಶುವಾಗಿ ಹುಟ್ಟಲೆಂದು—ಅದನ್ನು ಬಿತ್ತಿದರೇನೋ ಎಂಬಂತೆ, ಮಾಸವನ್ನು ನೆಲದೊಳಗೆ ಹೂಳಿದರು. ಬಳಿಕ ಕೂಸಿಗೆ ಮಜ್ಜನಕ್ಕೆ ಹಾಕಿ ಮೊರದಲ್ಲಿ ಇರಿಸಿಕೊಂಡು, ತಾಯಿ ರತೀದೇವಿಯ ಹಾಸಿಗೆಯಲ್ಲಿ ಮಲಗಿಸಿದರು. ಬಾಣಂತಿ ರತೀದೇವಿಯು ಮಿಂದು ಬಂದು, ದುಕೂಲವನ್ನುಟ್ಟು ಬಂದವರಿಗೆಲ್ಲ ತಾಂಬೂಲವನ್ನು ಬೀರಿದಳು. ಆಮೇಲೆ ತಾನು ಬೇವಿನ ರಸವನ್ನು ಈಂಟಿ, ಕೂಡಲೇ ತುಂಬುದಂಬುಲವನ್ನು ಮೆದ್ದು, ಸುತರಕ್ಷೆಗಾಗಿ ದಾಸಿಯರಿಗೆ ಆಜ್ಞೆಯಿತ್ತಳು. ಆಗ ಆ ಕುಶಲೆಯರಾದ ದಾಸಿಯರು, ಕೂಸಿನ ಬಾಯೊಳಗೆ ಮಂತ್ರಿಸಿದ ಜಲವನ್ನು ಹಾಕಿ, ಸಕ್ಕರೆ ಲಿಂಬೆ ಹಣ್ಣಿನ ರಸವನ್ನು ಹಿಂಡಿದರು. ಹಾಗೆಯೇ ಸಕ್ಕರೆ ಬೆರಸಿದ ಜೇನ ಹನಿಯನ್ನು ಚೀಪಿಸಿದರು.

ಶ್ರೀಕೃಷ್ಣನು ಮೊಮ್ಮಗನ ಜಾತಕಫಲವನ್ನು ತಿಳಿದುಕೊಳ್ಳಲು ಬ್ರಾಹ್ಮಣರನ್ನು ಬರಮಾಡಿಕೊಳಲು

"ತಳಿರುಗಾಸೆಯ ಧೋತ್ರ ಬಹಿರ್ವಾಸ ಮೂಗಿನಿಂ ।
ದಿಳಿದ ನಾಮುಗಳ ವೈಷ್ಣವರು ॥
ಗಳಿಲನೆ ನಿಳಯದಿಂ ಬಂದರೊಮ್ಮೊಗವೆತ್ತು ।
ನಳಿನಸಂಭವನಂದದಿಂದ ॥"

ಆಗ ಶ್ರೀಕೃಷ್ಣನು ಮೊಮ್ಮಗನು ಹುಟ್ಟಿದ ದಿನ–ಕಾಲಗಳನ್ನು ಹೀಗೆ ವಿವರಿಸಿದ:

"ಆನಂದ ಸಂವತ್ಸರದ ಮಾಘ ಶುದ್ಧ ನ ।
ವೀನ ಪಂಚಮಿ ಆದಿವಾರ ॥
ಭಾನು ಉದಯದೆ ಸ್ವಾತಿಯ ನಕ್ಷತ್ರದೆ ।
ತಾನುದಿಸಿದ ಗಂಡುಮಗನು ॥"

ಜ್ಯೋತಿರ್ವಿದರಾದ ಬ್ರಾಹ್ಮಣರು, ಮಗುವಿನ ಶಿರೋದಯದ ಲಗ್ನವನ್ನು ಗುಣಿಸಿ, ಆಯ–ವ್ಯಯ ಪುಣ್ಯ–ಪಾಪ........ಮೊದಲಾದ ಫಲಗಳನ್ನು ಬರೆದೋದಿ, ಒಳ್ಳೆಯ ಜಾತಕವೆಂದು ಹೇಳಿ, ಪ್ರಭೂತ ದಾನ–ದಕ್ಷಿಣೆಗಳನ್ನು ಪಡೆದರು. ಷೋಡಶ ದಾನಗಳನ್ನು ನೀಡಿಯಾಯಿತು. ಸೆರೆಮನೆಗಳೆಲ್ಲ ಬರಿಯ ವಾದುವು.

ಪ್ರದ್ಯುಮ್ನನ ಆಜ್ಞೆಯಿಂದ ಬೀದಿ ಬೀದಿಗಳಲ್ಲಿ ಗುಡಿ ತೋರಣಗಳು ಎದ್ದು ನಿಂತುವು.

"ಪಾಳೆಯ ಪಾಳೆಯದೊಳಗೆ ಚೆಲ್ಲಿತು ಸೂರೆ ।
ವೀಳೆಯ ಹಿಡಿಹೊನ್ನು ವರಹ ॥
ಸೂಳೆಯರ–ವಾಣಿಜ್ಯ ವೀಧಿಯೊಳ್ ಕುಂಕುಮ ।
ದೂಳೆದ್ದುದಾಗಸದೆಡೆಯ ॥"

ಕಾವಡಿಗಳಲ್ಲಿ ಹೊಂಗೊಡಗಳನ್ನು ಇರಿಸಿ, ತೈಲ–ಹರಿದ್ರರ ಪರಿಯಣದ ಅಬಲೆಯರು ಪಾಡುತ್ತ ಮನೆ ಮನೆಗೂ ಎಣ್ಣೆ ಅರಿಸಿಣವನ್ನು ಬೀರಿದರು. ಹನ್ನೆರಡರ ಇರುಳಲ್ಲಿ ಕೂಸನ್ನು ತೊಟ್ಟಿಲಲ್ಲಿರಿಸಿ ಹೆಸರಿಡುವುದರ ವರ್ಣನೆಯೂ ವಾಸ್ತವರೀತಿಯದೇ ಆಗಿದೆ.

ಕನ್ನಡ ಪ್ರಾಚೀನ ಕಾವ್ಯಗಳಲ್ಲಿ 'ವೇಶ್ಯವಾಟಿಕೆ'ಯನ್ನು ವಿಶದವಾಗಿ ವರ್ಣಿಸುವುದು ಒಂದು ಸಂಪ್ರದಾಯವಾಗಿದೆ. ಕನಕದಾಸರು ಈ ಸಂಪ್ರದಾಯವನ್ನು ಅನುಸರಿಸಿರುವರಾದರೂ, ಇವರ ವರ್ಣನೆಯ ರೀತಿ ಇವರದೇ ಆಗಿದೆ. ಸಮಕಾಲೀನ ಸೂಳೆಗೇರಿಯ ಚಿತ್ರವನ್ನೇ ಅವರು ತೆಗೆದಿದ್ದಾರೆ. ಅವರು

ವಿವರಿಸಲು ಹೊರಟುದು ದ್ವಾಪರಯುಗದ ಅನಿರುದ್ಧನು ಕಂಡ ಸೂಳೆಗೇರಿಯನ್ನು, ಆದರೆ ಅಲ್ಲಿ ಕಾಣುವುದೆಲ್ಲ ಐತಿಹಾಸಿಕ ಕಾಲದ ಕನ್ನಡ ನಾಡಿನ ಒಂದು ಜೀವನ ವಿಧ.

ವೇಶ್ಯೆಯರ ಸಂಗೀತ ಕಲಾನೈಪುಣ್ಯವನ್ನು ಕುರಿತು ದಾಸರು ಹೇಳುವ ಮಾತುಗಳಿವು:

"ತರಳಾಕ್ಷಿ ತನ್ನಂತೆ ಪಾಡುವರಿಲ್ಲೆಂದು ।
ಕೊರಳಿಗಿಟ್ಟಳು ಕಂಠಸರವ ॥
ಪೆರಳೊರ್ವೆ ವೀಣೆಗಾತಿಯರಿಲ್ಲವೆನುತಲೆ ।
ಬೆರಲೊಳಿಟ್ಟಳು ಮುದ್ರಿಕೆಯ ॥"

ಸಂಗೀತ ಶಾಸ್ತ್ರದ ಅನೇಕ ಪರಿಭಾಷಾ ಪದಗಳನ್ನು ಇಲ್ಲಿ ನೋಡಿ:

"ಆಯತವಿಡುವು ಸುಸ್ವರ ಷಡ್ಜ ಪಂಚಮ ।
ಸ್ಥಾಯಿ ಸಂಚರ ಠಾಯೆನೇಮ ।
ಬಾಯಿದೆರೆಯೊಳಾಣೆ-ಆಯತಪ್ಪದ ಗೀತ ।
ಗಾಯಕಿಯರುಗಳೊಪ್ಪಿದರು ॥"

ಆ ಕಾಲದ ವಾದ್ಯಗಳ ವಿವರಣೆ ಈ ನುಡಿಯಲ್ಲಿದೆ:

"ಹಸ್ತ ಅವುಜ ವೀಣೆ ಮದ್ದಳೆ ರಾವಣ ।
ಹಸ್ತ ಕಿನ್ನರಿ ಜಂತ್ರವುಡುಕು ॥
ದುಸ್ತರ ಸ್ವರಮಂಡಲ ಮುಖ್ಯ ಸಕಲ ವಿ ।
ದ್ಯಾ ಸ್ತ್ರೀಯರಿರ್ದರಿಕ್ಕೆಲದಿ ॥"

ಸೂಳೆಗೇರಿಯ ವಿವರಣೆಯಲ್ಲಿ 'ಮದ್ಯಪಾನಗೋಷ್ಠಿ'ಯ ವಿಷಯವೂ ಬರುತ್ತದೆ. ಪಾನಕ್ಕೆ ಮೊದಲು ನಡೆಯುವ ಪೂಜಾವಿಧಾನವಿದು:

"ಮನೆಯ ಸಾರಿಸಿ ರಂಗವಲ್ಲಿಯನಿಕ್ಕಿ ಭೋಂ ।
ಕನೆ ಭಕ್ಷ್ಯಭೋಜ್ಯವ ಸವಿದು ।
ನನೆಯಕ್ಕಿ ಕಡಲೆ ಪಣ್ಯಾರದಿ ನಿಖಿಲಾ ।
ರ್ಚನೆಯ ವಸ್ತುಗಳ ಸಾರ್ಚಿದರು ॥"

ಮದ್ಯದ ಕೊಡದ ಪೂಜೆಯಿದು:

"ತಂಡುಲರಾಗಿಯೊಳ್ ಕೊಡನಿಟ್ಟು ಬೇವಿನ ।
ದಂಡೆಯ ಕೊರಲ್ಗಿಟ್ಟು ಗಂಧ ।
ಭಂಡಾರವನಿಟ್ಟು ಧೂಪ–ದೀಪಾರತಿ ।
ಕೆಂಡವ ಸುರಿಸಿದರೊಲಿದು ॥"

ಮದ್ಯವು ರುಚಿಯಾಗಬೇಕೆಂದು ಅವರು ಮಾಡಿದುದೇನು?

“ಸಂಡಿಗೆ ಸಂಭಾರಗಡಲೆ ಪ್ರಾಸಕ ಕುಕ್ಕು ।
ಟಾಂಡವನವಲಕ್ಕಿಗಳನು ।
ದುಂಡರಳ್ ಕಡಲೆ ಭಕ್ಷ್ಯಗಳ ಬಾಡಿಸಿಕೊಳು ।
ತುಂಡರು ನೆರೆಸೊಕ್ಕುವನಕ ॥”

ರಾತ್ರಿಯಲ್ಲಿ ನಗರವನ್ನು ಕಾಯುವ ಈ ತಳವಾರರು ನಮ್ಮ ನಾಡಿನವರೇ ಅಹುದೋ ಅಲ್ಲವೋ ನೋಡಿ:

“ಹೊಳೆವ ಕಠಾರಿ ಕೈಗತ್ತಿ ತೋಮರ ಬಿಲ್ಲು ।
ಬಲುದಡಿ ಪಿಡಿಚಕ್ರದಲಿ ।
ಕಳಬಂಟ ಕಂಠವಿಚ್ಛೇದ ವಿನೋದದ ।
ತಳವರರೂರ ಕಾದಿಹರು ॥”

ಅವರ ವೇಷ–ಭೂಷಣಗಳ ವೈಶಿಷ್ಟ್ಯವನ್ನು ನೋಡಿರಿ:

“ಮೆಟ್ಟಿದ ಕೆರ್ಪುಗಳ್ ಉಡೆಯು ಬದ್ದುಗೆದಾರ ।
ದಟ್ಟಿಯ ಮೇಲೆ ವಂಕುಡಿಯು ।
ಕಟ್ಟಿದ ಹೆದೆಯೇರಿಸಿದ ಬಿಲ್ಗೋಲಿನ ।
ಗಟ್ಟಿವಾಳರು ತಿರುಗಿದರು ॥”

ವೇಶ್ಯಾವಾಟಿಕೆಯ ಇರುಳಿನ ಬಣ್ಣನೆಯನ್ನು ವಿವರವಾಗಿ ಹೇಳಿ ಮುಗಿಸಿ, ಬೆಳಗಿನ ಕೋಳಿಗಳು ಕೂಗಿದುದರ ಪರಿಣಾಮವನ್ನು, ಈ ರಸಿಕ ಕವಿ ತುಂಬ ಮಾರ್ಮಿಕವಾಗಿ ಹೇಳಿದ್ದಾನೆ. ಈ ಮಾತುಗಳು ಕನಕದಾಸರ ಸೂಕ್ಷ್ಮ ಲೋಕಾನುಭವವನ್ನು ಪ್ರಕಟಪಡಿಸುತ್ತವೆ.

“ಗುತ್ತಿಗೆ ಹಿಡಿದ ವೇಶ್ಯಾಕಾಂತ ವ್ಯಭಿಚಾರ ।
ಕರ್ತರ ಕರ್ಣಯುಗ್ಮವನು ।
ಕಿತ್ತ ಕಠಾರಿಯೊಳ್ ತಿವಿದಂತೆ ಸ್ವರವ ಮೇ ।
ಲೆತ್ತಿ ಕೂಗಿದುವು ಕೋಳಿಗಳು ॥”

ಸರಿ! ಕನಕದಾಸರು ಚಿತ್ರಿಸಿದ ಜಗಜೀವನವನ್ನು ಈ ಪರಿಮಿತ ಅವಕಾಶ ದಲ್ಲಿ ಎಷ್ಟೆಂದು ಹೇಳಲಿಕ್ಕಾದೀತು? ಅದನ್ನು ಸಂಪೂರ್ಣವಾಗಿ ತೋರಿಸಲಿಕ್ಕೆ ಇಂತಹ ಹತ್ತೆಂಟು ಪ್ರಬಂಧಗಳನ್ನಾದರೂ ಬರೆಯಬೇಕಾದೀತು. ಕೊನೆಗೆ ಮೊದಲಾಗಿ, ಬಾಣಾಸುರನ ಶೋಣಿತಪುರದ ದರ್ಶನವನ್ನು ಸ್ವಲ್ಪಮಟ್ಟಿಗೆ ಮಾಡಿಸಬೇಕೆಂದಿದ್ದೇನೆ.

ಪಟ್ಟಣದ ಕೋಟೆ ಕೊತ್ತಳಗಳನ್ನೆಲ್ಲ ರಮ್ಯವಾಗಿ—ಆದರೆ ವಾಸ್ತವತೆಗೆ ಭಂಗಬಾರದಂತೆ—ಬಣ್ಣಿಸಿ, ಒಪ್ಪವಡೆದ ಯಾಗಶಾಲೆಯನ್ನೂ, ಗಳಿಯಾರದ

ಉಪ್ಪರಿಗೆಯೊಳಗೆ ತಪ್ಪದೆ ಗಳಿಗೆಗೊಮ್ಮೊಮ್ಮೆ ಭೇರಿಯ ಹೊಯ್ಯುತಿಪ್ಪುದನ್ನೂ ಹೇಳುವನು. ಅಂಗಡಿ ಬೀದಿಗಳಲ್ಲಿ ಓದುಗರನ್ನು ಸುತ್ತಾಡಿಸುತ್ತ ಜೂಜಾಟಗಳು ನಡೆದಲ್ಲಿ ಕರೆತರುವನು. ಅಲ್ಲಿ ಬಾಳೆಯ ಹಣ್ಣನ್ನು ಛೇದಿಸುವ—ತೆಂಗಿನ ಕಾಯನ್ನು ಹೋಳು ಮಾಡುವ—ಕಬ್ಬನ್ನು ಕಡಿಯುವ—ಜೂಜುಗಳನ್ನು ತೋರಿಸಿ, ಬೆಲ್ಲವನ್ನು ಗುದ್ದಿ ಒಡೆಯುವ ಜೂಜಿನೆಡೆಗೆ ಕರೆದೊಯ್ಯುವನು. ಆ ಜೂಜನ್ನು ಕವಿ ಉತ್ಪ್ರೇಕ್ಷಿಸಿದುದು ಹೇಗೆ?

"ಬೆಲ್ಲವೆ ನೀ ಮುದ್ದುವೆಣ್ಗಳ ಮೃದುಬಾಯ ।
ಬೆಲ್ಲವಾಗಿರದೆ ಬಂದಿಲ್ಲಿ ।
ಹೊಲ್ಲೆಹ ನೊಣನ ಮುತ್ತಿಸಿಕೊಳಬೇಕೆಂದು ।
ಬೆಲ್ಲವನೊಡೆಯೆ ಗುದ್ದಿದರು ॥"

ಈ ಶಕ್ತಿಪ್ರದರ್ಶಕ ಜೂಜುಗಳಲ್ಲದೆ—

"ಲೆತ್ತ ಪಗಡೆ ರಾಯಬೊಗರಿ ಸೊಲ್ಲೆಹ ಬಾರು ।
ಗುತ್ತದೊಪ್ಪಿಯ ಸರಿಬೆಸದಿ ।
ವಿತ್ತನಾಶವ ಮಾಡುವ ಜೂದುಗಾರರ ।
ಮೊತ್ತವಿರ್ದುದು ಮನೆಮನೆಗೆ ॥"

ಬಾಣಾಸುರನ ಹಗಲು ಶಿವಪೂಜೆಯ ವರ್ಣನೆ ತುಂಬ ವಿಸ್ತಾರವಾಗಿದೆ. ಕನಕದಾಸರ ಬಣ್ಣನೆಯ ರೀತಿಯ ಮಾದರಿಯನ್ನು ತೋರಿಸಲು, ಬೆಳಗಿನ ಶಿವಪೂಜಾ ವಿಧಾನವನ್ನು ಇಲ್ಲಿ ಸ್ವಲ್ಪದರಲ್ಲಿಯೇ ಹೇಳಬೇಕೆಂದಿದ್ದೇನೆ:

"ಜಲ ಮಲ ಕಳೆದು, ಶೌಚವಮಾಡಿ, ರನ್ನ ಬ ।
ಚ್ಚಲವೇರಿ ಮಿಂದು ಸೌಖ್ಯದಲಿ ॥
ವಿಲಸಿತ ದೇವಾಂಗವಸ್ತ್ರವನುಟ್ಟು ಹೊಂ ।
ಗೆಲಸವಾವುಗೆಯ ಮೆಟ್ಟಿದನು ॥"

ಇಲ್ಲಿ ಬಾಣಾಸುರನು ಬಚ್ಚಲಕ್ಕೆ ಇಳಿದಿಲ್ಲ; ಬಚ್ಚಲವ ಏರಿ ಮಿಂದಿದ್ದಾನೆ. ಉತ್ತರ ಕರ್ನಾಟಕದಲ್ಲಿ ಈ ಬಗೆಯ ಏರು ಬಚ್ಚಲುಗಳು, ಕೆಲವು ವಿಶಿಷ್ಟ ಜನರ ಮನೆಗಳಲ್ಲಿ ಇರುವುವು. ಮಿಯುವುದಾದ ಬಳಿಕ:

"ರಾಜಾರ್ಕಶಿಖಿನೇತ್ರನ ಭಕ್ತವರ ದೇವ
ಪೂಜೆಯ ನಿಳಯವ ಹೊಕ್ಕ ।
ಓಜೆಯೊಳೆಡೆಮಾಡಿದ ಗದ್ದುಗೆಯಲ್ಲೆ ।
ತೇಜೋಮಯನು ಮಂಡಿಸಿದ ॥"

ಇಲ್ಲಿಯ 'ರಾಜಾರ್ಕಶಿಖಿನೇತ್ರ' ಎಂಬ ಪದದ ಅರ್ಥ ಚಂದ್ರ-ಸೂರ್ಯ-ಅಗ್ನಿನೇತ್ರಗಳುಳ್ಳ ಮಹಾದೇವ—ಎಂಬುದನ್ನು, ಅರಿತವರಿಗೆ ಅರುಹುವ ಕಾರಣ ವೇನೂ ಇಲ್ಲ.

ಆಮೇಲೆ ಆ ನಿಸ್ಸೀಮ ಶಿವಭಕ್ತನು:

"ಜಾತಿರುದ್ರಾಕ್ಷಿಯ ಮಣಿಮಾಲೆದಳೆದು ವಿ।
ಭೂತಿಯ ಧರಿಸಿ ಹಸ್ತದಲಿ।
ಜ್ಯೋತಿರ್ಲಿಂಗವ ಪಿಡಿದಭಿಷೇಕವ ಮಾಡಿ।
ಚಾಚಿದ ಗಂಧಾಕ್ಷತೆಯ॥"

"ಚೆಂಗಣಿಗಿಲೆ ಸೇವಂತಿಗೆ ಕತ್ತುರಿ।
ಸಿಂಗದ ಮುಡಿವಾಳ ದವನ।
ಮಂಗಲ ತುಳಸಿ ಬಿಲ್ವದ ಪತ್ರೆಗಳ ಶಿವ।
ಲಿಂಗಾರ್ಪಿತವ ಮಾಡಿದನು॥"

"ಹೊತ್ತಿದೇಕಾರತಿ ಪಂಚಾರತಿ ಕಡ್ಡಿ।
ಬತ್ತಿ ನೀಲಾಂಜನವಲಗೆ।
ಮತ್ತೆ ನಾನಾ ವಾದ್ಯ ರಭಸದಿಂ ಮೊಳಗಲು।
ಎತ್ತಿದ ಮಹದಾರತಿಯ॥"

"ಧೂಪ–ದೀಪಾರತಿ ನೈವೇದ್ಯ ತಾಂಬೂಲ।
ಶ್ರೀ ಪರಮೇಶಗರ್ಪಿಸಿದ।
ಅಪಾರಮಹಿಮನ ವಸ್ತ್ರದೊಳಡಗಿಸಿ।
ಸ್ಥಾಪನೆಗೆಯ್ದ ಮಸ್ತಕದಿ॥"

ಇಲ್ಲಿ ಲಿಂಗವನ್ನು ಕೈಯಲ್ಲಿಯೇ ಇರಿಸಿಕೊಂಡು ಪೂಜೋಪಚಾರಗಳನ್ನು ಸಲ್ಲಿಸುವುದೂ, ಕೊನೆಯಲ್ಲಿ ವಸ್ತ್ರದಲ್ಲಿ ಅಡಗಿಸಿ ಮಸ್ತಕದಲ್ಲಿ ಸ್ಥಾಪಿಸುವುದೂ ಕನ್ನಡನಾಡವರ ಶಿವಪೂಜಾ ಪದ್ಧತಿಗಳಾಗಿವೆ.

ಕನಕದಾಸರ '**ಮೋಹನತರಂಗಿಣಿ**' ಕಾವ್ಯವೆಂದರೆ, ಕನ್ನಡ ಜನಜೀವನ ಸಂದರ್ಶನವೇ ಆಗಿದೆಯೆಂಬುದನ್ನು ಈ ಲೇಖನ ಸ್ವಲ್ಪಮಟ್ಟಿಗಾದರೂ ತಿಳುಹುವುದೆಂದು ನಾನು ಭಾವಿಸಿದ್ದೇನೆ. ಮಿಕ್ಕ ಅವರ ಕೃತಿಗಳಲ್ಲಿ ಜನಜೀವನ ಚಿತ್ರಗಳನ್ನು ಕಣ್ಣಿಟ್ಟು ಹುಡುಕಬೇಕಾಗುವುದು; ಅದಕ್ಕೆ ಫಲವೂ ಅಲ್ಪವೆನಿಸಬಹುದು. ಆದರೆ '**ಮೋಹನತರಂಗಿಣಿ**' ರಾಶಿರಾಶಿಯಾಗಿ ಅಂತಹ ಚಿತ್ರಗಳನ್ನು ತೋರಿಸಿ, ನಮ್ಮ ಮೈಮನಗಳನ್ನು ಭಾವಾನುಭಾವದಿಂದ ಹಿಗ್ಗಿಸುವುದು.

ಕೊನೆಯಲ್ಲಿ ಕನಕದಾಸರ ನುಡಿಯಲ್ಲಿ ರಸಿಕರನ್ನು ಬಿನ್ನವಿಸಿಕೊಳ್ಳುತ್ತೇನೆ:

"ತಪ್ಪು ಸಾಸಿರವಿರಲು ಉಳಿದೊಂದು ಗುಣಬರೆ
ಒಪ್ಪಿಕೊಂಬುದು ಬಲ್ಲವರು॥
ಕಪ್ಪು ಕಿಂಚಿತ್ತಿರೆ ಕಳೆದಿನಿದಮೃತವ
ಚಪ್ಪರಿದೀಂಟದಿರ್ದಪರೇ?"

# ಕನಕದಾಸರ ಮುಂಡಿಗೆಗಳು

**ಶ್ರೀ ಬುರ್ಲಿ ಬಿಂದುಮಾಧವ**

೧. ಶ್ರೀ ಕನಕದಾಸರ ೪ನೆಯ ಶತಮಾನೋತ್ಸವವು ನಮ್ಮ ನಾಡಿನಲ್ಲಿ ಉತ್ಸಾಹದಿಂದ ಜರುಗುತ್ತಿರುವುದು ನಮ್ಮ ನಾಡಿನ ಭಾಗ್ಯ. ಜನಾಂಗದ ಅಭ್ಯುದಯಕ್ಕಾಗಿ ಜ್ಞಾನ–ಭಕ್ತಿ–ವೈರಾಗ್ಯಗಳನ್ನೂ ಸದಾಚಾರ–ಲೌಕಿಕನೀತಿಗಳನ್ನೂ ಪ್ರತಿಪಾದಿಸುತ್ತ ಪಂಡಿತರಿಂದ ಪಾಮರರವರೆಗೆ ಭಕ್ತಿಯ ಬೀಜಗಳನ್ನು ಬಿತ್ತಿ ಜನಾಂಗವನ್ನು ಜಾಗೃತಗೊಳಿಸಿದ ಮಹಾಮಹಿಮರು ಕನಕದಾಸರು. ನೈತಿಕ ಅಧಃಪತನದಿಂದ ಅನೇಕ ಕಷ್ಟಪರಂಪರೆಗಳಿಗೆ ಈಡಾದ ನಮ್ಮ ರಾಷ್ಟ್ರಕ್ಕೆ ಕನಕದಾಸರ ವೀರಪೂಜೆಯು ನೆನಪಾದುದು ನಮ್ಮ ಭಾಗ್ಯವಲ್ಲದೆ ಮತ್ತೇನು?

೨. ಕನಕದಾಸರು ಬಾಳಿ ಬದುಕಿದ ಕಾಲವು ನಮ್ಮ ನಾಡಿನ ಸೌಭಾಗ್ಯ ಕಾಲ, ಜನಾಂಗಕ್ಕೆ ಆದರ್ಶವಾದ ಕಾಲ, ಭಾರತೀಯ ಸಂಸ್ಕೃತಿಯು ಪುನರುಜ್ಜೀವನ ಹೊಂದಿ ಜಗತ್ತಿಗೆ ಹೊಸ ಬೆಳಕನ್ನು ಬೀರಿದ ಕಾಲ, ಕರ್ನಾಟಕ ಸಾಮ್ರಾಜ್ಯವು ಕೃಷ್ಣೆಯಿಂದ ಕನ್ಯಾಕುಮಾರಿಯವರೆಗೆ ಹಬ್ಬಿ ಮೆರೆದ ಕಾಲ, ಕನ್ನಡನಾಡು ಧನಕನಕಸಂಪತ್ತುಗಳಿಂದ ಜಗತ್ತನ್ನೇ ತನ್ನ ಕಡೆಗೆ ಸೆಳೆದ ಕಾಲ, ವಿದ್ಯೆಯ ಆಗರವಾಗಿ ನ್ಯಾಯ ವ್ಯಾಕರಣ ವೇದಾಂತ ಮೀಮಾಂಸಾದಿ ಶಾಸ್ತ್ರಗಳಲ್ಲಿ ಪ್ರವೀಣರಾದ ವಿದ್ವಾಂಸರಿಂದಲೂ ಕಲಾಕೋವಿದರಿಂದಲೂ ಭಾರತದ ದೃಷ್ಟಿಯನ್ನು ದಕ್ಷಿಣಕ್ಕೆ ಹೊರಳಿಸಿದ ಉಜ್ವಲ ಕಾಲ. ಜ್ಞಾನ ಭಕ್ತಿ ವೈರಾಗ್ಯಗಳಿಂದ ಕೂಡಿದ ಪುರಂದರದಾಸರೂ ಕನಕದಾಸರೂ ಶ್ರೀ ವ್ಯಾಸರಾಜ ವಾದಿರಾಜರಂಥ ಮಹಾ ಜ್ಞಾನಿಗಳೂ ಅವತರಿಸಿ ಜನಾಂಗದ ಮನಸ್ಸನ್ನು ಪರಿಶುದ್ಧಗೊಳಿಸಿದ ಕಾಲವದು. "ಎಲ್ಲರ ಹೃದಯ ಗುಹೆಯಲ್ಲಿ ಸರ್ವ ಭೂತಗಳಲ್ಲಿ ವಾಸಮಾಡಿರುವ ಪರಮಾತ್ಮನು ಒಬ್ಬನೆ" ಎಂಬ ದಿವ್ಯಜ್ಞಾನದಿಂದ ಜನಾಂಗವನ್ನು ಕಟ್ಟಿ ರಾಷ್ಟ್ರೀಯತೆಯನ್ನು ಉಂಟುಮಾಡಿದ ಕಾಲ. ಸರ್ವ ಜಾತಿ ಮತಗಳನ್ನು ಸಮಾನ ದೃಷ್ಟಿಯಿಂದ ನೋಡಿ ಪೋಷಿಸಿದ ಕಾಲ. ಇಂತಹ ಆದರ್ಶ ಜೀವನವನ್ನು ನಿರ್ಮಿಸಿದ ಕಾರಣಪುರುಷರಲ್ಲಿ ಕನಕದಾಸರೊಬ್ಬರು ಎಂಬುದು ಮಹತ್ವದ ಮಾತು.

೩. ಹರಿದಾಸಪಂಥದಲ್ಲಿ ಕನಕದಾಸರಿಗೆ ವಿಶಿಷ್ಟ ಸ್ಥಾನವಿದೆ. ಅವರು "ಯಮಧರ್ಮಾಂಶರು–ದೇವತೆಗಳು" ಎಂಬ ಪವಿತ್ರ ಭಾವನೆಯಿದೆ. ಕನಕದಾಸರು ಅಪರೋಕ್ಷಜ್ಞಾನಿಗಳು ಮಹಾಮಹಿಮರು ಅನುಭಾವಿಗಳು ಎಂದು ಆ ಕಾಲದ ಜ್ಞಾನಿಗಳೆಲ್ಲರೂ ಒಪ್ಪಿರುವರು. ಅವರ ಸಮಕಾಲೀನರೂ ಭಕ್ತ

ಶ್ರೇಷ್ಠರೂ ಆದ ಶ್ರೀ ಪುರಂದರದಾಸರು ಕನಕದಾಸರ ಮಹಿಮೆಯನ್ನು ಬಣ್ಣಿಸುವ ಒಂದು ಐತಿಹಾಸಿಕ ಹಾಡನ್ನೇ ಹಾಡಿರುವರು.

ಕನಕದಾಸನಮ್ಯಾಲೆ ದಯಮಾಡಲು ವ್ಯಾಸ
ಮುನಿಯು ಮತದವರೆಲ್ಲ ದೂರಿಕೊಂಬುವರು ॥ ಪ ॥

ತೀರ್ಥವನು ಕೊಡುವಾಗ ಕನಕನನು ಕರೆಯೆನಲು ।
ಧೂರ್ತರಾಗಿದ್ದ ವಿದ್ವಾಂಸರೆಲ್ಲ ॥
ಸಾರ್ಥಕಾಯಿತು ಇವರ ಸನ್ಯಾಸಿತನವೆಲ್ಲ ।
ಪೂರ್ತ್ಯಾರ್ತೆಂದೆನಲು ಯತಿಯು ನಗುತಿದ್ದ ॥ ೧ ॥

ಮರುದಿನ ಅವರವರ ಪರೀಕ್ಷಿಸಬೇಕೆಂದು ।
ಕರೆದು ವಿದ್ವಾಂಸರನು ಕನಕಸಹಿತ ॥
ತ್ವರಿತದಲಿ ಕರದಲ್ಲಿ ಕದಳೀಫಲ ಕೊಟ್ಟು ಯಾ ।
ರಿರದ ಸ್ಥಳದಲ್ಲಿ ಮೆದ್ದು ಬನ್ನಿರೆನಲು ॥ ೨ ॥

ಊರಹೊರಗೆ ಹೋಗಿ ಬೇರೆಬೇರೆ ಕುಳಿತು ।
ತೋರದಲೆ ಎಲ್ಲರೂ ಮೆದ್ದು ಬರಲು ॥
ತೋರಲಿಲ್ಲವು ಎನಗೆ ಏಕಾಂತಸ್ಥಳವೆನುತ ।
ಸಾರಿ ಕದಳೀಫಲವ ತಂದು ಮುಂದಿಟ್ಟ ॥ ೩ ॥

ಡಿಂಭದೊಳು ಶಬ್ದವಾಗಾದಿ ಶ್ರೋತೃಗಳಲ್ಲಿ ।
ಇಂಬಾಗಿ ತತ್ವೇಶರೆಲ್ಲ ತುಂಬಿಹರು ॥
ತಿಂಬುವದು ಹ್ಯಾಂಗೆನುತ ವ್ಯಾಸರಾಯರ ಕೇಳೆ ।
ಸಂಭ್ರಮದಲವರೆಲ್ಲ ಕುಳಿತು ಕೇಳಿದರು ॥ ೪ ॥

ಕರದಲ್ಲಿ ಮೂರ್ತಿಯನು ಪಿಡಿದು ಕೇಳುತ್ತಿರಲು ।
ಅರಿಯದ ಜ್ಞಾನದಲಿ ಪೇಳುತಿರಲು ॥
ತ್ವರದಿ ಕನಕನು ಬಂದು ವಾಸುದೇವನ ರೂಪ ।
ಪರಬೊಮ್ಮ ಪುರಂದರಾವಿಠಲನೆಂದು ಪೇಳಿದನು ॥ ೫ ॥

ಈ ಪದ್ಯವು ಕನಕನ ಜ್ಞಾನವನ್ನು ಬಣ್ಣಿಸವುದಲ್ಲದೆ, ಕನಕನ ಬಗೆಗಿದ್ದ ಆ ಕಾಲದ ಭಾವನೆಗಳ ಚಿತ್ರವನ್ನೂ ಚಿತ್ರಿಸುತ್ತದೆ. ಹುರುಳನ್ನರಿಯದ ಮಡಿವಂತರು ತೊಂದರೆ ಕೊಟ್ಟಂತೆ ಕಾಣುವುದು. ಆದರೆ ಜ್ಞಾನಿಗಳಾದ ವ್ಯಾಸರಾಯರು ಕನಕನ ಯೋಗ್ಯತೆಯನ್ನರಿತು ಅವನನ್ನು ಪರೀಕ್ಷೆಗೆ ಒಳಪಡಿಸಿ "ಕನಕನು ಸಾಮಾನ್ಯನಲ್ಲ, ಮಹಾಮಹಿಮನು, ಅಪರೋಕ್ಷ ಜ್ಞಾನಿಯು" ಎಂಬುದನ್ನು ಜಗತ್ತಿನ್ನ ನಿದರ್ಶನಕ್ಕೆ ತಂದರು. "ಸುಜೀವಿಗಳೆಲ್ಲರೂ ಮೋಕ್ಷಕ್ಕೆ ಯೋಗ್ಯರು, ಪರಮಾತ್ಮನ ಸಾಕ್ಷಾತ್ಕಾರಕ್ಕೆ ಅರ್ಹರು, ಅಪರೋಕ್ಷ

ಜ್ಞಾನವು ಕೆಲವೇ ಜಾತಿಗಳಿಗಷ್ಟೇ ಮೀಸಲಾಗಿಲ್ಲ'' ಎಂದು ಸಾರಿದರು. ಶ್ರೀಮಧ್ವಾಚಾರ್ಯರು ಸುಜೀವಿಗಳೆಲ್ಲರೂ ಮೋಕ್ಷಕ್ಕೆ ಯೋಗ್ಯರು ಎಂದು ಹೇಳಿದ ಮಾತಿನ ಸತ್ಯತೆಯನ್ನು ಕನಕನ ಉದಾಹರಣೆಯಿಂದ ತೋರಿಸಿಕೊಟ್ಟರು. ಈ ಸಿದ್ಧಾಂತವು ಜಗತ್ತಿಗೆ ಮತ್ತೊಮ್ಮೆ ಬೆಳಕು ಕೊಟ್ಟಿತು.

೪. ಕನಕನು ಅನುಭಾವಿಯೂ ಅಪರೋಕ್ಷಜ್ಞಾನಿಯೂ ಇದ್ದಂತೆ ರಸಿಕ ಕವಿಯೂ ಪಂಡಿತನೂ ಎಂಬುದಕ್ಕೆ ಅವನ ಮೋಹನತರಂಗಿಣಿ, ನಳಚರಿತ್ರೆ, ವೇದಾಂತದ ಹಾಡುಗಳೇ ಸಾಕ್ಷಿ. 'ಬರೆಹವನು ಅರಿಯೆ ನಾ' ಎಂಬ ಅವನ ನುಡಿಯು ಅಹಂಕಾರದ ಖಂಡನೆಗೆ ಆಡಿದ ಮಾತು. ಶ್ರೀ ವ್ಯಾಸರಾಜರು, ಕುಮಾರವ್ಯಾಸ ಮೊದಲಾದವರೆಲ್ಲರೂ ಹೀಗೆಯೇ ಹೇಳಿಕೊಂಡಿರುವರು.

೫. ಆಸ್ತಿಕ್ಯಬುದ್ಧಿಯನ್ನೂ ಜ್ಞಾನ ಭಕ್ತಿ ವೈರಾಗ್ಯಗಳನ್ನೂ ಆತ್ಮಾನುಭವವನ್ನೂ ಜನಸಾಮಾನ್ಯರಲ್ಲಿ ಪ್ರಸಾರಮಾಡಲು ಹೊರಟ ಕನಕದಾಸನು ಮಹಾ ಮಹಾ ವಿದ್ವಾಂಸರನ್ನೂ ದಿಗಿಲುಗೊಳಿಸುವ ಹಾಡುಗಳನ್ನು ಹಾಡಿರುವುದೇಕೆ? 'ಕನಕನನ್ನು ಕೆಣಕಬೇಡ, ಕೆಣಕಿ ತಿಣಕಬೇಡ' ಎಂಬ ಗಾದೆಯು ಏಕೆ ಉಂಟಾಯಿತು?—ಎಂಬ ಪ್ರಶ್ನೆಯು ಉದ್ಭವಿಸುವುದು. 'ಕನಕನ ಮುಂಡಿಗೆಗಳು' ಎಂದು ಇಂತಹ ಹಾಡುಗಳು ಪ್ರಸಿದ್ಧವಿರುವುವು. ಕಟ್ಟಿಗೆಯ ದೊಡ್ಡ ತೊಲೆಯು (ಮುಂಡಿಗೆಯು) ಎತ್ತಲು ಹೇಗೆ ಸುಲಭಸಾಧ್ಯವಲ್ಲವೋ ಹಾಗೆಯೇ ಕನಕನ ಈ ಜಾತಿಯ ಹಾಡುಗಳನ್ನು ಸುಲಭವಾಗಿ ಅರ್ಥಮಾಡಲು ಸಾಧ್ಯವಿಲ್ಲೆಂದೇ ಇವುಗಳಿಗೆ ಮುಂಡಿಗೆಗಳೆಂದು ಕರೆದಿರುವರು. ಕನಕನು ಪಂಡಿತರನ್ನು ಎಚ್ಚರಿಸಿದುದನ್ನು ನೋಡಿದರೆ ಇಂತಹ ಹಾಡುಗಳನ್ನು ಹಾಡಿದುದರಲ್ಲಿ ಅಚ್ಚರಿಯೇನಿಲ್ಲ. ಈ ಪದ್ಧತಿಯು ನಮ್ಮ ಪ್ರಾಚೀನ ಕವಿಗಳಲ್ಲೆಲ್ಲ ಕಂಡುಬರುತ್ತದೆ. ಅಭಿನವಪಂಪನ 'ದನಮುಂ ಕಡಿಕಡಿದು ಬಸದಿಗೆಳೆಯುತ್ತಿರ್ಪರ್' ಎಂಬ ಸಮಸ್ಯಾಪೂರ್ತಿಯೂ, ಕುಮಾರವ್ಯಾಸನ 'ವೇದಪುರುಷನ ಸುತನ ಸುತನ ಸ। ಹೋದರನ ಮೊಮ್ಮಗನ ಮಗನ ತ। ಳೋದರಿಯ ಮಾತುಳನ ಮಾವನನತುಳ ಭುಜಬಲದಿ ॥' ಎಂಬ ಪದ್ಯವೂ ಇದೇ ವರ್ಗಕ್ಕೆ ಸೇರಿದವೆಂದು ಹೇಳಬಹುದು. ಕನಕನೂ ಇದೇ ಬಗೆಯಾಗಿ ಪಂಡಿತರನ್ನು ತಲೆ ತುರಿಸಿಕೊಳ್ಳಲು ಹಚ್ಚುವ ಕೆಲವು ಹಾಡುಗಳನ್ನು ಮಾಡಿರುವನು. ಅವುಗಳ ಅಭ್ಯಾಸವು ನಮ್ಮಲ್ಲಿ ಇನ್ನೂ ಆಗಬೇಕಾಗಿದೆ.

೬. ಇಂತಹ ಹಾಡುಗಳ ಬಗೆಗೆ ವಿಚಾರಮಾಡಿದರೆ ಕೆಳಗಿನ ವಿಚಾರಗಳು ಎದುರು ನಿಲ್ಲುತ್ತವೆ.

(೧) ಕೆಲವು ಪಾಂಡಿತ್ಯಪ್ರದರ್ಶನಕ್ಕಾಗಿ ಇರಬೇಕು. (೨) ಇನ್ನೂ ಕೆಲವು ಪಾಂಡಿತ್ಯಪರೀಕ್ಷೆಗಾಗಿಯೂ ಇದ್ದಂತೆ ಕಾಣುತ್ತವೆ. (೩) ಮತ್ತೆ ಕೆಲವು ಬುದ್ಧಿಪೂರ್ವಕವಾಗಿ ಗುಹ್ಯಭಾಷೆಯಲ್ಲಿ ಹೇಳಿದಂತೆ ಅನಿಸುವುದು.

(೪) ಕೆಲವೊಮ್ಮೆ ಜ್ಞಾನಿಜ್ಞಾನಿಗಳ ಆಂತರಿಕ ಭಾಷೆಯಾಗಿ ಹೊರಹೊಮ್ಮಿದ್ದನ್ನೂ ಕಾಣಬಹುದು. (೫) ಆತ್ಮಾನುಭವ ಹಾಗೂ ತತ್ವಜ್ಞಾನವನ್ನು ವಿವರಿಸಿದ್ದನ್ನು ನೋಡಬಹುದು. (೬) ಪಂಡಿತರನ್ನೂ ಪೌರಾಣಿಕರನ್ನೂ ಕೆಣಕಿದ ಕೆಲವು ಹಾಡುಗಳನ್ನೂ ಕಾಣಬಹುದು. ಈ ಎಲ್ಲ ಜಾತಿಯ ಹಾಡುಗಳನ್ನೂ ಕನಕನು ಹಾಡಿದ್ದಾನೆ. ಇವೇ ಕನಕನ ಮುಂಡಿಗೆಗಳು. ಇವುಗಳಲ್ಲಿ ನನಗೆ ಅರ್ಥವಾಗಿವೆ ಎಂದು ತಿಳಿದುಕೊಂಡ ಕೆಲವನ್ನು ಇಲ್ಲಿ ವಿವರಿಸುವೆ. ತಪ್ಪಿದ್ದನ್ನು ಬಲ್ಲವರು ತಿಳಿಸುವ ಕೃಪೆಮಾಡಬೇಕು.

೭. ತತ್ವಜ್ಞಾನದ ಹಾಡುಗಳನ್ನು ತಿಳಿದುಕೊಳ್ಳುವಾಗ ಕನಕನ ತತ್ವಜ್ಞಾನ ಯಾವುದು ಎಂಬ ಪ್ರಶ್ನೆಯು ಉದ್ಭವಿಸುವುದು. ಈ ಬಗೆಗೆ ವಿದ್ವಾಂಸರಲ್ಲಿ ಮತಭೇದವಿದೆ. ಕೆಲವರು ಶ್ರೀವೈಷ್ಣವಪಂಥವೆಂದೂ ಕೆಲವರು ಮಾಧ್ವ ಸಂಪ್ರದಾಯವೆಂದೂ ಹೇಳುವರು. ಮೋಹನತರಂಗಿಣಿಯನ್ನು ಬರೆದ ತರುಣ ಕನಕನು ರಸಿಕನೂ ಅಹುದು, ಅಪರೋಕ್ಷಜ್ಞಾನಿಯಾದ ಇಳಿ ವಯಸ್ಸಿನ ಕನಕನು ವಿರಾಗಿಯೂ ಅಹುದು, ಎಂದು ಹೇಳಲು ಬರುವಂತೆ, ಭಕ್ತನಾದ ಕನಕನು ಮೋಹನತರಂಗಿಣಿಯಲ್ಲಿ "ರಾಮಾನುಜಾಗಮವ ಸ್ಮರಿಸಿ ಮನೋನು ರಾಗವನಾಂತು ಕೃತಿಯ ಬಿತ್ತರಿಸುವೆ" (ಸ. ೩೬, ಪ. ೨) ಎಂದು ಹೇಳಿದಂತೆ ರಾಮಾನುಜ ಪಂಥೀಯ.... ಇರಬಹುದು. ಇಳಿ ವಯಸ್ಸಿನಲ್ಲಿ ಶ್ರೀ ವ್ಯಾಸ ರಾಯರ ಹಾಗೂ ಶ್ರೀ ವಾದಿರಾಜರ ಸಾನ್ನಿಧ್ಯದಿಂದ ಪರಿವರ್ತನೆಯಾಗಿ ವೈಷ್ಣವನಾಗಿದ್ದರೆ ಆಶ್ಚರ್ಯವೇನಲ್ಲ. ಈ ದೃಷ್ಟಿಯಿಂದಲೇ ಅವನ ಕವನಗಳ ಕಡೆಗೆ ನೋಡಬೇಕು. ವ್ಯತ್ಯಾಸಗಳು ಬಂದರೆ ಮೇಲಿನಂತೆ ಸಮನ್ವಯ ಮಾಡಿ ಕೊಳ್ಳಬೇಕು.

ಮುಂಡಿಗೆಗಳನ್ನು ನೋಡಿ—

ಈ ಮಂಗಳ ಪದ್ಯವು ಪುರಾಣಗಳ ಆಳವಾದ ಅಭ್ಯಾಸವನ್ನು ಸೂಚಿಸು ವುದಲ್ಲದೆ ಪುರಾಣಿಕರ ತಲೆ ಕೆಡಿಸುವುದು.

**ರಾಗ ಸುರಟಿ—ತಾಳ....**

ಮಂಗಳಂ ಮಂಗಳಂ ॥ ಪ ॥

ಅಂಧಕ[1]ನನುಜನ[2] ಕಂದನ[3] ತಂದೆಯ[4]
ಕೊಂದನ[5] ಶಿರದಲಿ ನಿಂದವನ[6]
ಚಂದದಿವಡೆದನ[7] ನಂದನೆಯಳ[8] ನಲ
ವಿಂದಧರಿಸಿದ[9] ಮುಕುಂದನಿಗೆ ॥ ೧ ॥

---

[1] ಧೃತರಾಷ್ಟ್ರ, [2] ಪಾಂಡುರಾಜ, [3] ಧರ್ಮರಾಯ, [4] ಯಮ, [5] ಈಶ್ವರ, [6] ಚಂದ್ರ, [7] ಸಮುದ್ರರಾಜ, [8] ಲಕ್ಷ್ಮಿ, [9] ವಿಷ್ಣು.

ರಥವನಡರಿ[10] ಸುರಪಥದಲಿ ತಿರುಗುವ
ಸುತನಿಗೆ[11] ಶಾಪವನಿತ್ತವನ[12]
ಕ್ಷಿತಿಯನು[13] ತಡೆದನ ಸತಿಯ[14] ಜನನಿ[15] ಸುತ[16]
ಸತಿಯರನಾಳಿದ[17] ಚತುರನಿಗೆ[18] ॥ ೨ ॥

ಹರಿಯ[19] ಮಗನ[20] ಶಿರತರಿದನ[21] ತಂದೆಯ[22]
ಹಿರಿಯಮಗನ[23] ತಮ್ಮನ[24] ಪಿತನ[25]
ಭರದಿಭುಜಿಸಿದನ ಶಿರದಲಿ[26] ನಟಿಸಿದ[27]
ವರಕಾಗಿನೆಲೆಯಾದಿಕೇಶವಗೆ ॥ ೩ ॥

ಪೌರಾಣಿಕರನ್ನು ದಿಗ್ಭ್ರಮೆಗೊಳಿಸುವ ಇನ್ನೊಂದು ಪದ್ಯ ನೋಡಿ—

ರಾಗ ಭೈರವಿ—ಅಟತಾಳ

ರಮಣಿ ಕೇಳಲಿ ಮೋಹನ ಶುಭಕಾಯನ
ಅಮರವಂದಿತ ರವಿಶತಕೋಟಿತೇಜನ
ವಿಮಲಚರಿತ್ರದಿ ಮೆರೆವ ಶ್ರೀಕೃಷ್ಣನ
ಕಮಲವದನೆ ನೀ ತೋರೆ ರಮಣಿ ॥ ಪ ॥

ಬಾಯೊಳಗಿಹಳ[1] ಗಂಡನ[2] ನಿಜತಮ್ಮನ[3]
ತಾಯ[4] ಪಿತನ[5] ಮಡದಿಯ[6] ಧರಿಸಿದನ[7]
ಸ್ತ್ರೀಯಳ[8] ಸುತನ[9] ಕೈಯಲಿ ಶಾಪಪಡೆದನ[10]
ದಾಯಾದ್ಯನ[11] ಮಗನ[12]
ಸಾಯಕವದು[13] ತೀವ್ರದಿ ಬರುತಿರೆ ಕಂಡು
ಮಾಯಾಪತಿ[14] ಭೂಮಿಯನೊತ್ತಿ ತನ್ನಯ
ಬೀಯಗನ[15] ತಲೆಗಾಯಿದಂಥ
ರಾಯನ ಕರೆದ ತೋರೆ ॥ ೧ ॥

ನಾಲಿಗೆ ಎರಡರವನ[16] ಭುಂಜಿಸುವನ[17]
ಮೇಲೇರಿಬಹನ[18] ತಂದೆಯು[19] ಇಹಗಿರಿಯನು[20]
ಲೀಲೆಯಿಂದಲಿ[21] ಕಿತ್ತೆತ್ತಿದ ಧೀರನ
ಕಾಳಗದಲಿ[22] ಕೊಂದನ

---

[10] ಸೂರ್ಯ, [11] ಕರ್ಣ, [12] ಪರಶುರಾಮ, [13] ರಾಮ, [14] ಸೀತೆ, [15] ಭೂಮಿದೇವಿ, [16] ನರಕಾಸುರ, [17] ಹದಿನಾರು ಸಾವಿರ ಗೋಪಿಯರು, [18] ಕೃಷ್ಣ, [19] ಸೂರ್ಯ, [20] ಕರ್ಣ, [21] ಅರ್ಜುನ, [22] ಪಾಂಡು, [23] ಯುಧಿಷ್ಠಿರ, [24] ಭೀಮ, [25] ವಾಯು, [26] ಸರ್ಪ, [27] ಕೃಷ್ಣ.

[1] ಸರಸ್ವತಿ, [2] ಬ್ರಹ್ಮ, [3] ಕಾಮ, [4] ಲಕ್ಷ್ಮಿ, [5] ಸಮುದ್ರರಾಜ, [6] ಗಂಗೆ, [7] ಶಿವ, [8] ಪಾರ್ವತಿ, [9] ಗಣಪತಿ, [10] ಚಂದ್ರ, [11] ಸೂರ್ಯ, [12] ಕರ್ಣ, [13] ಸರ್ಪಾಸ್ತ್ರ, [14] ಕೃಷ್ಣ, [15] ಅರ್ಜುನ, [16] ಹಾವು, [17] ನವಿಲು, [18] ಷಣ್ಮುಖ, [19] ಶಿವ, [20] ಕೈಲಾಸ, [21] ರಾವಣ, [22] ರಾಮ.

ಲೋಲಲೋಚನೆಯು[23] ಮಾತೆಯು[24] ಪುತ್ರ[25]ನಣುಗನ[26]
ಮೇಲುಶಕ್ತಿಗೆ[27] ಉರವಾಂತು[28] ತನ್ನವರನ್ನು[29]
ಪಾಲಿಸಿದಂಥ ದಾತನಹ ದೇವನ
ಲೋಲೆ ನೀ ಕರೆದು ತೋರೆ ॥ ೨ ॥

ಉರಿಯೊಳು ಜನಿಸಿದವನ[30] ನಿಜತಂಗಿಯು[31]
ಶರಗಪಿಡಿದ ಖಳ[32]ನಣ್ಣನ[33] ತಂಗಿಯ[34]
ವರನ[35] ತಲೆಯನು ಕತ್ತರಿಸಿದ ಧೀರನ[36]
ಗುರು[37]ವಿನೊಳುದಿಸಿದನ[38]
ಶರವ[39] ತಪ್ಪಿಸಿ ತನ್ನ ದಾಸರ್ಗೆ ಅನುದಿನ
ಕರೆದು ವರವನಿತ್ತು ಮನ್ನಿಸಿ ಸಲಹುವ
ಉರಗಗಿರಿಯ ಕಾಗಿನೆಲೆಯಾದಿಕೇಶವನ
ಗರತಿ ನೀ ಕರೆದು ತೋರೆ ॥ ೩ ॥

ಸಾಧಕನಿಗೆ ಮಾರ್ಗದರ್ಶನ ಮಾಡುವ ಸಾಂಕೇತಿಕ ಮುಂಡಿಗೆಯು—

**ರಾಗ ಮುಖಾರಿ—ಝಂಪೆ ತಾಳ**

ಏನಿದೆತ್ತಣ ಬಯಕೆ ಎಲೊ ಮಂಕುಜೀವ ।
ನೀನರಿತರೆ ಪೇಳು ನಿಜವಾಗಿ ಎನಗೆ ॥ ಪ ॥

ಎಂಟೆರಡು[1] ಮಾರುತರು ಎಡೆಎಡೆಗೆ ಬರುತಿರಲು ।
ನೆಂಟರೈವರು[2] ಕೂಡಿ ಆಕ್ರಮಿಸುತಿಹರು ॥
ದಾಂಟುವದಶಕ್ಯ ಎರಡೊಂದು[3] ಬಳೆಗಳಲಿ ।
ಕಂಟಕದಿ ಕಡುತಾಪದಿಂದ ಬಳಲುವರು ॥ ೧ ॥

ಆರೆರಡು ದಂತಿಗಳು[4] ದಾರಿಯೊಳು ನಿಂದಿಹವು ।
ಆರುಮೂರು ತುರುಗಳು[5] ದಾರಿಗೊಂಡವು ॥
ಮೂರೆರಡು ನೀಡಾಡಿ[6] ಕೋರುವದು ಎನ್ನಾಣೆ ।
ಸಾರಿ ಏನೇನಹುದೆಂಬುದನು ನೋಡು ॥ ೨ ॥

ಪರರನ್ನು ನಿಂದಿಸದೆ ಪರಕೆ[7] ಯೋಗ್ಯನಾಗಿ ।
ಪರರ ಪಾಪ ನೀ ಕಟ್ಟಿಕೊಳದೆ ॥
ಪರಮಾತ್ಮ ಕಾಗಿನೆಲೆಯಾದಿಕೇಶವರಾಯ ।
ಪರಹಿತಕೆ ಸಖನೆಂದು ಭಜಿಸೆಲೋ ಮನುಜ ॥ ೩ ॥

---

[23] ಸೀತೆ, [24] ಭೂದೇವಿ, [25] ನರಕಾಸುರ, [26] ಭಗದತ್ತ, [27] ವರಾಹಾಸ್ತ್ರ, [28] ಕೃಷ್ಣ, [29] ಪಾಂಡವರು, [30] ದೃಷ್ಟದ್ಯುಮ್ನ, [31] ದ್ರೌಪದಿ, [32] ದುಶ್ಶಾಸನ, [33] ದುರ್ಯೋಧನ, [34] ದುಶ್ಶಳೆ, [35] ಜಯದ್ರಥ, [36] ಅರ್ಜುನ, [37] ದ್ರೋಣ, [38] ಅಶ್ವತ್ಥಾಮ, [39] ಬ್ರಹ್ಮಾಸ್ತ್ರ.

[1] ದಶೇಂದ್ರಿಯಗಳ ವಿಷಯಗಳು, [2] ಪಂಚಕರ್ಮೇಂದ್ರಿಯಗಳು, [3] ಈಷಣ ತ್ರಯಗಳು (ಹೆಣ್ಣು, ಹೊನ್ನು, ಮಣ್ಣು), [4] ಅಷ್ಟಮದಗಳು, [5] ನವವಿಧ ಭಕ್ತಿಗಳು, [6] ಷಡ್ರಿಪುಗಳು, [7] ಮೋಕ್ಷಕ್ಕೆ.

ವೈಷ್ಣವಸಿದ್ಧಾಂತದಲ್ಲಿ ಮಹಾದೇವರು ಮನೋಸಿಯಾಮಕರು. ಮನಸ್ಸಿನ ಸ್ಥಿತಿಯನ್ನು ಬಹು ಸುಂದರವಾಗಿ ವರ್ಣಿಸಿದ ಪದವಿದು:

**ರಾಗ ಸೌರಾಷ್ಟ್ರ—ಅಟ ತಾಳ**

ಕೆಂಪುಮೂಗಿನ[1] ಪಕ್ಷಿ ತಂಪಿನೊಳಿರುವದು[2] ।
ನೆಂಪು ಬಲ್ಲವರು ಪೇಳಿ ॥ ಪ ॥

ಹಂಪೆಯ ವಿರೂಪಾಕ್ಷಲಿಂಗನಲ್ಲಿ ।
ಝುಂಪಿಯನಾಡುತಿದೆ[3] ॥ ಅ. ಪ ॥

ಆರು ತಲೆಯು[4] ಹದಿನಾರು ಕಣ್ಣು[5]ಗಳುಂಟು ।
ಮೂರು ಮೂರು ನಾಲಿಗೆ[6] ॥
ಬೇರೆ ಹನ್ನೆರಡು ಕಣ್ಣು ಕಿವಿಗಳುಂಟು[7] ।
ಸೇರಿತು ತೆಂಕಲಾಗೆ[8] ॥ ೧ ॥

ಬಲೆಯ ಬೀಸಿದರಂ ಸಿಕ್ಕದು ಆ ಮೃಗ ।
ಜಲದೊಳು ತಾನಿಲ್ಲದು ॥
ನೆಲನ ಮೇಲಿರುವದು[9] ನಿಂತರೆ ಸಾವುದು[10] ।
ಕುಲದೊಳಗಾಡುತಿದೆ[11] ॥ ೨ ॥

ಸಕಲ ಕಲೆಯು[12] ಬಲ್ಲ ಸೀತಳ ಮಲ್ಲಿಗೆ ।
ಬೇರೆ ಬೇರೆನಬಹುದು[13] ॥
ಚೆನ್ನಕೇಶವನಲ್ಲಿ ಕೃಪೆಯುಂಟಾದರೆ ।
ಅಲ್ಲುಂಟು ಇಲ್ಲಿಲ್ಲವೆ ॥ ೩ ॥

---

[1] ರಜೋಗುಣಕಾರ್ಯದಲ್ಲಿ ತೊಡಗಿದ ಮನಸ್ಸು. [2] ಉಲ್ಲಾಸದಲ್ಲಿರುವುದು. [3] ರುದ್ರದೇವರ ಸುತ್ತಲೂ ಝೇಂಕರಿಸುತ್ತಿರುವದು. [4] ಪಂಚೇಂದ್ರಿಯಗಳು (ಜ್ಞಾನೇಂದ್ರಿಯ) ಹಾಗೂ ಮನ ಇವೇ ಸಿರಸ್ಸು. [5] ಪಂಚಜ್ಞಾನೇಂದ್ರಿಯ, ಪಂಚ ಕರ್ಮೇಂದ್ರಿಯ, ಪಂಚತನ್ಮಾತ್ರಗಳು ಹಾಗೂ ಆತ್ಮಾ,—ಈ ಹದಿನಾರು ಕಣ್ಣುಗಳು. [6] ಸಾತ್ವಿಕ, ರಾಜಸ, ತಾಮಸ ಗುಣಗಳ ತ್ರಿಪುಟಿಯಿಂದ ಉಂಟಾದ ೯ ವಿಧದ ವಾಗ್ವ್ಯಾಪಾರ ಉಳ್ಳುದು. [7] ಪಾರಲೌಕಿಕಜ್ಞಾನಸಾಧನಭೂತವಾದ ಕಣ್ಣು ಕಿವಿಗಳಂತೆ ಇರತಕ್ಕ ೪ ವೇದ, ೬ ಶಾಸ್ತ್ರ, ಇತಿಹಾಸ ಹಾಗೂ ಪುರಾಣ ದರ್ಶನೀಯವಾದಾಗ ಕಣ್ಣುಗಳು, ಶ್ರೋತ್ರವಾದಾಗ ಕಿವಿಗಳು. [8] ಪರಮಾತ್ಮನಲ್ಲಿ ಶಾಂತವಾಗುವದು. [9] ದೇಹದಲ್ಲಿ. [10] ಭಗವನ್ನಿಷ್ಠವಾದರೆ ಅಹಂಕಾರನಾಶವಾಗುವದು. [11] ದೇಹದೊಳಗೆ. [12] ಅನೇಕ ಜನ್ಮಗಳಲ್ಲಿ ಸಂಸ್ಕಾರಪಡೆದ ಸುಮನಸ್ಸು. [13] ವಿವಿಧ.

ಸಕೃದ್ದರ್ಶನಕ್ಕೆ ಅತ್ಯಂತ ವಿರುದ್ಧವಾಗಿ ಕಾಣುವ ಈ ಪದ್ಯದಲ್ಲಿಯ ಮಾತುಗಳನ್ನು ವಿಚಾರವಮಾಡಿ ನಿಜಾರ್ಥವನ್ನು ತಿಳಿದಾಗ ಕನಕನ ಬಹುಶ್ರುತತ್ವವೂ ಪಾಂಡಿತ್ಯವೂ ವ್ಯಕ್ತವಾಗಿ ಆನಂದವಾಗುವುದು.

**ರಾಗ ಕಾಂಭೋದಿ–ರೂಪಕ ತಾಳ**

ಸಹಜವಿದು ಈ ನುಡಿಯು ಸಟಿಯ ಮಾತಲ್ಲ ।
ಮಹಿಯೊಳಗೆ ಪೇಳುವೆನು ವಿಹಿತವಾಕ್ಯಗಳ ॥ ಪ ॥

ಶ್ರುತಿಶಾಸ್ತ್ರಪುರಾಣಗಳ ಓದುವನೆ ಶೂದ್ರ[1] ।
ಅತಿಥಿಗಾದರಿಸುವವನೆ ಅತಿಲುಬ್ಧನು[2] ॥
ಪ್ರತಿದಿವಸ ಸಂಧ್ಯಾನವನು ಮಾಡುವನೆ ಪಾಪಿ[3] ।
ಪತಿಯಾಜ್ಞೆಯಿಂದಿಹಳೆ ಪರಮಪಾತಕಿಯು[4] ॥ ೧ ॥

ದಾನಧರ್ಮಂಗಳನು ಬಿಡುವನೇ ಧರ್ಮಾತ್ಮ[5] ।
ಮಾನಾಭಿಮಾನವನು ಹಿಡಿದವನೆ ಯೋಗಿ[6] ॥
ಪ್ರಾಣಿಗಳ ಹಿಂಸೆಯ ಮಾಡುವನೆ ಸುಜ್ಞಾನಿ[7] ।
ದೀನ ಸಜ್ಜನರ ಕೆಡಿಸುವವನೆ ಸತ್ಪುರುಷ[8] ॥ ೨ ॥

ಕೆರೆಕಟ್ಟಿ ಪೂದೋಟ ರಚಿಸುವವನೆ ದ್ರೋಹಿ[9] ।
ಗುರುಹಿರಿಯರ ಬೈವವನೆ ಶಿಷ್ಟ[10] ॥
ಸಿರಿಕಾಗಿನೆಲೆಯಾದಿಕೇಶವನ ಚರಣವನು ।
ನಂಬುವನೆ ಅವಿಚಾರಿ ಪುರುಷ[11] ॥ ೩ ॥

---

[1] ಶೂದ್ರ = ಶುಚಃ ದ್ರವತೀತಿ ಶೂದ್ರ. ಶುಚಃ = ಶೋಕಮಯವಾದ ಸಂಸಾರದಿಂದ, ದ್ರವತೀತಿ = ದೂರಹೋಗುವವ (ಛಾಂದೋಗ್ಯ ಉ.), ಶ್ರುತಿಶಾಸ್ತ್ರ ಪುರಾಣಗಳ ಅಧ್ಯಯನದಿಂದ ಪಾಪಗಳನ್ನು ತ್ಯಜಿಸಿ ದೂರವಾಗುವ.

[2] ಅತಿಥಿಸತ್ಕಾರದಿಂದ ಧನ ವೆಚ್ಚವಾದರೂ ಪುಣ್ಯದಲ್ಲಿ ಆಶೆಯುಳ್ಳವ.

[3] ಪಾಪಗಳು ನಾಶವಾಗಲಿ ಎಂಬ ಅನುಸಂಧಾನದಿಂದ ಸಂಧ್ಯಾದಿ ಕರ್ಮಗಳನ್ನು ಮಾಡುವ, ಪಾಪಾನುಸಂಧಾನ ಉಳ್ಳವ.

[4] ಪಾತಯತೀತಿ–ಪಾತಕಿ. ಪಾತಿವ್ರತ್ಯಪ್ರಭಾವದಿಂದ ಪಾತಕಿಗಳನ್ನು ಕೆಡವತಕ್ಕಳು.

[5] ದಾನಧರ್ಮಗಳ ಫಲಾಪೇಕ್ಷೆ ಬಿಟ್ಟವನು ಧರ್ಮಾತ್ಮ.

[6] ಮಾನ = ಜ್ಞಾನ, ಅಭಿಮಾನ = ಶ್ರೇಯಸ್ಕರ ಬುದ್ಧಿ ಇವುಗಳುಳ್ಳವನೇ ಯೋಗಿ.

[7] ಪರಮಾತ್ಮನ ಪೂಜಾರೂಪವಾಗಿ ಹಿಂಸೆಮಾಡತಕ್ಕವನು ಸುಜ್ಞಾನಿ. (ಗೀತೆ)

[8] ಸಜ್ಜನರ ದೈನ್ಯವೃತ್ತಿಯನ್ನು ಮಾಡುವವನೇ ಸತ್ಪುರುಷ.

[9] ಕೆರೆ, ಕಾಲುವೆ ಮೊದಲಾದವುಗಳನ್ನು ಕಟ್ಟಿಸಿ, ಅವುಗಳನ್ನುಪಯೋಗಿಸುವವರ ಪುಣ್ಯವನ್ನು ಅವರಿಗೆ ತಿಳಿಯದಂತೆ ಹರಣಮಾಡುವವನಾದ್ದರಿಂದ ದ್ರೋಹಿ.

[10] ಗುರುಹಿರಿಯರ ಶಾಸ್ತ್ರ ಅಸಮ್ಮತವಾದ ದೋಷಗಳನ್ನು ಬೈಲಿಗೆಳೆಯುವವ ಶಿಷ್ಟ.

[11] ಪರಮಾತ್ಮನಲ್ಲಿ ಸರ್ವಸಮರ್ಪಣ ಮಾಡಿ ಶಾಂತನಾದವ ಅ-ವಿಚಾರಿ. ಅಕಾರವಾಚ್ಯನಾದ ಪರಮಾತ್ಮನ ವಿಚಾರ ತಿಳಿದ ಪುರುಷ.

ಮೇಲಿನ ಪದ್ಯಕ್ಕೆ ಬೇರೆ ಕೆಲವರು ಸುಲಭವಾಗಿ ಇನ್ನೊಂದು ರೀತಿಯಿಂದ ಅರ್ಥ ಹೇಳುತ್ತಾರೆ. ಶಾಸ್ತ್ರಪುರಾಣಾದಿಗಳನ್ನು ಓದುವವನು ಶೂದ್ರನೇ? ಅಂದರೆ ಅಲ್ಲ ಎಂಬ ಅರ್ಥ. ಹೀಗೆಯೇ ಎಲ್ಲವನ್ನೂ ಪ್ರಶ್ನಿಸಿ ಅರ್ಥ ಹೇಳುವುದುಂಟು. ಆದರೆ ಮೊದಲಿನ ಅರ್ಥದ ಸ್ವಾರಸ್ಯವು ಇದರಲ್ಲಿ ಬರಲಾರದು.

ಮುಕ್ತಜೀವಿಯ ಸ್ಥಿತಿಯನ್ನೂ ಜೀವನದ ಸ್ವರೂಪವನ್ನೂ ಪರಮಾತ್ಮನ ಲಕ್ಷಣವನ್ನೂ ಜೀವನಿಗೆ ಉಪದೇಶವನ್ನೂ ಮಾಡುವ ಕೆಳಗಿನ ಪದ್ಯವು ಶ್ರುತಿ ಶಾಸ್ತ್ರಗಳಿಂದ ಕೂಡಿದ ಅಮೂಲ್ಯವಾದ ಪದ್ಯ.

### ರಾಗ ಸೌರಾಷ್ಟ್ರ–ಛಾಪು ತಾಳ

(೧) ಮುತ್ತುಗಳಾ ಹಣ್ಣು ಕಾಯಾದ ಬಳಿಕಿನ್ನು ।
ಮತ್ತೊಂದು ಚೋದ್ಯ ಕೇಳಿ ॥
ಚಿತ್ರದ ಹೂವಿನ ಹವಳ ಕಾಯಾಗುವ ।
ಅರ್ಥವು ತಿಳಿದು ಪೇಳಿ ॥ ೧ ॥

(೨) ಸುಟ್ಟಬೀಜವ ಬಿತ್ತಿ ಬೆಳೆಯಲಾರದ ಕಾಯಿ ।
ಬೆಟ್ಟದಿ ಸಾರವನು ॥
ತೊಟ್ಟು ಇಲ್ಲದ ಹಣ್ಣು ಮುಟ್ಟಿಕೊಯ್ವನು ಒಬ್ಬ ।
ಹುಟ್ಟು ಬಂಜೆಯ ಮಗನು ॥ ೨ ॥

(೩) ಒಣಗಿದ್ದ ಮರನೇರಿ ಹಣ್ಣು ಕಾಯನು ಮನ ।
ದಣಿಯದೆ ಮೆದ್ದಿಳಿದ ।
ರಣದಲ್ಲಿ ತಲೆಹೊಯ್ದು ರುಂಡವು ಬೀಳಲು ॥
ಹೆಣನೆದ್ದು ಕುಣಿದಾಡಿತು ॥ ೩ ॥

(೪) ಕಣ್ಣಿಲ್ಲದಾತನು ಕಂಡುಪಿಡಿದ ಮೃಗ ।
ಕೈಯಿಲ್ಲದಾತ ನೆಟ್ಟ ॥
ಮಣ್ಣಲಿ ಹೊರಳುವ ಕಾಲಿಲ್ಲದಾತನು ॥
ಗಣ್ಯವಿಲ್ಲದೆ ಪಿಡಿದ ॥ ೪ ॥

(೫) ಎಲ್ಲರೂ ಕೇಳಿರಿ ಕನಕ ಹೇಳಿದ ಮಾತ ।
ಎಲ್ಲರೂ ಗ್ರಹಿಸಿಕೊಳ್ಳಿ ॥
ಬೆಳ್ಳಿಕಣ್ಣಿನವರೆ ತಿಳಿಯಲಾರದ ಮಾತು ।
ಬಲ್ಲಾದಿಕೇಶವನು ॥ ೫ ॥

### ವಿವರ

(೧) ಮುತ್ತುಗಳು – ಮುಕ್ತರು. ಜೀವವು ಪರಿಪಕ್ವವಾಗಿ ಮುಕ್ತವಾದ ಬಳಿಕ ಮತ್ತೆ ಕಾಯವನ್ನು (ದೇಹ) ಹೊಂದಿದಾಗ ಅದರ ಮಹತ್ವವನ್ನು ಕೇಳಿರಿ.

ಪುಷ್ಪ = ಐಹಿಕ ಫಲ, ಕಾಯಿ = ಮೋಕ್ಷಫಲ (ಇವು ವೈದಿಕ ಶಬ್ದಗಳಲ್ಲಿ ಉಪಯೋಗಿಸುವ ಅರ್ಥ). ಸಾಧಕನಾದ ಜೀವನಿಗೆ, ಚಿತ್ರದ ಪ್ರತೀಕವೇ ಧ್ಯಾನಾದಿ ಸಾಧನಗಳಿಂದ ಫಲಪುಷ್ಪ ಕೊಡುವಾಗ ಮುಕ್ತನಾಗಿ (ಸಕಲ ಸಂಸಾರಬಂಧನಗಳಿಂದ ಮುಕ್ತನಾದ) ಸಾಕ್ಷಾತ್ ಪರಮಾತ್ಮನನ್ನೇ ಧ್ಯಾನಿಸುವ ದೇಹಧಾರಿಯಾದವನ ಕೇಳುವುದೇನು? ಅರ್ಥಾತ್ ಆ ಮುಕ್ತನು ಅತಿಶಯಾನಂದದಿಂದ ಕುಣಿದಾಡುವನು ಎಂದರ್ಥ.

(೨) ಸುಟ್ಟ = ಸಕಲ ಬಂಧನದ ಪರೆಗಳನ್ನು (ಆವರ್ಣ) ಕಳೆದುಕೊಂಡ ಜೀವನು:

ಸಾಧನದಿಂದ ಸಕಲ ದೋಷಗಳನ್ನು ಕಳೆದುಕೊಂಡ ಜೀವನು ಸಂಸಾರದಲ್ಲಿ ಮರಳಿ ಬರುವುದಿಲ್ಲ. (ಬೆಳೆಯಲಾರದ ಕಾಯಿ ಮೋಕ್ಷವನ್ನು ಪಡೆದು ಬಿಟ್ಟದಿ) ಅಲ್ಲಿ ಆನಂದದ ಅಮೃತವನ್ನು ಅದರ ಒಂದು ಹನಿಯನ್ನೂ ಬೀಳಗೊಡದೆ ಸೇವಿಸುತ್ತಿರುವ ಪರಿಪಕ್ವ ಜೀವನವನ್ನು (ಹಣ್ಣು) ಹುಟ್ಟುಬಂಜೆಯ ಮಗನಾದ ಪರಮಾತ್ಮನು ಆ ಹಣ್ಣನ್ನು ಕೊಯ್ಯುವನು. ಅಂದರೆ ಅನುಗ್ರಹಿಸುವನು, ತನ್ನಲ್ಲಿ ಸಂಗ್ರಹಿಸುವನು.

ಪರಮಾತ್ಮನು ಯಾರಿಗೆ ಮಗನಾಗುವನೋ ಅವರು ನಿಜವಾಗಿಯೂ ಅವನ ತಾಯಿಯಲ್ಲ. ಅವಳ ಮಾತೃತ್ವವು ಅನ್ವರ್ಥಕವಲ್ಲ. ಅಂದರೆ ಬಂಜೆಯೆಂಬರ್ಥ ಅಥವಾ ಹುಟ್ಟುಬಂಜೆಯು ಕೂಡ ಪರಮಾತ್ಮನ ಆರಾಧನೆ ಮಾಡಿದರೆ ಪರಮಾತ್ಮನು ಅವಳಿಗೆ ಮಗನಾಗುವನು ಅಂದರೆ ಲಭ್ಯನಾಗುವನು—

ಮಾ ರಕ್ಷತು ವಿಭುರ್ನಿತ್ಯಂ ಪುತ್ರೋಽಹಂ ಪರಮಾತ್ಮನಃ ।

(೩) ಇದರಲ್ಲಿ ಸಾಂಸಾರಿಕ ಜೀವನ ವರ್ಣನೆಯಿದೆ:

ಶುಷ್ಕವಾದ ದೇಹವನ್ನು ಹೊಂದಿ ಅದರಲ್ಲಿಯ ರಸವನ್ನು ಸೇವಿಸಿ ತೃಪ್ತಿಯನ್ನು ಪಡೆಯದೆ ಅದಕ್ಕಾಗಿ ತನ್ನ ಶತ್ರುಗಳೊಡನೆ (ಅರಿಷಡ್ವರ್ಗಗಳೊಡನೆ) ಹೋರಾಡುತ್ತ ತನ್ನ ತಲೆಯನ್ನು ಕಳೆದುಕೊಂಡು ವ್ಯರ್ಥವಾಗಿ ಕುಣಿದಾಡುತ್ತದೆ. ಆದುದರಿಂದ ಇಂತಹ ಸಂಸಾರದಲ್ಲಿಯ ಆಸಕ್ತಿ ತೊರೆಯಬೇಕೆಂದರ್ಥ.

(೪) ಪರಮಾತ್ಮನ ವರ್ಣನೆ:

ಪ್ರಾಕೃತ ಕಣ್ಣು, ಕಿವಿ, ಕಾಲು ಮೊದಲಾದವುಗಳು ಇಲ್ಲದ ಪರಮಾತ್ಮನು ಈ ಜೀವನನ್ನು ಅನಾಯಾಸವಾಗಿ ಕಂಡುಹಿಡಿದು ಏನೂ ಶ್ರಮವಿಲ್ಲದೆ ಅವನ ಉದ್ಧಾರಕ್ಕಾಗಿ ಸಂಸಾರದಲ್ಲಿ ನೂಕಿ, ಅವನ ವಿಕಾಸವನ್ನು ಮಾಡುವನು. ಸುಜೀವಿಗಳಿಗೆ ಆನಂದವನ್ನು ಕೊಡುವನು. ಇದು ಅವನಿಗೆ ಲೀಲೆಯು—

ಅಪಾಣಿಪಾದೋ ಜವನೋ ಗೃಹೀತ। (ಶ್ವೇತಾಶ್ವತರ.)

(೫) ಪರಮಾತ್ಮನ ಈ ಜ್ಞಾನವನ್ನು ತಿಳಿದುಕೊಳ್ಳಲು ಜೀವರೆಲ್ಲರೂ ಅಧಿಕಾರಿಗಳಾದುದರಿಂದ ಎಲ್ಲರೂ ಗ್ರಹಿಸಿಕೊಳ್ಳಿರಿ, ತಿಳಿದುಕೊಳ್ಳಿರಿ.

ಬೆಳ್ಳಿಯ ಕಣ್ಣಿನವಗೆ ಅಂದರೆ ಪ್ರಾಕೃತಚಕ್ಷುಗಳಿಗೆ ಅಥವಾ ಬೆಳ್ಳಿ= ಬೆಳ್ಳಿಬಂಗಾರ ಧನದಲ್ಲಿಯೇ ಕಣ್ಣುಳ್ಳ (ಆಶೆಯುಳ್ಳ) ವರಿಗೆ ಈ ಜ್ಞಾನವಾಗ ಲಾರದು. ಆದುದರಿಂದ ಜ್ಞಾನಚಕ್ಷುವಿನಿಂದ ಇದನ್ನು ಚೆನ್ನಾಗಿ ತಿಳಿದುಕೊಳ್ಳಿರಿ.

ಏತಸ್ಯೈವ ಅಸ್ಯ ಸರ್ವೇಽಪ್ಯಧಿಕಾರಿಣಃ । (ಖಿಲ ಶತಪಥ)
ಅಂತ್ಯಜಾ ಅಪಿ ಯೇ ಭಕ್ತಾ ನ ಮಜ್ಞಾನಾಧಿಕಾರಿಣಃ ॥ (ಮಾಧ್ವಭಾಷ್ಯ)

ಹೀಗೆ ಅನೇಕ ಶಾಸ್ತ್ರಾರ್ಥಗಳನ್ನೂ ಅನುಭವವನ್ನೂ ಜಗತ್ತಿಗೆ ಉಪದೇಶಿಸಿ ಸುಜನ ರನ್ನೆಲ್ಲ ಸನ್ಮಾರ್ಗಕ್ಕೆ ಹಚ್ಚಿದ ಕನಕನ ಉಪಕಾರವನ್ನು ಎಷ್ಟು ಸ್ಮರಿಸಿದರೂ ತೀರದು.

ಕನಕನ ಮುಂಡಿಗೆಗಳ ಅಭ್ಯಾಸವು ಆಗಿ ಅವುಗಳಲ್ಲಿ ಅಡಗಿದ ಜ್ಞಾನಾ ಮೃತವು ಜನಾಂಗಕ್ಕೆ ದೊರೆತು ಅವರೆಲ್ಲರೂ ಉದ್ಧೃತರಾಗಬೇಕೆಂದೇ ನಮ್ಮ ಬಯಕೆ.

ಪರಮಾತ್ಮನು ವಿದ್ವಾಂಸರಿಗೆ ಬುದ್ಧಿಯನ್ನಿತ್ತು ಕನಕನ ಜ್ಞಾನವನ್ನು ಹೊರಗೆಡವಲೆಂದು ಪ್ರಾರ್ಥಿಸುವೆ.

# ಕನಕನ ಕಾವ್ಯಗಳಲ್ಲಿ ನವರಸ ಪ್ರತಿಪಾದನೆ

ಡಾ॥ ಕೆ. ಕೃಷ್ಣಮೂರ್ತಿ, ಎಂ.ಎ., ಬಿ.ಟಿ., ಪಿಎಚ್.ಡಿ.
(ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ)

೧

ಕನಕದಾಸರನ್ನು ದಾಸವರ್ಯರೆಂದೂ, ನೀತಿವೈರಾಗ್ಯಬೋಧಕರೆಂದೂ, ವಾಗ್ಗೇಯಕಾರರೆಂದೂ ಕೊಂಡಾಡುವವರಿಗೆ ಕಡಿಮೆಯಿಲ್ಲ; ಅವರನ್ನು ಜಾನಪದ ಕವಿಗಳೆಂದು ಪುರಸ್ಕರಿಸುವವರೂ ಇದ್ದಾರೆ. ಆದರೆ ಅವರನ್ನು ಕೇವಲ ಸರಸ ಕವಿಗಳೆಂದು ಗುರುತಿಸಿ ಅವರ ಅಪಾರ ಸಾಹಿತ್ಯದ ರಸಗ್ರಹಣೆಯ ಕಾರ್ಯ ಇನ್ನೂ ನಡೆಯಬೇಕಾಗಿದೆ.

**ಕಾಳಿದಾಸರ ಮನೆಯ ಕೀಳುದಾಸ ನಾನಯ್ಯ**
**ಆಳುದಾಸನು ನಾನು ಮೂಳದಾಸ**

ಎಂಬ ಅವರ ಮಾತು ಬರಿಯ ವಿನಿಯೋಕ್ತಿಯಾಗಿರದೆ, ತಾವು ಮಹಾಕವಿ ಕಾಳಿದಾಸನ ಸರಸ ಸಾಹಿತ್ಯ ಸಂಪ್ರದಾಯದ ಆರಾಧಕರೆಂಬುದರ ಪರ್ಯಾಯೋಕ್ತಿಯೂ ಆಗಿದೆ.

ಕನ್ನಡನಾಡಿನ ಮೂಲೆಮೂಲೆಯಲ್ಲಿಯೂ ಕನಕದಾಸರ 'ನಳಚರಿತ್ರೆ', 'ತಿರುಕನ ಕನಸು', 'ಹರಿಭಕ್ತಿಸಾರ'ಗಳು ಬಾಲಕರ ಬಾಯಲ್ಲಿ ನಿಂತು ಅವರ ಹೃದಯವನ್ನರಳಿಸುತ್ತಿರುವಂತೆ, ಕನಕದಾಸರ ಜನಪ್ರಿಯ ಹಾಡುಗಳು ಮಹಿಳೆಯರ ಗೋಷ್ಠಿಗಳಲ್ಲಿ ಜೀವಂತವಾಗಿ ಇಂದಿಗೂ ಗಾನರಸವನ್ನು ಸ್ರವಿಸುತ್ತಿವೆ; ಜ್ಞಾನದ ಬಾಗಿಲನ್ನು ತೆರೆಯುತ್ತಿವೆ; ಧ್ಯಾನ ಭಕ್ತಿಗಳ ಮಹಿಮೆಯನ್ನು ತೋರಿಸುತ್ತಿವೆ. ಇವುಗಳ ಜನಪ್ರಿಯತೆಗೆ ಮುಖ್ಯ ಕಾರಣವೆಂದರೆ ಕನಕದಾಸರ ಮಧುರ ಮೋಹಕ ಶೈಲಿ; ಜೀವನದಿಂದ ನೇರವಾಗಿ ತೆಗೆದುಕೊಂಡ ದೃಷ್ಟಾಂತ ಸಾಮತಿಗಳ ಸುಂದರ ಯೋಜನೆ, ಹಾಗೂ ಅವರ ಸೂಕ್ಷ್ಮ ಹಾಸ್ಯಪ್ರವೃತ್ತಿ. ಅವರ ಹಾಸ್ಯವು ಜನಜೀವನದ ಅನೀತಿಗಳನ್ನು ತೊಡೆಯಲು ಸಮರ್ಥವಾಗಿದ್ದರೂ, ಜನರನ್ನು ಕೆಣಕುವಂತೆ ಕಹಿಯಾಗಿರುವುದಿಲ್ಲ. ಬಾಹ್ಯವೇಷಕ್ಕೂ ಒಳಗಿನ ವಿಚಾರಗಳಿಗೂ ತಾಳತಪ್ಪಿದಾಗ ಅದನ್ನು ಆ ಕ್ಷಣ ಬಯಲಿಗೆಳೆಯುವ ಅವರ ವಿಡಂಬನದೃಷ್ಟಿಗೆ ಹಾಸ್ಯವು ಸಹಾಯಕವಾಗುತ್ತದೆ.

**ಜಪವ ಮಾಡಿದರೇನು, ತಪವ ಮಾಡಿದರೇನು,**
**ಕಪಟಗುಣ ವಿಪರೀತ ಕಲುಷವಿದ್ದವರು?**

ಎಂದು ಆಷಾಢಭೂತಿಗಳನ್ನು ಎಚ್ಚರಿಸುವಾಗ, ಇಲ್ಲವೆ:

ಸತ್ಯ ಧರ್ಮಗಳಿಲ್ಲ ಎತ್ತ ಪೋದವೊ ಕಾಣೆ
ಉತ್ತಮರ ಜೀವನಕೆ ದಾರಿಯಿಲ್ಲ....

ಎಂದು ನಿಟ್ಟುಸಿರೆಳೆಯುವಾಗ, ಅಥವಾ:

ಅನ್ನವಸ್ತ್ರಗಳಿಂದ ಚೆನ್ನಾಗಿ ಬಾಳುವರ
ಭಿನ್ನತಂತ್ರವ ಹೂಡಿ ಕೆಡಿಸುತಿಹರು
ಗನ್ನಗತಕವ ಮಾಳ್ಪ ಗ್ರಾಮಣ್ಯಗಳ ಕಲಿತು
ಕುನ್ನಿಗಳು ಹೆಚ್ಚಿದರು ಕ್ರೂರ ಫಣಿಯಂತೆ

ಎಂದು ಹಳ್ಳಿಯ ಜೀವನದ ಹಾಲಿಗೆ ಹುಳಿ ಹಿಂಡುವವರನ್ನು ಜರೆಯುವಾಗ,

ಎಲ್ಲಾರು ಮಾಡುವುದು—ಹೊಟ್ಟೆಗಾಗಿ,
ಗೇಣು ಬಟ್ಟೆಗಾಗಿ,
ತುಕ್ಕು ಹಿಟ್ಟಿಗಾಗಿ

ಎಂಬ ಲೋಕ ಸತ್ಯವನ್ನು ಮಂಡಿಸಿ, ಕಡೆಗೆ:

ಉನ್ನತ ನೆಲೆಯಾದಿಕೇಶವನ ಧ್ಯಾನವನು
ಮನಮುಟ್ಟಿ ಮಾಡುವುದು—ಮುಕ್ತಿಗಾಗಿ,
ಆನಂದಕಾಗಿ

ಎಂದು ಪರಮಪುರುಷಾರ್ಥದ ಮಹತ್ತ್ವವನ್ನು ಎತ್ತಿ ತೋರಿಸುವಾಗ, ಎಲ್ಲಿಯೂ ತಪ್ಪದೆ ಕನಕದಾಸರ ವೈಶಿಷ್ಟ್ಯ ವ್ಯಕ್ತವಾಗುತ್ತದೆ. ಅನುಚಿತ ವರ್ತನೆ, ಅಸಮ ವ್ಯವಹಾರ, ವಿಷಮ ವಿಚಾರಗಳು ಎಲ್ಲಿದ್ದರೂ ಇವರ ದೃಷ್ಟಿ ತಟ್ಟನೆ ಅವುಗಳನ್ನು ಗ್ರಹಿಸಿ ಕಾವ್ಯಮಯವಾಗಿ ಮೂಡಿಸುತ್ತದೆ. ಈ ಮನೋಧರ್ಮವನ್ನು ಹಾಸ್ಯ ಮಯ ನಾಟಕಕಾರನ ಮನೋಧರ್ಮವೆಂದರೂ ಸಲ್ಲುತ್ತದೆ. ಈ ಹಾಸ್ಯ ಮನೋವೃತ್ತಿಯು ಕನಕದಾಸರ ದೇವತಾ ಸ್ತೋತ್ರಗಳಲ್ಲಿಯೂ ತಲೆದೋರುತ್ತದೆ:

ಮೋರೆ ಕಪ್ಪಿನ ಭಾವ, ಮೊರದಗಲ ಕಿವಿ
ಕೋರೆದಾಡಿಯನ್ಯಾರಮ್ಮ?

ಎಂದು ಸಾಕ್ಷಾತ್ ಗಣಪತಿಯ ಬಗ್ಗೆ ಮತ್ತಾರು ಕೇಳುವ ಸಾಹಸ ಮಾಡಿಯಾರು? ಮೇಲ್ನೋಟಕ್ಕೆ ನಿಂದೆಯಂತೆ ಭಾಸವಾದರೂ, ವಸ್ತುತಃ ಪ್ರಶಂಸೆಯಾಗಿರುವ ಈ ಉಕ್ತಿಚಮತ್ಕಾರಕ್ಕೆ 'ವ್ಯಾಜನಿಂದೆ' ಅಥವಾ 'ನಿಂದಾಸ್ತುತಿ' ಎಂಬ ಹೆಸರಿನ ಅಲಂಕಾರಗಳನ್ನು ನಮ್ಮ ಪ್ರಾಚೀನ ವಿಮರ್ಶಕರೂ ಒಪ್ಪುತ್ತಾರೆ. ಇದೇ ಅಲಂಕಾರ ಶ್ರೀಹರಿಯ ಮತ್ಸ್ಯ, ಕೂರ್ಮ, ವರಾಹಾವತಾರಗಳ ಬಣ್ಣನೆಯಲ್ಲಿಯೂ ತಲೆಹಾಕಿದೆ:

ನೀರ ಪೊಕ್ಕವನೆಂದೆನೆ? ಬೆನ್ನಿನ ಮೇಲೆ
ಭಾರ ಪೊತ್ತವನೆಂದೆನೆ? ಮಣ್ಣನು ಅಗೆದು
ಬೇರ ಮೆದ್ದವನೆಂದೆನೆ?—ರಕ್ಕಸನೊಳು
ಹೋರಿ ಪೊಯ್ದನೆಂದು ಪೊಗಳಿದೆನಲ್ಲದೆ?

ಸಾಮಾನ್ಯರಾದ ಕ್ಷುದ್ರಜನಗಳ ವರ್ತನೆಯನ್ನು ಕುರಿತು ಹೇಸಿದ ದಾಸರಾದರೂ, ತಮ್ಮ ಮಾತಿನಲ್ಲಿ ಪರಿಹಾಸವನ್ನು ಇವರು ಬಿಡರು. ಇವರೇ ಪರಮಾತ್ಮನ ಲೀಲೆಯನ್ನು ವಿಶ್ವದಲ್ಲೆಲ್ಲ ಸಾಕ್ಷಾತ್ಕರಿಸಿ ನಿಬ್ಬೆರಗಾದಾಗ ಅದ್ಭುತ ರಸದ ಸೆಲೆಯಲ್ಲಿ ತಲ್ಲೀನರಾಗುತ್ತಾರೆ:

ಬೆಟ್ಟದಾ ತುದಿಯಲ್ಲಿ ಹುಟ್ಟಿರುವ ವೃಕ್ಷಕ್ಕೆ
ಕಟ್ಟೆಯನು ಕಟ್ಟಿ ನೀರೆರೆದವರು ಯಾರು?
ಪುಟ್ಟಿಸಿದ ಸ್ವಾಮಿ ತಾ ಹೊಣೆಗಾರನಿರುತಿರಲು
ಘಟ್ಯಾಗಿ ಸಲಹುವನು—ಇದಕೆ ಸಂಶಯ ಬೇಡ!

ಭಗವಂತನ ಮಾಹಾತ್ಮ್ಯದ ಅನುಭವಕ್ಕೆ ಹೃದಯಸಾಕ್ಷಿಯೇ ಹೊರತು, ಶುಷ್ಕವಾದ ತರ್ಕವಿಚಾರಗಳಿಂದ ಅನುಭವ ಸಾಧ್ಯವಿಲ್ಲವೆಂಬುದನ್ನು ಇವರಷ್ಟು ಕಾವ್ಯಮಯವಾಗಿ ಹೇಳಿದ ಮತ್ತೊಂದು ಉದಾಹರಣೆ ನಮ್ಮ ಸಾಹಿತ್ಯದಲ್ಲಿಯೇ ವಿರಲ:

ಬಯಲು ಆಲಯದೊಳಗೊ, ಆಲಯವು ಬಯಲೊಳಗೊ
ಬಯಲು ಆಲಯವೆರಡು ನಯನದೊಳಗೊ?
ನಯನ ಬುದ್ಧಿಯೊಳಗೊ, ಬುದ್ಧಿ ನಯನದೊಳಗೊ
ನಯನ ಬುದ್ಧಿಗಳೆರಡು ನಿನ್ನೊಳಗೊ ಹರಿಯೆ?....

ಎಂಬ ಹಾಡು ವೇದಾಂತ ವಿಚಾರದ ಅತ್ಯಂತ ಸೂಕ್ಷ್ಮಪರಿಜ್ಞಾನವನ್ನು ಬಿಂಬಿಸುವಂತೆಯೇ—'ಮಹಾಕಾಶ,' 'ಮಠಾಕಾಶ' ಮುಂತಾದುವು ಪಾರಿಭಾಷಿಕ ಶಬ್ದಗಳು—ಭಗವಂತನ ಮಹಿಮೆ ಅಚಿಂತ್ಯವೆಂಬುದನ್ನು ಭಾವನಾಮಯವಾಗಿ ತೋರಿಸುತ್ತದೆ. ಹೀಗೆ ನೀತಿ, ಭಕ್ತಿ, ವೈರಾಗ್ಯಪರವಾದ ಕನಕದಾಸರ ಹಾಡುಗಳಲ್ಲೆಲ್ಲ ಗುಪ್ತಗಾಮಿನಿಯಾಗಿ ಹರಿಯುವ ಶಾಂತರಸವನ್ನು ರಸಿಕರು ಗುರುತಿಸಬಹುದಾಗಿದೆ.

೨

'ವರಕವಿಗಳ ಮುಂದೆ ನರಕವಿಗಳ ವಿದ್ಯೆ ಮಾಡಬಾರದು' ಎಂಬ ಕನಕರ ಉಕ್ತಿಯನ್ನು ಅವರಿಗೇ ಅನ್ವಯಿಸಿದರೆ ಕನಕದಾಸರು ವರಕವಿಗಳೆಂಬ ವಿಷಯ

ದಲ್ಲಿ ಸಂಶಯವಿರಲಾರದು. ಅವರ ವಾಣಿ ಪ್ರಾಸಾದಿಕವಾಣಿಯೆಂಬುದಕ್ಕೆ ಸಾಕ್ಷ್ಯ ಮತ್ತೂ ಬೇಕೆನ್ನುವವರಿಗೆ:

ಗಿಳಿಯ ಮರಿಯನು ತಂದು ಪಂಜರ
ದೊಳಗೆ ಪೋಷಿಸಿ ಕಲಿಸಿ ಮೃದುನುಡಿ
ಗಳನು ಲಾಲಿಸಿ ಕೇಳ್ವ ಪರಿಣತರಂತೆ ನೀನೆನಗೆ ।
ತಿಳುಹಿ ಮತಿಯನು ಎನ್ನ ಜಿಹ್ವೆಗೆ
ತೊಳಗುವಂದದಿ ನಿನ್ನ ನಾಮಾ
ವಳಿಯ ಪೊಗಳಿಕೆಯಿತ್ತು ರಕ್ಷಿಸು ನಮ್ಮನನವರತ ॥

ಎಂಬ 'ಹರಿಭಕ್ತಿಸಾರದ' ಪದ್ಯವನ್ನು ಎತ್ತಿ ತೋರಿಸುವುದು ಕಷ್ಟವಲ್ಲ.

ಬಡವರು–ಬಲ್ಲಿದರು ಎಂಬ ಭೇದಭಾವನೆ ಸಲ್ಲದೆಂದು ತೋರಿಸುವುದಕ್ಕಾಗಿ ಅಕ್ಕಿ–ರಾಗಿಗಳ ನಾಟಕೀಯ ವಾಗ್ವಾದವನ್ನು ರಚಿಸಿರುವ ಇವರ ಸಂಕೇತಪ್ರಿಯ ಪ್ರತಿಭೆ ಯಾರನ್ನಾದರೂ ತಲೆದೂಗಿಸುವಂಥದು. 'ರಾಮಧಾನ್ಯಚರಿತ್ರೆ' ಯಲ್ಲಿ ಬರುವ ಈ ಸಂಭಾಷಣಾಭಾಗವನ್ನು ನೋಡಿ:

**ಅಕ್ಕಿ**—ಕ್ಷಿತಿಯಮರರುಪನಯನದಲಿ ಸು
ವ್ರತ ಸುಭೋಜನಗಳಲಿ ಮಂತ್ರಾ
ಕ್ಷತೆಗಳಲಿ ಶುಭಶೋಭನದಲಾರತಿಯ ಬೆಳಗುವಲಿ ।
ಕ್ರತುಗಳೆಡೆಯೊಳಗರಮನೆಗಳಲಿ
ಪ್ರತಿದಿನವು ರಂಜಿಸುತ ದೇವರಿ
ಗತಿಶಯದ ನೈವೇದ್ಯವಾಗಿಹೆನೆಂದನಾ ವ್ರಿಹಿಗ ॥

**ರಾಗಿ**—ಸತ್ತ್ವಹೀನರ ಬಡವರನು ಕ
ಣ್ಣೆತ್ತಿ ನೋಡೆ ಧನಾಢ್ಯರನು ಬೆಂ
ಬತ್ತಿ ನಡೆಯುವುಪೇಕ್ಷೆ ನಿನ್ನದು ಪೇಳಲೇನದನು ।
ಹೆತ್ತ ಬಾಣತಿಯರಿಗೆ ರೋಗಿಗೆ
ಪಥ್ಯಪಾನದಿ ಹೆಣದ ಬಾಯಿಗೆ
ತುತ್ತು ನೀನಹೆ ನಿನ್ನ ಜನ್ಮ ನಿರರ್ಥಕರವೆಂದ ॥

ಇಂಥ ನಾಟಕೀಯ ಕವಿತ್ವದಲ್ಲಿ ರಸಪುಷ್ಟಿಗೆ ಅಗ್ರಸ್ಥಾನವೆಂದು ಬೇರೆಯಾಗಿ ಹೇಳುವ ಕಾರಣವಿಲ್ಲ. ಆದರೆ ಇವು ಲಘುಕವಿತ್ವಗಳು; ಪ್ರಬಂಧರಸದ ಪೂರ್ಣ ಚಿತ್ರಣಕ್ಕೆ ಇಲ್ಲಿ ಅವಕಾಶ ಸಾಲದು.

ಇದನ್ನು ಮನಗಂಡ ಕನಕದಾಸರು ಇತರ ದಾಸರಂತೆ ಕೇವಲ ಹಾಡುಗಳ ರಚನೆಯಿಂದಲೇ ತೃಪ್ತರಾಗದೆ, ಕಥನ ಕಾವ್ಯಗಳ ರಚನೆಗೆ ಕೈಹಾಕಿದರಷ್ಟೇ ಅಲ್ಲ, ಹೆಚ್ಚಿನ ಸಿದ್ಧಿಯನ್ನೂ ಪಡೆದಿದ್ದಾರೆ. ನಳಚರಿತ್ರೆಯು ಮಹಾಭಾರತದ

ಒಂದು ಉಪಾಖ್ಯಾನ ಮಾತ್ರವಾದರೂ ಒಂದು ಸ್ವತಂತ್ರ ಮಹಾಕಾವ್ಯವೆನಿಸು ವಷ್ಟು ರಸನಿರ್ಭರವಾಗಿದೆ. ಇದನ್ನು ಮನಗಂಡ ಯೂರೋಪ್ ವಿದ್ವಾಂಸರು ಸಂಸ್ಕೃತದ ನಳೋಪಾಖ್ಯಾನವನ್ನು ಎಲ್ಲ ಯೂರೋಪಿಯನ್ ಭಾಷೆಗಳಿಗೂ ಅನುವಾದ ಮಾಡಿರುತ್ತಾರೆ. ಕನ್ನಡನಾಡಿನಲ್ಲಿ ಇದನ್ನು ಮೊದಲು ಅರಿತು ಎಲ್ಲರಿಗೂ ಮೋಹಕವಾಗುವಂತೆ ಲಲಿತಕಾವ್ಯವನ್ನು ಬರೆದ ಕೀರ್ತಿ ಕನಕದಾಸರದೇ ಸರಿ. ಇಲ್ಲಿಯೂ ಹಾಸ್ಯ, ಅದ್ಭುತ, ವೀರಾದಿಗಳು ಪ್ರಾಸಂಗಿಕವಾಗಿ ಬರುತ್ತಿದ್ದರೂ ಮುಖ್ಯವಾಗಿ ನಳ–ದಮಯಂತಿಯರ ಆದರ್ಶಪ್ರೇಮ, ಅಗಲಿಕೆಯಲ್ಲಿಯೂ ಮಾಸದ ಅಚಲ ಶೃಂಗಾರ, ಪುನಸ್ಸಮಾಗಮವೇ ಅಶಕ್ಯವೋ ಎನಿಸುವಂತಾದಾಗ ಇಬ್ಬರೂ ಕಣ್ಣೀರಲ್ಲಿ ಕೈತೊಳೆವ ಶೋಕ—ಇವೇ ಈ ಕಥನಕಾವ್ಯದ ಮುಖ್ಯ ರಸಗಳು. ಕನಕದಾಸರು ಶೃಂಗಾರ ಹಾಗೂ ಕರುಣ ರಸಗಳನ್ನು ಪ್ರತಿಪಾದಿಸು ವುದರಲ್ಲಿ ತಮ್ಮ ಅದ್ವಿತೀಯ ಶಕ್ತಿಯನ್ನಿಲ್ಲಿ ಮೆರೆದಿದ್ದಾರೆ. ಇದು ದಮಯಂತಿಯ ಪ್ರಥಮವಿರಹದ ಶಬ್ದಚಿತ್ರ :

ಉಣ್ಣಳನ್ನವನಖಿಳವಸ್ತುವ
ಕಣ್ಣಿನಿಂದೀಕ್ಷಿಸಳು ಸತಿಯರ
ಮನ್ನಣೆಗೆ ಮೈಗೊಡಳು ಬಲುಬೇಸರದಿ ಬಳಲುವಳು ।
ಬಣ್ಣಿಸಳು ಮಾತಾಡಲೊಲ್ಲಳು
ಬಣ್ಣಗುಂದಿದ ದೇಹದೊಳಗೆಳ
ವೆಣ್ಣುಗಳ ಸೌಖ್ಯವನು ಮರೆದಳು ಮದನನಿಸುಗೆಯಲಿ ॥

ಮೋಸದಿಂದ ಕಾಡಿನಲ್ಲಿ ನಳನು ಪತ್ನಿಯನ್ನು ತೊರೆದುಹೋದಾಗ, ದಮಯಂತಿಯ ಶೋಕವನ್ನು ಬಣ್ಣಿಸುವ ಎರಡು ಪದ್ಯಗಳಿವು :

ಕಾಣಿರೇಯರಸಂಚೆಗಳ ನೀವ್
ಕಾಣಿರೇ ನಿಜಪತಿಯ ಗಿಳಿಗಳ
ಕಾಣಿರೇ ಮೃಗಪಕ್ಷಿಗಳ ನಳಚಕ್ರವರ್ತಿಯನು ।
ಕಾಣಿರೇ ತರುಲತೆಗಳಿನಿಯನ
ಕಾಣಿರೇ ನೀವೆಂದು ಶೋಕದೊ
ಳೇಣಲೋಚನೆ ಹಲುಬಿದಳು ಹಲವಂಗದಲಿ ಪತಿಯ ॥

ಮುಡಿ ಚದುರಿ ಹುಡಿಯೊಳಗೆ ಹೊರಳುತ
ಲೊಡಲನೀಡಾಡಿದಳು ಧರೆಯೊಳ
ಗಡವಿಪಾಲಾಗೆಂದು ಪಡೆದಳೋ ತನ್ನ ನಿಜಜನನಿ ।
ಮಡದಿಯರು ತನ್ನಂತೆ ಲೋಕದೊ
ಳೊಡಲ ತೆತ್ತವರುಂಟೆ ಶೋಕದಿ
ಪೊಡವಿಪತಿ ಮುಖದೋರೆನುತ ಹಂಬಲಿಸಿದಳು ಪತಿಯ ॥

ಕರುಣರಸ ಇಲ್ಲಿ ಹೊನಲಾಗಿ ಹರಿದು ಪೂರ್ವದ ಮಹಾಕವಿಗಳನ್ನು ಸ್ಮರಿಸುವಂತೆ ಮಾಡಿದೆ. ಕಾಳಿದಾಸನ 'ರತಿವಿಲಾಪ', ರಾಘವಾಂಕನ 'ಚಂದ್ರಮತೀ ಪ್ರಲಾಪ'ಗಳೊಡನೆ ಕನಕದಾಸರ ಶೋಕವರ್ಣನೆಯನ್ನು ಹೋಲಿಸಿ ನೋಡಿದಾಗ ಈ ಅಂಶ ವ್ಯಕ್ತವಾಗುತ್ತದೆ.

ಸಾಮಾನ್ಯವಾಗಿ ಬೀಭತ್ಸರಸವನ್ನು ಕೈಬಿಡುವ ಕವಿಗಳೇ ಹೆಚ್ಚು. ಆದರೆ ನಳಮಹಾರಾಜನನ್ನು ಕಾರ್ಕೋಟನು ಕಚ್ಚುವ ಪ್ರಸಂಗವನ್ನು ಕನಕದಾಸರು ರಸಮಯವಾಗಿಯೇ ಅಳವಡಿಸಿಕೊಂಡಿದಾರೆ. ಇದು ಕುರೂಪಿಯಾದ ನೃಪತಿಯ ವರ್ಣನೆ:

ಅಡ್ಡ ಮೋರೆಯ ಗಂಟುಮೂಗಿನ
ದೊಡ್ಡ ಹೊಟ್ಟೆಯ ಗೂನುಬೆನ್ನಿನ
ಗಿಡ್ಡ ಕೈಕಾಲುಗಳ ಉದುರಿದ ರೋಮಮೀಸೆಗಳ ।
ಜಡ್ಡು ದೇಹದ ಗುಜ್ಜುಗೊರಲಿನ
ಗಿಡ್ಡರೂಪಿನ ಹರುಕುಗಡ್ಡದ
ಹೆಡ್ಡನಾದ ಕುರೂಪಿತನದಲಿ ನೃಪತಿ ವಿಷದಿಂದ ॥

ಆದರೆ ಮುಖ್ಯವಾಗಿ ನಳಚರಿತ್ರೆ ಪತಿವ್ರತೆಯ ಪುಣ್ಯಕಥೆ. ಈ ಪವಿತ್ರ ಪೌರಾಣಿಕ ವಾತಾವರಣಕ್ಕೆ ಎಲ್ಲಿಯೂ ಧಕ್ಕೆ ಬಾರದಂತೆ, ಕಾವ್ಯರಸವನ್ನು ಪ್ರತಿಪಾದಿಸಿರುವುದು ಕನಕದಾಸರ ವೈಶಿಷ್ಟ್ಯ.

೩

ಕನಕದಾಸರ ಕಾವ್ಯರಸದ ಪರಮಸಿದ್ಧಿಯನ್ನು ನಾವು ಕಾಣುವುದು ಅವರ 'ಮೋಹನತರಂಗಿಣಿ' ಯಲ್ಲಿ. ಅವರೇ ಹೇಳುವಂತೆ:

'ಇನಿವಾತುಗಳ ಸತ್ಪದಬಂಧ ವ್ಯಂಗ್ಯೋಕ್ತಿ
ಧ್ವನಿಯರ್ಥಗೌರವದಿಂದೆ
ತನಿರಸವಡೆದ'

ಈ ಕೃತಿ ಕಥನಕಲೆಯ ಚಮತ್ಕೃತಿಯಿಂದಲೂ ತುಂಬಿದೆ. ಇದು 'ರಸವಜಿತ ಬೆಂಚೆಯೆನಬೇಡ, ಸೃಂಗಾರರಸ ಪೂರ್ಣ ವಿಶ್ರಮಿಸೆ', 'ಶಿಲೆಯ ಪಕ್ಷದರ ಚಿತ್ತವ ಕರಗಿಪುದು ನೈದಿಲೆಯಾಣ್ಮನಂತೆನ್ನ ಕವಿತೆ'.

'ನಾಡೊಳಗುಳ್ಳ ಜಾಣರು ಜಾಣೆಯರೊಡ
ನಾಡುವ ಸವಿವಾತುಗಳ
ಪಾಡುಗಬ್ಬದ ಪರುಷವಿಸಿದ ಬಗೆಯ ನೀ
ನೋಡು ಮಾನಿನಿ ಮುಂದೆ ಮುಂದೆ'

'ಹರಿಶರಣರಚ್ಚು ಬುಧಜನರಿಗೆ ಪೆಚ್ಚು
ದುರಿತವನಕೆ ಕಾಚ್ಕಿಚ್ಚು
ವಿರಹಿಗಳಿಗೆ ಪುಚ್ಚು ವೀರರ್ಗೆ ನುಚ್ಚು
ಕೇಳ್ವರಿಗಿದ ತನಿಬೆಲ್ಲದಚ್ಚು'

ಭಗವದ್ಭಕ್ತಿ, ಅಲಂಕಾರಗಳ ಚಮತ್ಕಾರ, ಶೃಂಗಾರದ ಸಕಲ ಮುಖಗಳು, ವೀರರೌದ್ರ ರಸಸ್ಥಾನಗಳು, ಮಧುರ ಮನೋಹರ ವರ್ಣನೆಗಳು— ಎಲ್ಲವೂ ಕೂಡಿ ಈ ನಲವತ್ತೆರಡು ಸಂಧಿಗಳ ಸಾಂಗತ್ಯ–ಪ್ರಬಂಧಕ್ಕೆ ಕನ್ನಡಸಾಹಿತ್ಯ ಚರಿತ್ರೆಯಲ್ಲಿ ಒಂದು ಉಲ್ಲೇಖನೀಯವಾದ ಸ್ಥಾನವನ್ನು ಗಳಿಸಿಕೊಟ್ಟಿವೆ. ರತ್ನಾಕರವರ್ಣಿಯ 'ಭರತೇಶ ವೈಭವ'ಕ್ಕೂ ಕನಕದಾಸರ ಈ ಕೃತಿಯೇ ಮಾದರಿಯನ್ನೊದಗಿಸಿರುವಂತೆ ತೋರುತ್ತದೆ. ಇದರ ವಿವರವಾದ ವಿಮರ್ಶೆಗೆ ಇಲ್ಲಿ ಸ್ಥಳವಿಲ್ಲ. ಕೇವಲ ಕಥಾಯೋಜನೆಯಲ್ಲಿಯೇ ಕವಿ ಕನಕದಾಸರು ಎಷ್ಟು ರಸದೃಷ್ಟಿಯನ್ನು ಪ್ರಕಟಿಸಿರುವರೆಂಬುದನ್ನು ಸ್ಥೂಲವಾಗಿ ಇಲ್ಲಿ ಸೂಚಿಸಿ ಲೇಖನವನ್ನು ಮುಗಿಸಲಾಗುತ್ತದೆ.

ಸ್ಕಾಂದಪುರಾಣ, ವಿಷ್ಣುಪುರಾಣ, ಭಾಗವತ ಮುಂತಾದ ಪುರಾಣಗಳಲ್ಲಿ ಸಾವಿರಾರು ಕಥೆಗಳಿವೆಯಾದರೂ ಕನಕದಾಸರು ಆರಿಸಿಕೊಂಡಿರುವ ಕಥಾಭಾಗ ಅತ್ಯಂತ ಜನಪ್ರಿಯವಾಗುವಂಥದು. ದ್ವಾರಕಾಪುರದಲ್ಲಿ ಕೃಷ್ಣ-ರುಕ್ಮಿಣಿಯರ ವಿಲಾಸ, ರುಕ್ಮಿಣಿ ಗರ್ಭವತಿಯಾದುದು, ದೇವತೆಗಳ ಪ್ರಾರ್ಥನೆಯಂತೆ ಮನ್ಮಥನು ಶಿವನಮೇಲೆ ದಾಳಿಮಾಡುವುದು, ಕಾಮದಹನ, ರತಿವಿಲಾಪ, ರತಿಯು ಶಂಬರಾಸುರನ ಮನೆಯನ್ನು ಸೇರುವುದು, ಮಾರನು ರುಕ್ಮಿಣಿಯ ಮಗನಾಗಿ ಹುಟ್ಟುವುದು, ಶಂಬರಾಸುರನ ಮನೆಯಲ್ಲಿ ಬೆಳೆಯುವುದು, ಶಂಬರಾಸುರನ ಸಂಹಾರ, ರತಿ-ಮನ್ಮಥರ ವಿವಾಹ, ಕ್ರೀಡೆ, ಗರ್ಭಾದಾನ, ಅನಿರುದ್ಧಜನನ, ಬಾಣಾಸುರನ ಮಗಳಾದ ಉಷಾದೇವಿಯ ಸ್ವಪ್ನರತಿ, ಉಷೆಯ ವಿರಹ, ಚಿತ್ರದರ್ಶನ, ಸಖಿಯ ಸಹಾಯದಿಂದ ಗುಪ್ತಸಂಗಮ, ಏಕಾಂತಸುಖ, ಕುಪಿತನಾದ ಬಾಣನಿಗೂ ಇವನಿಗೂ ಯುದ್ಧ, ನಾರದನ ಮೂಲಕ ವಿಷಯ ತಿಳಿದು ಕೃಷ್ಣಾಗಮನ, ಹರಿಹರರ ಕಾಳಗ, ಇತ್ಯಾದಿ ಪ್ರಸಂಗಗಳಲ್ಲಿ ಒಂದೊಂದೂ ರಸಮಯ ವರ್ಣನೆಗೆ ಬಹಳ ಚೆನ್ನಾಗಿ ಅಳವಡುವಂತಿದೆ. ನವರಸಗಳಿಗೂ ಇಲ್ಲಿ ಪೂರ್ಣ ಪ್ರವೇಶ ಸಿಕ್ಕಿದೆ. ಆದರೆ ಇಂದಿನ ಅಭಿರುಚಿಗೆ ಎಷ್ಟೋ ವೇಳೆ ಇಲ್ಲಿಯ ಶೃಂಗಾರವು ಅತಿರಂಜಿತವಾಗಿಯೂ ಕಾಣಬಹುದೆಂದೊಪ್ಪಿದರೂ, ಇಲ್ಲಿಯ ವೀರ, ರೌದ್ರ, ಅದ್ಭುತರಸಗಳು ಸರ್ವರಿಗೂ ಆಕರ್ಷಕವಾಗಿವೆಯೆನ್ನಲು ಅಡ್ಡಿಯಿಲ್ಲ. ಇದನ್ನು ದೃಷ್ಟಿಯಲ್ಲಿಟ್ಟರೆ ಈ ಕಾವ್ಯ:

"ಗುಟ್ಟುಡುರದೆ ಕಾದ ಚಿಲುಪಾಲು ಮಕ್ಷಿಕೋ
ಚ್ಛಿಷ್ಟವಲ್ಲದ ಜೇನುತುಪ್ಪ।



ಕಾಗಿನೆಲೆಯಲ್ಲಿರುವ ಶ್ರೀ ಆದಿಕೇಶವಸ್ವಾಮಿಯ ದೇವಾಲಯ



ಕಾಗಿನೆಲೆಯಲ್ಲಿರುವ ಶ್ರೀನರಸಿಂಹ ದೇವಾಲಯದ ಒಂದು ದೃಶ್ಯ

ಕಟ್ಟುಬೀಳದ ಸಕ್ಕರೆಯಿಂದೆ ಸವಿವಾತ
ನೆಟ್ಟನೆ ಪೇಳ್ವುದೆನ್ನೊಡನೆ"

ಎಂಬ ವರ್ಣನೆಗೆ ಅಪಾತ್ರವಲ್ಲವೆಂಬುದು ವೇದ್ಯವಾಗುತ್ತದೆ. ಈ ಕಥೆಯ ನಿರೂಪಣೆಯಲ್ಲಿಯೂ ಕನಕದಾಸರು ನಲ್ಲ-ನಲ್ಲೆಯರಿಗೆ ನಡೆದ ಸಂಭಾಷಣೆಯ ಚೌಕಟ್ಟನ್ನು ನಿರ್ಮಿಸಿ ಮುದ್ದಣನಿಗೆ ಮಾರ್ಗದರ್ಶಕರಾಗಿದ್ದಾರೆ. ಇಲ್ಲಿ ಜ್ಞಾನವೆಂಬ ಮಡದಿಗೆ ಸಂಬೋಧಿಸಿ ಕವಿ ಕಥೆಯನ್ನು ಹೇಳುತ್ತಾನೆ.

ಹೀಗೆ ಕನಕದಾಸರು ಸಾಹಿತ್ಯದ ಜೀವಾಳವಾದ ನವರಸಗಳನ್ನೂ ತಮ್ಮ ಸೂಕ್ತಿಗಳಲ್ಲಿ ತೆರೆದುತೋರಿಸಿದ ಸಿದ್ಧಪುರುಷರಾಗಿದ್ದಾರೆ.

**" ಜಯಂತಿ ತೇ ಸುಕೃತಿನೋ ರಸಸಿದ್ಧಾಃ ಕವೀಶ್ವರಾಃ ।**
**ನಾಸ್ತಿ ಯೇಷಾಂ ಯಶಃ ಕಾಯೇ ಜರಾಮರಣಜಂ ಭಯಂ ॥ "**

# ಕನಕದಾಸನ ಶೈಲಿ

**ಶ್ರೀ ಎಸ್. ವಿ. ರಂಗಣ್ಣ, ಮೈಸೂರು**

"ದೀನ ನಾನು ಸಮಸ್ತ ಲೋಕಕೆ ದಾನಿ ನೀನು"; "ಗಿಣಿಯು ಮರಿಯನು ತಂದು ಪಂಜರದೊಳಗೆ ಪೋಷಿಸಿ ಕಲಿಸಿ ಮೃದು ನುಡಿಗಳನು ಲಾಲಿಸಿ ಕೇಳ್ವ ಪರಿಣತರಂತೆ"; "ದೊಡ್ಡ ಹೊಟ್ಟೆಯು ಗೂನು ಬೆನ್ನಿನ....ಹರಕು ಗಡ್ಡದ ಹೆಡ್ಡನಾದ ಕುರೂಪಿತನದಲಿ ನೃಪತಿ ವಿಷದಿಂದ"; "ವನಿತೆ ಮಲಗಿಹಳೊ ಅಧೈರ್ಯದಿ ನೆನೆವಳೊ ದೈವವನು"; "ತೋರ ಮಾಣಿಕವೆಂದು ಪಿಡಿದರೆ ಭೂರಿ ಕೆಂಡವಿದಾಯ್ತು"; "ತಲ್ಲಣಿಸದಿರು ಕಂಡ್ಯ ತಾಳು ಮನವೆ"; "ತನು ನಿನ್ನದು ಜೀವನ ನಿನ್ನದು"; "ಕಾಲವಾವನ ಕೀಳು ಮಾಡದು"; "ನೀ ಮಾಯೆಯೊಳಗೊ ನಿನ್ನೊಳು ಮಾಯೆಯೊ"—ಇಂಥ ಅನೇಕ ಸವಿ ಸುವಾಕ್ಯಗಳನ್ನು ಕನ್ನಡನಾಡಿಗೆ ಉಡುಗೊರೆಯಾಗಿ ಕೊಟ್ಟು ಧನ್ಯನಾಗಿದ್ದಾನೆ ಕನಕದಾಸ. ಕನ್ನಡ ನುಡಿಯೊಳಕ್ಕೆ ಅವು ಒತ್ತಾಗಿ ಮುದ್ದಾಗಿ ಸೇರಿಕೊಂಡು ಸಾರ್ವಜನಿಕ ಸೊತ್ತಾಗಿವೆ, ನೀರಸವಲ್ಲದ ದ್ರವ್ಯವಾಗಿವೆ, ನಿತ್ಯ ಜೀವನದ ಬಳಕೆಯ ಸರಕಾಗಿವೆ. ಅವನ್ನು ಉಪಯೋಗಿಸುವಾಗಲಾಗಲಿ, ಉಪಯೋಗಿಸಿದ ನಂತರವಾಗಲಿ ಅವುಗಳ ಉಕ್ತಿ ವಿಧಾನವನ್ನು ಕುರಿತು ಆಲೋಚಿಸುವವರು ಯಾರು, ಚರ್ಚೆ ಹೂಡುವವರು ಯಾರು? ಎಂತೋ ಏನೋ ಆ ಪದಗಳೂ, ಆ ಪದಸರಣಿಯೂ ಒರೆಯಬೇಕಾದ ಭಾವಾಭಿಪ್ರಾಯಕ್ಕೆ ಅಚ್ಚುಕಟ್ಟಾಗಿ ಹೊಂದಿಕೊಂಡು ಅಚ್ಚಗನ್ನಡ 'ಸುಭಾಷಿತ' ಗಳನ್ನು ಸೃಷ್ಟಿಸಿಕೊಟ್ಟಿವೆ, ಆಲಿಸಲರ್ಹವಾದ ಆನಂದ ಸೂಕ್ತಿಗಳಾಗಿ ನಿಂತು ಬಿಟ್ಟಿವೆ. ಇದೇ ಕನಕದಾಸನ ವಾಗ್ಧೋರಣೆಯ ಗುಟ್ಟು, ಶೈಲಿಯ ಸಾರ ಸರ್ವಸ್ವ. ಶಬ್ದ ವಾಕ್ಯ ಅಲಂಕಾರ ಛಂದಸ್ಸು ಯಾವ ವಿದ್ವದ್ವಿಚಾರದ ಕಡೆಗೂ ಓದುವವನ, ಕೇಳುವವನ ಚಿತ್ತ ಬಹುವಾಗಿ ತಿರುಗದಂತೆ, ಆಗಾಗ ಅಷ್ಟಿಷ್ಟು ತಿರುಗಿದರೂ ಸನ್ನಿವೇಶ ಆಖ್ಯಾನ ಪಾತ್ರವರ್ಗ ಇತ್ಯಾದಿ ಮುಖ್ಯ ವಿಷಯದ ಕಡೆಗೆ ಬೇಗ ಬೇಗ ಹಿಂದಿರುಗುವಂತೆ ಅವನು ಹೇಳಬಲ್ಲ, ಹಾಡಬಲ್ಲ. ಕೊಂಕಾವುದನ್ನೂ ಕಂಡರಿಯದ ಸರಳತೆ ಅವನ ಪ್ರಧಾನ ಗುಣ; ಸರಳತೆಯ ಹಿಂದಿದ್ದುಕೊಂಡು ಅದಕ್ಕೆ ತೇಜಸ್ಸನ್ನು ತಂದು ಕೂಡಿಸುವುದಕ್ಕೆ ಇದೆ, ಊನವಿಲ್ಲದ ಪ್ರಾಮಾಣಿಕತೆ; ಪ್ರಾಮಾಣಿಕತೆಗೆ ಪುಷ್ಟಿಯನ್ನೂ, ಬಲವನ್ನೂ ಒದಗಿಸುವ ಶಕ್ತಿಯಾಗಿದೆ, ಸ್ವಚ್ಛ ಪರಿಶುದ್ಧಿ; ಸುಲಭತೆ ಸಾಚಾತನ ಶುಚಿ ಮೂರಕ್ಕೂ—ಅವನ್ನು ಮೂರೆಂದು ಬೇರೆ ಬೇರೆ ಬಗೆಯಬೇಕಾದರೆ—ಏಕೈಕ ಸತ್ವಮಯ ಆಧಾರ ಯಾವುದೆಂದರೆ ಪಾರಮಾರ್ಥಿಕ ಶ್ರದ್ಧೆ. ತಾನೊಬ್ಬ 'ಭಕ್ತ'ನೆಂಬ ಭಾವನೆ ಕೆಲವು ಸಾರಿ 'ಎಷ್ಟಾದರೂ ದೇವರು ಭಕ್ತನ ಭಂಟನಲ್ಲವೆ' ಎಂಬ ಧಾರ್ಮಿಕ

ಗರ್ವಕ್ಕೆ ತಾಯಿಯಾಗಬಹುದು; ತಾನೊಬ್ಬ 'ದಾಸ'ನೆಂಬ ಭಾವನೆ ಕೆಲವು ಸಾರಿ 'ಸ್ವಾಮಿ'ಯ ಮೇಲಣ 'ಸ್ವಾಮ್ಯ' ತನ್ನದೆಂಬ ಧಾರ್ಮಿಕ ಹಮ್ಮಿಗೆ ತಂದೆಯಾಗುತ್ತದೆ. ಕನಕದಾಸನಿಗೆ ಆ ತೆರದ ಅಹಂಕಾರ ಸೇರದು. ಅವನಲ್ಲಿ ಸ್ವಪ್ರತಿಷ್ಠೆಗೆ ವಿರುದ್ಧವಾದ ವಿನೀತಭಾವ, ಆತ್ಮವಿಶ್ವಾಸಕ್ಕೆ ಭಂಗತಾರದ ನಮ್ರತೆ ತುಂಬಿಕೊಂಡಿತ್ತು, ಸಮಾಧಾನಕ್ಕೆ ಸಾಕಷ್ಟು ಪ್ರಮಾಣದಲ್ಲಿ. ಧ್ಯಾನ ನಡೆಸ ಬೇಕಾಗಲಿ ಹರಿಭಜನೆ ಎಸಗಬೇಕಾಗಲಿ ಕೀರ್ತನೆ ಕಟ್ಟಬೇಕಾಗಲಿ ಕಾವ್ಯ ರಚಿಸ ಬೇಕಾಗಲಿ ಸಂಕಲ್ಪಿತ ಕಾರ್ಯವನ್ನು ಹೆಚ್ಚು ಕಡಮೆ ಪೂರ್ಣ ವಿನಯದಿಂದ ಹೃತ್ಪೂರ್ವಕವಾಗಿ ಅವನು ಕೈಗೊಳ್ಳುತ್ತಿದ್ದನೆಂದು ನಂಬಬೇಕು. ಪರಿಣಾಮ ವಾಗಿ, ಅವನ ಕೃತಿಗಳು ಅಕೃತಕ ಚೆಲುವನ್ನು ತಾಳಿವೆ, ಸ್ಪಷ್ಟ ಸಾರ್ಥಕತೆಯನ್ನು ದಕ್ಕಿಸಿಕೊಂಡಿವೆ.

ಕವಿ ಕನಕದಾಸ ನಿರಹಂಕಾರಿ, ನಯಶೀಲ; ಆದರೆ ಆರ್ತನಲ್ಲ, ಅಂಜುಕುಳಿಯಲ್ಲ, ಬಗ್ಗಿ ಕುಗ್ಗುವಾತನಲ್ಲ, ನೆಲದತ್ತ ಕುಸಿದುರುಳುವವನಲ್ಲ. ತನ್ನ ಕವಿತ್ವದ ವಿಚಾರವಾಗಿ ತಾನೇ ಟೀಕೆ ಮಾಡುವಾಗ ಅವನು ಉಚ್ಚರಿಸುವ ವಾಕ್ಯಗಳು ಎರಡು ಬಗೆಯವು, ಹೊರ ತೋರ್ಕೆಗೆ ಪರಸ್ಪರ ವಿರೋಧದಿಂದ ಕೂಡಿದವು. ಅವೆಲ್ಲವನ್ನೂ ಪೂರ್ತಿ ಮನನಮಾಡಿಕೊಂಡು ಸಾಮರಸ್ಯದ ಅಭಿಮತಕ್ಕೆ ಚರಿಸಬೇಕು ನಾವು, ಕವಿಯ ಇಂಗಿತವನ್ನು ಗ್ರಹಿಸಬೇಕು.

"ಬರಹವ ತಿಳಿಯಬೇಡೆನುತೆನ್ನ ನೊಸಲೊಳು ।
ಬರೆದು ನಿರ್ಮಿಸಲದಱಿಂದ ।
ಬರಹವನಱಿಯೆ ನಾ ಪದವಿಟ್ಟು ಕಡಿತದೊಳ್ ।
ಬರೆದು ಮಾಡಿದ ಕೃತಿಯಲ್ಲ ॥"

"ಗುಬ್ಬಿಯ ಕೊರಳ್ಗೆ ಗೋಧಿಯ ಕಲ್ಲ ಕಟ್ಟಿದೊ ।
ಡುಬ್ಬಿಯಾಗಸಕೆ ಹಾಱುವುದೇ ॥"

"ನೋಡಲು ಹಸ್ತವಿಲ್ಲದ ಸೊಲ್ಪ'ಗೀಜಗ ಕಟ್ಟಿದಡೆ....॥"

"ಮೋಹನತರಂಗಿಣಿ"ಯನ್ನು ಕುರಿತು ಕವಿಯೇ ಆಡಿದ ಮಾತು ಇವು. ಅಷ್ಟಕ್ಕೇ ಮುಗಿಯಲಿಲ್ಲ ಅವನ ಸ್ವಯಂಕೃತ ಕಾವ್ಯ ವಿವರಣೆ.

"ರಸಪೂರಿತ ಸುಪ್ರಬಂಧ ವಿಲಕ್ಷಣವೆಸೆವಂತೆ ಪೇೞ್ವೆನು ।"

"ರಸಿಕರ ಕರ್ಣಯುಗ್ಮವ ಪೊಕ್ಕು ಮುದದಿ ಹೃ ।
ದ್ವಿಸಜವನಲರಿಸಿ ಮೈಗೆ ।
ಎಸೆವ ಪುಳಕದೊಸಗೆಯನಿತ್ತು ಶಿರವ ತೂ ।
ಗಿಸುವುದೀ ವಚನ ರಚನೆ ॥"

ಇವೂ ಅವನ ಉದ್ಘೋಷಣೆಯೇ. ಇನ್ನೂ ಕೆಲವನ್ನು ಕೇಳಿ:

“ಪ್ರಾಸಿಂದೆ ನಿಖಿಳ ಚಿತ್ರಾರ್ಥಗರ್ಭಿತ ಭಾವ ।
ಲೇಸೆನೆ ಹರಿ ಕೊಟ್ಟ ವರದಿ ।
ತ್ರಾಸಿಂದೆ ತೂಗಿದ ಮಣಿಯೆನೆ ಮಜ್ಜೀವಿ ।
ತೇಶ ವಿಸ್ತರಿಸು ಮೇಲ್ಗತೆಯ ॥”

“ಏತಕೆನ್ನನು ಕೀರ್ತಿಸಬೇಕು ನನಗೊಂದು ।
ಸ್ವಾತಂತ್ರ್ಯಬುದ್ಧಿ ಬೇಱಿಹುದೆ ।
ಪೀತಾಂಬರ ನೋಡಿಸಿದ ಸಾರಣನಂತೆ ।
ಮಾತ ವಿಸ್ತರಿಸೆ ಕೇಳ್ ಕೆಳದಿ ॥”

25 ನೆಯ ಸಂಧಿಯ ಪ್ರಾರಂಭದಲ್ಲಿ ಈ ನುಡಿ; 28 ನೆಯದರ ಎರಡನೇ ಸಾಂಗತ್ಯದ ದನಿ ಬೇರೆ:

“ಇನಿವಾತುಗಳ ಸತ್ಪದ ಬಂಧ ವ್ಯಂಗ್ಯೋಕ್ತಿ ।
ಧ್ವನಿಯರ್ಥಗೌರವದಿಂದೆ ।
ತನಿರಸವಡೆದ ಮತ್ಕೃತಿಯ ಚಿತ್ತೈಸಲೆ ।
ವನಿತೆಯರ ಮುಂಡೆ ಮಾಣಿಕವೆ ॥”

ಎಂದರೆ, ಕವಿಯ ಆತ್ಮಪ್ರತ್ಯಯಕ್ಕೂ, ಧೈರ್ಯಕ್ಕೂ ಚ್ಯುತಿಯಿಲ್ಲ. ಭಗವಾನ್ ಶ್ರೀಕೃಷ್ಣನ ಮುಂದೆ ಕನಕದಾಸನಿಗೆ ದೀರ್ಘದಂಡ ನಮಸ್ಕಾರ; ಕವಿಸಂದೋಹದ ಮಧ್ಯೆಯಾದರೋ ಅವನಿಗೆ ಆತ್ಮಾಹ್ಲಾದದ ಬದ್ಧ ಪದ್ಮಾಸನ.

“ಮೋಹನತರಂಗಿಣಿ”ಯನ್ನು ವಿರಚಿಸುವಾಗ ಕನಕದಾಸನಿಗೆ ಬಹುಶಃ ಪಂಡಿತಗೋಷ್ಠಿಯ ಮೆಚ್ಚಿಕೆಯನ್ನು ಪಡೆಯುವ ಅಭಿಲಾಷೆಯಿತ್ತು; ಪಂಡಿತ–ಕವಿಗಳಲ್ಲಿ ತಾನೂ ಒಬ್ಬನೆಂಬ ಸ್ವಾಭಿಮಾನವೂ ಇತ್ತು. ಅಷ್ಟಾದಶ ವರ್ಣನೆಗಳನ್ನು ಆ ಕಾವ್ಯದಲ್ಲಿ ತಂದಿಟ್ಟಿದ್ದಾನೆ; ಸಮುದ್ರ ವರ್ಣನೆಯೇ ಅದರ ಆದಿ. ಋತುಗಳು, ಬೇಟೆ, ಯುದ್ಧ ಮುಂತಾದುವು ಹಾಗಿರಲಿ ವೇಶ್ಯಾವಾಟಿಯನ್ನೂ ಕೈಬಿಟ್ಟಿಲ್ಲ. ‘ಕವಿಸಮಯ’ಕ್ಕೆ ಮುಜರೆ ಹಾರ ತುರಾಯಿಗಳು ಪುನಃ ಪುನಃ ಸಲ್ಲುತ್ತವೆ ಅವನ ಇಷ್ಟ ಹಸ್ತದಿಂದ.

“ಪೂಸರ ದಹನ ಕಾಮೋತ್ಪತ್ತಿ ವರ ಶಂಬ ।
ರಾಸುರ ವಧೆ ಕಂತುಸುತನ ।
ಭಾಸುರ ಲೀಲೆ ಬಾಣನ ಗೆದ್ದ ಜಯ ಲ ।
ಕ್ಷ್ಮೀಶನ ಕೃತಿಯ ವರ್ಣಿಪೆನು ॥”

ಇದು ಕಾವ್ಯದ ಉದ್ದೇಶ. “ಕೃತಿವೇಱಿಪ್ಪಿ ಗೀರ್ವಾಣ ಭಾಷೆ ಕನ್ನಡದಿ”, “ಸಕ್ಕದ ಕನ್ನಡವೆರಸಿದ ಕವಿತೆ”: ಇದು ಲೇಖನ ಕ್ರಮ. ಆದ್ದರಿಂದ, ಸಂಸ್ಕೃತ ಮೋಹ ಇಲ್ಲಿ ಕೊಂಚಮಟ್ಟಿಗೆ ವ್ಯಾಮೋಹವಾಗಿದೆ. ಇವುಗಳನ್ನು ಲಕ್ಷಿಸಿ.

"ರಾಕ್ಷಸಭೇದಿಯಂಗುಷ್ಟ ಸಂಭವೆ; ವಿಚ್ಛೇದನೋದ್ಯೋಗ; ಪಾದ ಜಡಜಕ್ಕೆ ನೊಸಲ ಚಾಚಿದಳು; ಚಂದನ ಸೌರಭ್ಯವಡೆದ ವಿಗ್ರಹಜಾತ ಸಂದೋಹ; ಮರುತಭುಕ್ಶಾತ್ರಧಿಪನಪರಾವತಾರ; ವಾಸವನೈಶ್ವರ್ಯಗೇಡಿ; ಅಬ್ಜಾರಿ; ಉರಿಗಣ್ಣವ ರಹಿತಬಾಹನ ಕೊಂಡು ತೆರಳಿದ; ವಾರಿಮಸ್ತಕನ; ಅತ್ರಿಮುನೀಶನಂದನ ಜೂಟ ಭಕ್ತನ ಪುತ್ರಿ; ರಜನೀಚರ ಹರನಾತ್ಮ ಸಂಭವೆ; ಸುಮೇರು ಬಾಣಾಸನಧರ ಭಕ್ತ; ಸತ್ಪದ ಮಿತ್ರಾಪಜಯುದ ವೇಳೆ; ನಿನ್ನ ಲಪನಾಬ್ಜಮಿತ್ರ ಮಾಧವ; ಭರ್ಮಕಲಶ."

ಉದ್ದಕ್ಕೂ ಇಂಥ ನುಡಿಗಟ್ಟು ತಾವಿದ್ದೇವೆಂದು ಜಾಗಟೆ ಬಾರಿಸುತ್ತವೆ. ಅಲ್ಲದೆ, ಸ್ವಲ್ಪವುಟ್ಟಿಗೆ ಅಪೂರ್ವವೂ ಅಸ್ಪಿಷ್ಟು ಸಂದಿಗ್ಧವೂ ಒಟ್ಟಿನಲ್ಲಿ ಕಷ್ಟಗ್ರಾಹ್ಯವೂ ಆದ ಪದಗಳ ಪ್ರಸಾರವನ್ನೂ ನೋಡಬಹುದು ಅಲ್ಲಲ್ಲಿ.

"ಜನಸೂಡಿಗೆಯ ಸೈರಿಸಬಲ್ಲರಾರು; ನಾದತಾತ್ಪರ್ಯ; ಯಾರಿ; ಅಣ್ಣಗಳು; ಕೊಜ್ಜೆಯರು; ಈ ಪಡುಚ; ತಾಳಿಯ ಹಾಕಿ; ಎಳೆಗ; ಉಡುಕು; ಗೊಂತಾಗಿ ನಿಲವೇಡ; ಜವಿಬೀಸರು ಹೊಗದಂತೆ; ಉಟ್ಟಾಡಿ; ತುಕ್ಕಿ; ಗೋದಣಿವಲ್ಲ ಭೂತಗಳ; ಬುಜ್ಜಣಿಗೆ; ತಿಕಪುತ್ಸ; ಬೊಲ್ಲು ಶಬ್ದ; ಕಾಸುಗುಟಿ."

ಇವೆಲ್ಲ ಕವಿಯೊಂದು ಉದ್ಗ್ರಂಥ ಲೇಖನದಲ್ಲಿ ತೊಡಗಿದ್ದಾನೆಂಬ ಸಾರಸ್ವತ ವಾರ್ತೆಯನ್ನು ನಮ್ಮ ಕರ್ಣೇಂದ್ರಿಯಗಳಿಗೆ ಪದೇಪದೇ ಒಯ್ದು ತರುವ ಉಪಕರಣ.

ಕವಿಪದ್ಧತಿಯ ಆಶೆ, ಕಾವ್ಯಸಂಪ್ರದಾಯಕ್ಕೆ ಶರಣುಬೀಳುವ ಒಪ್ಪಿಗೆ, 'ದೇವಭಾಷೆ'ಯ ವಾಂಛಲ್ಯವೆಲ್ಲ "ಮೋಹನತರಂಗಿಣಿ"ಗೆ ಮಾತ್ರ ಅನ್ವಯವಾಗುತ್ತದೆ. "ನಳಚರಿತ್ರೆ"ಯ ಒಳಗಿನ ಷಟ್ಪದಿಗಳಲ್ಲಿ ಆ ವಿಧದ ಸೊಲ್ಲು ಕೇಳಿಬರುವುದಿಲ್ಲ ಎಲ್ಲೂ; ಅದು ನಿಜವಾದ ಅರ್ಥದಲ್ಲಿ, ಹಿರಿಯ ಅರ್ಥದಲ್ಲಿ, ವ್ಯಾಸಭಾರತದ ನಳೋಪಾಖ್ಯಾನದ ಕನ್ನಡ ಅನುವಾದ. ಶಾಸ್ತ್ರೀಯವಾಗಿ ಅದನ್ನು ಯಾವ ಸಾಹಿತ್ಯಪ್ರಕಾರಕ್ಕಾದರೂ ಸೇರಿಸಲಿ; ನಮ್ಮ ನೋಟಕ್ಕೆ ಅದು ಅತ್ಯುತ್ತಮ "ಕಥನ ಕಾವ್ಯ," ಅಪರೂಪವಾದ ಕಥನ ಕಾವ್ಯ.

"ವರದ ಗಣಪತಿ ಪಾಲಿಸೆನ್ನಯ ಮತಿಗೆ ಮಂಗಳವ;"
"ಉದಾರೆ ಶಾರದೆ ನಲಿದೊಲಿದು ನೆಲಸೆನ್ನ ಜಿಹ್ವೆಯಲಿ;"

ಎಂದು ಪ್ರಾರ್ಥನೆಗೈದು, ಕವಿ ನೆಟ್ಟಗೆ ನಳಭೂವರನ ಮಹಾಕಥೆಯನ್ನು ಹೇಳುವುದಕ್ಕೆ ನುಗ್ಗುತ್ತಾನೆ, ಹೇಳುತ್ತಲೇ ಮುಂಬರಿಯುತ್ತಾನೆ. ಕಥನವೊಂದೇ ಅವನ ವ್ಯವಸಾಯ.

"ಆದಿನಾರಾಯಣನು ಸಲಹುವನಖಿಳ ಸಜ್ಜನರ"

ಎಂಬ ಮಂಗಳ ಮುಕ್ತಾಯದವರೆಗೂ ಕಥನಗಾರಿಕೆಯ ಹೊರತು ಬೇರೆ ಹಂಬಲಿಕೆಯೇ ಇಲ್ಲ ಕನಕದಾಸನಿಗೆ; ಇದೊಂದು ವೈಚಿತ್ರ್ಯ, ವೈಶಿಷ್ಟ್ಯ, ಕವಿ ವಿಜಯ. "ಮೋಹನತರಂಗಿಣಿ"ಯಂಥ ಕಾವ್ಯಗಳಿಗೆ, ಅದನ್ನು ಮೀರಿಸುವ

ಕಾವ್ಯಗಳಿಗೆ, ಕನ್ನಡ ಸಾಹಿತ್ಯದಲ್ಲಿ ಕೊರತೆಯಿಲ್ಲ. "ಹರಿಭಕ್ತಿಸಾರ"ದಂಥ ಶತಕಗಳು ಹಲವುಂಟು. "ರಾಮಧಾನ್ಯಚರಿತೆ" ಕವಿಯ ಸ್ವಂತ ಕಲ್ಪನೆಯ ನವೀನ ಸೊಗಸಿನಿಂದ ಕಂಗೊಳಿಸುತ್ತಿದೆ; ಆದರೆ ಅದು ಚಿಕ್ಕದು. "ನಳಚರಿತ್ರೆ" ನಿಸ್ಸಂದೇಹವಾಗಿ ಖಚಿತವಾಗಿ ಕನಕದಾಸನ ಕಾವ್ಯಕಿರೀಟ, ಅದಕ್ಕೂ "ಮೋಹನತರಂಗಿಣಿ"ಗೂ ಇರುವ ವಿಭಿನ್ನತೆ ಎದ್ದುಕಾಣುತ್ತದೆ. ಮುಗ್ಧತೆಯೋ ಎನ್ನಿಸುವಷ್ಟರ ಅಕುಟಿಲತೆ, ನೇರಕಥನ, ಪ್ರಯಾಸವಿಲ್ಲದೆ ಉಕ್ಕಿಬರುವ ಚತುರೋಕ್ತಿ ಇತ್ಯಾದಿ ಮುಖ್ಯ ಲಕ್ಷಣಗಳು ಎರಡರಲ್ಲೂ ಸುಮಾರು ಸಮ ಅಳತೆಯಲ್ಲಿ ಪ್ರಕಟಿತವಾಗದೇ ಇದ್ದಿದ್ದರೆ, ಅದರ ಕರ್ತೃ ಬೇರೆ ಇದರ ಕರ್ತೃ ಬೇರೆ ಎಂದು ಬಿಡಬೇಕಾಗುತ್ತಿತ್ತು. ಯಾವುದನ್ನು ಕನಕದಾಸ ಮೊದಲು ಬರೆದ, ಯಾವುದನ್ನು ಆಮೇಲೆ?

ಮಕ್ಕಳಿಗೆ ಹೇಗೋ ಹಾಗಿರುವ ಸಾದಾ ಮನಸ್ಸು ಕನಕದಾಸನದು. ನಾಜೂಕು ನಾಗರಿಕತೆಯ ತಿರುಗುಮುರುಗಾವುದನ್ನೂ ಅವನ ಅಂತರ್ಯ ಅರಿತಿಲ್ಲ, ಅರಿಯಬೇಕೆಂಬ ಕುತೂಹಲವಾಗಲಿ ಚಾಪಲ್ಯವಾಗಲಿ ಅವನಿಂದ ಅತಿ ದೂರ. ಒಂದೇ ಪದದ ಪುನರುಕ್ತಿ ಅವನ ಸಾಮಾನ್ಯ ವಾಡಿಕೆ; ಅದರಿಂದ ತನ್ನ ಬುದ್ಧಿವೈಶಾಲ್ಯವನ್ನು ಕುರಿತು ಪಾಠಕರಲ್ಲಿ ಶಂಕೆ ಅಂಕುರಿಸೀತೆಂಬ ಭಯ ಅವನನ್ನು ಕಾಡದು, ಹಾಗೂ ಪಾಠಕರಿಗೆ ಬೇಸರ ಉಂಟಾದೀತೆಂಬ ಚಿಂತೆಯೂ ಅವನ ಮೆದುಳಿನಲ್ಲಿ ಸುಳಿಯದು. "ಕುಸ್ತರಿಸು" ಎಷ್ಟು ಬಾರಿ ಪ್ರಯೋಗವಾಗಿದೆಯೋ ಎಣಿಸಿ ತಿಳಿಯಬೇಕು; ಅದೇ ಅವನಿಗೆ ಅತ್ಯಂತ ಪ್ರಿಯವಾದ ಮೋಹಕ ಶಬ್ದ. "ಮೃಡತಪಧ್ವಂಸಿ", "ದುಗ್ಧಾಬ್ಧಿ"—ಇವೂ ಅನೇಕ ಬಾರಿ ಬಳಕೆಗೆ ಲಭ್ಯವಾಗಿವೆ. ಮಂದಸ್ಮಿತವನ್ನು ನಮ್ಮಲ್ಲಿ ಹುಟ್ಟಿಸುವ ಇನ್ನೊಂದು ಅಂಶ: "ಹೇಮಾಂಬುರುಹ ಮೊಗ್ಗೆ ಮೊಲೆಯ ಮಾನಿನಿ" ಎಂಬುದು ತಿರುತಿರುಗಿ ಬರುತ್ತದೆ, ಅವನ ಪುಟಗಳಲ್ಲಿ; ಅವನ ಮುಗ್ಧತೆಗೆ ಅದೊಂದು ಸಾಕ್ಷ್ಯ. ರಾಜಹಂಸ ಹೀಗೆ ಭರವಸೆ ಕೊಡುತ್ತದೆ ನಳನೃಪಾಲನಿಗೆ:

"ಭೂರಮಣ ಕೇಳಸುವ ಕಾಯ್ದುಪ |
ಕಾರ ಮಾಡಿದೆ ನೀನು ನಿನಗುಪ |
ಕಾರ ಮಾಡುವೆನು."

ಅದರ ಸ್ವಸಂರಕ್ಷಣೆಯ ವಾದ ಇದು:

"ಮಂಜು ಸುರಿಯ |
ಲ್ಕೊಡನೆ ಕೆರೆ ತುಂಬುವುದೆ ನೃಪ ನೀನೆನ್ನ ಭುಂಜಿಸಲು |
ಒಡಲಿಗಾಪ್ಯಾಯನವೆ ಕೇಳೆಲೆ |
ಪೊಡವಿಪತಿ ಬಿಡು ನನ್ನ ಮನೆಯಲಿ |
ಮಡದಿ ಸುತರುಮ್ಮಳವ ನೋಡೆಂದೊರಲಿತಾ ಪಕ್ಷಿ ॥"

ಪುಣ್ಯಕೋಟಿಯೆಂಬ ಕಪಿಲೆ ಅರ್ಭಕನೆಂಬ ಹೆಬ್ಬುಲಿಗೆ ಸಿಕ್ಕುವ ಪ್ರಸಂಗ ಇಲ್ಲಿ ಯಾರಿಗೆ ತಾನೆ ನೆನಪಾಗುವುದಿಲ್ಲ? ಉಷೆಯ ಮಿತ್ರೆ ಚಿತ್ರಲೇಖೆಗೆ "ಘಟ ಬೀಟಲವಳಿದ್ದ ಬಟಿ ಬಂದಪೆನು" ಎನ್ನುತ್ತಾನೆ ಅನಿರುದ್ಧ. ತ್ರಿಲೋಚನನಲ್ಲಿಗೆ ಹೋಗಬೇಡೆಂದು ಪಂಚಶರನಿಗೆ ಪಾರ್ವತಿ ಈಯುವ ಬುದ್ಧಿವಾದವೇನು?

"ತಲೆ ಬಲ್ಲಿತೆಂದು ಕಲ್ಲನೆ ಹಾಯಬೇಡ ಹೋ ।
ಗೆಲೊ ಪಾಪಿ ಮನ್ಮಥ ಮನೆಗೆ ॥"

ಅನಂಗನನ್ನು ಜ್ಞಾಪಿಸಿಕೊಂಡು ಕಂಗೆಟ್ಟಿರುವ ರತಿದೇವಿಗೆ ಶಂಬರನ ಪಟ್ಟದರಾಣಿ ಕೊಡುವ ಧಾರಾಳ ಸಮಾಧಾನ:

"ನಿನಗೆ ತನ್ನಾಳ್ದನನಿತ್ತಪೆನೆಂದಳಾ ಕಾಂತೆ."

ರಕ್ಕಸಿಯಾದರೂ ಅವಳ ಜಾಯಮಾನ ಕಿಲ್ಬಿಷರಹಿತವಾದದ್ದು, ಹಸುಳೆಗೆ ಸಮನಾದದ್ದು. ಕಾಮ ಸುಟ್ಟುಹೋಗಿ ನಷ್ಟವಾದ ತರುವಾಯ ರುಕ್ಮಿಣಿ ಕೃಷ್ಣರಿಗೆ ಆಗುವ ಮುಚ್ಚುಮರೆಯಿಲ್ಲದ ಈ ಸರಸಸಲ್ಲಾಪ ಕವಿಯ ಮುಗ್ಧತೆಯ ತುತ್ತತುದಿಯನ್ನು ತೋರಿಸಿಕೊಡುತ್ತದೆ ನಮಗೆ:

"ನೀ ಪಾಲಿಸಬೇಕು ನನಗೊರ್ವ ಕಂದರ್ಪ ।
ರೂಪಾಂತವರ ಕುಮಾರಕನ ॥"

"ನಕ್ಕನು ಕೃಷ್ಣ ನಲ್ಲೆಯ ಮಾತ ಕೇಳ್ದು ನೀ ।
ಮಕ್ಕಳ ಪಡೆದ ಮಾತ್ರದಲಿ ।
ಕಕ್ಕಸ ಮೊಲೆ ಜಜಿದವುದೆಂದು ಕಟಕಿಯ ।
ನೊಕ್ಕಣಿಸಿದನು ವಲ್ಲಭೆಗೆ ॥"

"ಮಗುವುಂಡು ಬಲ್ಮೊಲೆ ತೊರೆದರೆ ಮತ್ತಿಷ್ಟು ।
ಬಿಗುಹು ದೋಱುವುದುರಸ್ಥಳದಿ ।
ಲಗುಗೆಯ್ಯದೆನ್ನ ಬಿನ್ನಪವ ಲಾಲಿಪುದೆಂದು ।
ಸುಗುಣಗೆ ಬಿನ್ನಯಿಸಿದಳು ॥"

ಶೋಕಡ ನೂರರಷ್ಟು ಪವಿತ್ರವಾದ ಅಂತಃಕರಣ ಯಾವ ಕವಿಗುಂಟೋ ಅವನಿಗೆ ಮಾತ್ರ ಇಂಥ ಬೆಳಕು ಬರವಣಿಗೆ ಸಾಧ್ಯ; ಅದೇ ಗುಂಪಿನ ಓದುಗನಿಗೆ ಮಾತ್ರ ಯಾವ ವಿಕಾರಕ್ಕೂ ಈಡಾಗದೇ ಇದನ್ನು ಪಠಿಸುವ ಯೋಗ್ಯತೆ. ಹೇಳುವವನಿಗೂ, ಕೇಳುವವನಿಗೂ ಕೃಷ್ಣಲೀಲೆಯ ಕಥೆ ನಿಶ್ಚಯವಾಗಿ 'ಅಸಿಧಾರಾ ಪಥ'.

ಹಿಂದಣ ಕನ್ನಡ ಕವಿಗಳು ಎರಡು ಪಂಗಡವಾಗಿ ವಿಭಾಗವಾಗುತ್ತಾರೆ ಸ್ಥೂಲದೃಷ್ಟಿಯಿಂದ ನೋಡಿದರೆ: ಪಂಡಿತ ಕವಿಗಳು, ಜನಪದದ ಕವಿಗಳು; ಅಥವಾ ಪ್ರೌಢ ಕವಿಗಳು, ಕವಿಗಳು. ಕನಕದಾಸ ಯಾವುದೋ ಅಪೇಕ್ಷೆ

ಯಿಂದ, ಯಾವುದೋ ಬಲಾತ್ಕಾರದಿಂದ, ಪಂಡಿತ ಕವಿಗಳೊಡನೆ ಬೆರೆಯುತ್ತಾನೆ; ಆದರೂ ಅವನು ಸ್ವಭಾವತಃ ಅಧಿಕವಾಗಿ ಆದರಗೂಡಿ ಜನಪದದ ಕವಿಯೇ ಸರಿ. ಶ್ರೋತೃಗಳಿಗೆ ಅನಲ್ಪ ತೊಂದರೆಯನ್ನು ಕೊಡಬಾರದೆಂದೇ ಅವನ ತವಕ; ಸರಾಗವಾಗಿ ಸಲೀಸಾಗಿ ಬರೆಯುವುದೇ ಅವನ ತಪಸ್ಸು. ವಸ್ತುವಾಗಲಿ, ವ್ಯಕ್ತಿಯಾಗಲಿ, ಪರಿಸ್ಥಿತಿಯಾಗಲಿ, ಮಾನಸಿಕ ಸ್ಥಿತಿಯಾಗಲಿ ಅದನ್ನು ಸ್ಫಟಿಕಸ್ಪಷ್ಟವಾಗಿ ಸುವ್ಯಕ್ತವಾಗುವಂತೆ ಮೂರ್ತತ್ವ ಕೊಟ್ಟು ನಿರೂಪಿಸುವ ಉತ್ಸುಕತೆ ಅವನಲ್ಲಿತ್ತು; ಹಾಗೆ ಮಾಡುವುದಕ್ಕೆ ತಕ್ಕ ಕೌಶಲವೂ ಆವನ ಮೇಲೆ ನಗುಮುಖ ಬೀರುತ್ತಿತ್ತು. ನಿಜವನ್ನು ನುಡಿಯಬೇಕಾದರೆ ಸುಸ್ಪಷ್ಟತೆ ಕಾವ್ಯದ ಉಸಿರು, ಸುಸ್ಪಷ್ಟತೆಯಿಂದಲೇ ಕಾವ್ಯದ ಕಲ್ಯಾಣ. ಕನಕದಾಸನ ವಿಭಾವನೆ, ಕಾವ್ಯನಿರ್ಮಾಣ ಶಕ್ತಿ, ಆ ರೀತಿ 'ವಾಸ್ತವಿಕ'ವಾದದ್ದು. ಹಲವು ಮುಖಗಳಿಂದ ವಿಮರ್ಶೆ ನಡೆಸಿ ಈ ಸಿದ್ಧಾಂತವನ್ನು ಸಮರ್ಥಿಸಬಹುದು.

೧. ಈ ವರ್ಣನೆಗಳು ಹೇಗೆ ಚಿತ್ರಗಳಾಗಿವೆ, ಪ್ರತಿಮೆಗಳಾಗಿವೆ, ಭಾವಿಸಿ:

"ಸಣ್ಣವರುಗಳನೋದಿಸುತಿರ್ಪ ಕಸೆಯ ಕೋ ।
ಲಣ್ಣಗಳ್ ಚಾಪದಿಗವಿತೆ ।
ಬಣ್ಣಗಂಬಿಯ ಪುಸ್ತಕ ಲಿಖಿತಜ್ಞರು ।
ಕನ್ನಡಕನ ತಾಳ್ದಿಹರು ॥"

ಕಿಶೋರ ಪ್ರದ್ಯುಮ್ನನನ್ನು ಶಂಬರಾಸುತ ಅತಿ ಪ್ರೇಮದಿಂದ ತನ್ನೊಡನೆ ಗರುಡಿಮನೆಗೆ ಕರೆದುಕೊಂಡು ಹೋಗಿ,

"ಜಗತಿಯ ಭೇತಾಳನೆಡೆಯ ಕುಳ್ಳಿರಿಸಿ."

"ನಿರ್ದೈವ ದೈತ್ಯ ತನ್ನಂತರಂಗದೊಳಿಡಿ ।
ದಿರ್ದ ವಿದ್ಯವ ರತೀಶ್ವರಗೆ ।
ನಿರ್ಭರವಾಗಿ ಸಮರ್ಪಿಪ ತೆಱದಡ ।
ಬಿದ್ದ ಭೇತಾಳ ದೇವರಿಗೆ॥"

ಹಾಗ ಅಸುರನ "ಮಹದಾದಿ ವಿದ್ಯೆ" "ಕಾಣಬಂದುದಾ ಕಂತುವಿಗೆ," ಪುಷ್ಪಕ ವಿಮಾನವನ್ನು ಹತ್ತಿ ಪ್ರದ್ಯುಮ್ನ "ಗತಿಸೂತ್ರವ ಮೆಟ್ಟಿ ತೆರಳಿದ"ನಂತೆ: ಗಗನಯಂತ್ರ ನಮ್ಮ ಕಣ್ಣಮುಂದೆ ಹಾರಿದಂತೆ ಭಾಸವಾಗುವುದಿಲ್ಲವೆ? ಅವನು ದ್ವಾರಕಾವತಿಗೆ ಆಗಮಿಸಿದಾಗ,

"ಕೆಲಬರು ಕೃಷ್ಣನೆಂಬರು ಕೃಷ್ಣನಲ್ಲೆಂದು ।
ಕೆಲಬರು ಜೂದ ಕಟ್ಟುವರು ।
ಕೆಲಬರು ನೀನೇನ ಬಲ್ಲೆಯೆಂದಲಸದೆ ।
ನೆಲೆ ನಿಂತು ನೋಡುತಲಿಹರು."

"ಒಗ್ಗರಣೆ ಇಂಗಿನ ಕಂಪು ಸುಟಿದುದು ಬಹಿಃಸ್ಥಳಕೆ" ಎನ್ನುತ್ತ ಭೋಜನ ಸಮಾರಂಭಕ್ಕೆ ಯಥಾರ್ಥವಾಗಿ ಕರೆದೊಯ್ಯುತ್ತಾನೆ ನಮ್ಮನ್ನ.

"ಶಿರದೆಡೆಯೊಳಗಿರ್ದ ಶಿವಲಿಂಗದೇವರ ।
ಪರಮು ವಸ್ತ್ರವ ಬಿಚ್ಚಿ ತೆಗೆದು ।
ವರ ರತ್ನಾಂಚಿತ ವೃಷಭ ಮುದ್ರೆಯನಿಟ್ಟ ।
ಕರಕಂಜದೊಳಗೆ ಸಾರ್ಚಿದನು ॥"

ಎಂದು ಬಣ್ಣಿಸಿ, ಬಾಣನ ಶಿವಪೂಜೆಯನ್ನು ಪುಸ್ತಕದ ಬದನೇಕಾಯಾಗಿ ಇಡದೆ ಸತ್ಯಸಂಗತಿಯನ್ನಾಗಿಸುತ್ತಾನೆ. ಉಷೆ "ಬೆಳ್ಳಿಲೆಯ ಮೆಲ್ಲುತೆ ಸಖಿಗೂಡಿ ಬಂದಳು ದಿವಾಣಕ್ಕೆ": 'ದಿವಾಣ' ಶಬ್ದದಿಂದ ಈ ವಚನ ಪ್ರತ್ಯಕ್ಷ ಜೀವನದ ಒಂದು ಘಟನೆಯಾಗಿ ನಿಲ್ಲುತ್ತದೆ:

"ಅಡಿಗೆಯನ್ನು ಮಾಡಬೇಕಣ್ಣ ।
ನಾನೀಗ ಜ್ಞಾನ ।
ದಡಿಗೆಯನ್ನು ಮಾಡಬೇಕಣ್ಣ ॥"

"ನನ್ನವ್ವ ಕಲ್ಲ ಬಿಡೆ ।
ಈ ಧೋತ್ರವ ।
ಚೆನ್ನಾಗಿ ಒಗೆಯಬೇಕು ॥"

೨. ಗಿಡ ಮರ ಹಣ್ಣು ಹೂ ಪಶುಪಕ್ಷಿಗಳ ಪಟ್ಟಿಗಳು ಪ್ರಾಯಶಃ ಸಾಂಪ್ರದಾಯಿಕ ಕಾವ್ಯಗಳಲ್ಲೆಲ್ಲ ಅನಿವಾರ್ಯ. ಅವನ್ನು ತಯಾರಿಸುವಾಗ ಹೆಚ್ಚು ಕಡಮೆ ಎಲ್ಲ ಕವಿಗಳೂ—ಮಹಾಕವಿಗಳೂ ಕೂಡ—ಸಿದ್ಧಕೋಶದ ಒಳಕ್ಕೆ ಹೊಕ್ಕು ಅಲ್ಲಿಂದ ಕದ್ದು ತಂದ ಚಿರಪರಿಚಯದ ಮಾಲನ್ನು ಅಷ್ಟಿಷ್ಟು ಚಾತುರ್ಯದಿಂದ ಹರಡಿ ತೋರಿಸುವುದೇ ಪದ್ಧತಿ. ಕನಕದಾಸನೂ ಆ ಮಾರ್ಗವನ್ನೇ ಹಿಂಬಾಲಿಸಿದರೂ, ತಾನೇ ಕಂಡ ವಸ್ತುಗಳನ್ನು ಎಷ್ಟೋ ಕಡೆ ತಂದು ಕೂಡಿಸಿ, ತಥ್ಯಾಂಶದ ಸ್ಫುಟ ಕಾಂತಿಯನ್ನು ಬೀರುತ್ತಾನೆ ವರ್ಣನೆಗೆ. ಇವನ್ನು ಗಮನಿಸಿ:

"ಚೆಂಗಣಿಗಿಲೆ ನಂದ್ಯಾವರ್ತ ದವನ ಬೆ ।
ಳ್ದಿಂಗಳ ಸಖಿಯಿರವಂತಿ ।
ಹೊಂಗೇದಗೆ ಯದಿರ್ಗಂಚಿ ಕಮ್ಮಲರ್ಗಳ ।
ತೊಂಗಲು ಮೆರೆದವಭ್ರದಲಿ ॥"

"ಕಾಬಾಟಿ ದೀಪದ್ರಾಕ್ಷೆ ಕೇತಕಿ ತೋರ ।
ಸೀಬಾಂತ ಬಿದಿರ್ವೆತ್ತಗಳ ।
ಲೋಬಾನ ಚಂದನಗಾಡಿನೊಳ್‌ಪಂದಿ ಮೆ ।
ತ್ತೇ ಭಂಗಳಿರೆ ಕಂಡರವರು ॥"

“ಬೆಳಲು ಬಿಲ್ವತ್ರೆ ಘೋಟಕಿ ಬಿಕ್ಕೆ ನೇಮಿ ಹೆ ।
ಗ್ಗಳಪಿ ಕಡಸು ಕಾರೆ ಬೋರೆ ।
ಗುಳವತ್ತಿ ತುಂಬುರು ನಗರೆ ಮುಂತಾದ ।
ಪಣ್ಗಳ ತಂದರಾಳ್ದನ ಬಳಿಗೆ ॥”

“ಚೆಂಗಣಿಗಿಲೆ ಸೇವಂತಿಗೆ ಕತ್ತುರಿ ।
ಸಿಂಗದ ಮುಡಿವಾಳ ದವನ ।
ಮಂಗಳ ತುಳಸಿ ಬಿಲ್ವದ ಪತ್ರಗಳ ಶಿವ ।
ಲಿಂಗಾರ್ಪಿತವ ಮಾಡಿದನು ॥”

ಒಳಕೊಠಡಿಯಲ್ಲಿ ಸುಖಾಸೀನನಾಗಿ ಕುಳಿತು ಬೆಟ್ಟ ಗುಡ್ಡ ನದಿ ಕಾನನಗಳನ್ನು ‘ನಿರೀಕ್ಷಿಸಿದ’ ಕವಿಯಲ್ಲ ಕನಕದಾಸ!

೩. ತನ್ನದೇ ಆದ ಹಾಗೂ ಸೂಕ್ತವಾದ ಒಂದು ಸಾದೃಶ್ಯದ ಮೂಲಕ ಪ್ರಸಕ್ತ ವಿಷಯದ ಖಚಿತಾನುಭವವನ್ನು ಒದಗಿಸಬಲ್ಲ ಕನಕದಾಸ. ಶಂಬರನ ಅರಮನೆಯಲ್ಲೇ ಅವನ ಮಾರಣ ಶತ್ರು ಬೆಳೆಯುತ್ತಿದ್ದಾನೆಂಬ ಆತಂಕವೃತ್ತಾಂತವನ್ನು ಶ್ರುತಪಡಿಸುವಾಗ ನಾರದ ಈ ಎಚ್ಚರಿಕೆಯನ್ನು ಬೋಧಿಸುತ್ತಾನೆ ಆ ದಾನವೇಶ್ವರನಿಗೆ:

“ಕಟಿಲೆಯ ನಖದಲಿ ಚಿವುಟಲಹುದು ಮುಂದೆ ।
ಲಳಿಗೆ ಕೊರುಗುರಿಗಂಜುವುದೇ ॥”

ರತಿದೇವಿ ಪ್ರದ್ಯುಮ್ನನಿಗೆ ಒಸಗೆ ಈಯುವುದಕ್ಕೆ ನಾರದ ಬಂದದ್ದು ಹೀಗಿದ್ದಿತಂತೆ:

“ಓರಂತೆ ಮಧು ಘೃತ ರಸದಾಳಿ ರಸ ಗೋ ।
ಕ್ಷೀರದಂತೆಸೆವ ಕಾರ್ಯಕ್ಕೆ ।
ನೀರಂತೆ ಕಡಜಿಗನೆಸಱಂತೆ ಪುಱಿಯಂತೆ ।
ನಾರದ ಬಂದನಾಯೆಡೆಗೆ ॥”

ಕದನೋನ್ಮುಖನಾದ ಕಂದರ್ಪನನ್ನು ತಡೆಯುವ ಪ್ರಯತ್ನದಲ್ಲಿ ಅವನ ಪತ್ನಿ ಆಡುವುದೇನು?

“ಮೂಢರಂದದೊಳೂರ ಗುದ್ದಲಿಯನು ಕೊಂಡು ।
ನಾಡ ಕಾಲುವೆಯ ತಿದ್ದುವರೆ ।
ಬೇಡ ಲಲಾಟನೇತ್ರನ ಕೂಡೆ ಕಲಹ ॥”

ಕುರೂಪಿಯಾದ ನಳರಾಜನ ಉದ್ಗಾರ:

“ತೋರ ಮಾಣಿಕವೆಂದು ಪಿಡಿದರೆ ಭೂರಿ ಕೆಂಡವಿದಾಯ್ತು ಶಿವ ಶಿವ ।”

ಚಿತ್ರಲೇಖೆಗೆ ಉಷಾದೇವಿ 'ನಿನ್ನ ಋಣವನ್ನು ಹೇಗೆ ತೀರಿಸಲಿ?' ಎಂದು ಕುದ್ದುಕೊಂಡಾಗ, ಅವಳ ಸಾಂತ್ವನ:

"ಅಂಗವ ತುಱಿಸಲ್ಕೆ ತುಱಿಸುವ ಕೈಗಳ್ಗೆ ।
ಹಂಗತಿದ್ದುವ ಶಾಸ್ತ್ರವುಂಟೆ ॥"

ದ್ವಿತೀಯ ಸ್ವಯಂವರವನ್ನು ಆಲೋಚಿಸಿದಳಲ್ಲ ಎಂದು ವಿಷಣ್ಣನಾಗಿರುವ ನಳನಲ್ಲಿ ದಮಯಂತಿ ತನ್ನ ಪರವಾಗಿ ಬೇಡುವ ಕ್ಷಮಾಯಾಚನೆಯ ಪರಿ ಇದು:

"ನಡೆಯುತೆಡಹಿದ ಪಟ್ಟದಾನೆಯ ।
ವಿಡಿದು ಕೊಲ್ಲುವರುಂಟೆ ನಂಬಿದ ।
ಮಡದಿಯಲ್ಲವೆ ತಾನು ಬಿರುನುಡಿಯೇಕೆ ನಳ ನೃಪತಿ ॥"

ಚಿತ್ರಲೇಖೆಯ ಪರಿಹಾಸ:

"ಕನಸಿನ ಭತ್ತಕೆ ಗೋಣಿಯನಾಂತರೆಂ ।
ದೆನಿಸಿದೆ ನೀ ಮೂಢವೆಣ್ಣೆ ॥"

ಉಪಮಾನರೂಪಕವಾವುದೂ ನಿಜಾಂಶವನ್ನು ಸಮರ್ಥಿಸುವ ಪ್ರಮಾಣವಲ್ಲ, ವಾದವಲ್ಲ, ದಿಟ; ಆದರೆ ಅವು ತಮ್ಮ ಗಾಢ ಹೊಂದಾಣಿಕೆಯಿಂದಲೂ, ಉಜ್ವಲತೆಯಿಂದಲೂ ನಿಜಾಂಶವನ್ನು ಸ್ಪಷ್ಟೀಕರಿಸಿ ಅದರ ಸ್ಥಾಪನೆಗೆ ಸಹಾಯ ಮಾಡಬಲ್ಲವು. ಇದನ್ನೂ ಸ್ವೀಕರಿಸಿ:

"ಬಟ್ಟವೆರೆಯ ಬೆಳ್ದಿಂಗಳ ಹೊಂದಾವರೆ ।
ಬಟ್ಟಲೊಳ್ ಸೋದಿಪರುಂಟೇ ।
ನೆಟ್ಟನೆ ಕನಕದಾಸನ ಕಾವ್ಯದೊಳ್ ದೋಷ ।
ತಟ್ಟದು ತಪ್ಪೆನಬೇಡ ॥"

೪. ಬಾಯಿನಿಂದ ಬಣ್ಣ ಬಯಲು, ಅಹುದೊ? ಪಾತ್ರದ ಒಂದು ಮಾತಿನಿಂದ ಅದರ ಮನೋಧರ್ಮ ಶೀಲ ಚರ್ಯೆಗಳನ್ನು ತೆರೆದು ತೋರಿಸಿ, ಅದನ್ನು ಕೆತ್ತಿ ನಿಲ್ಲಿಸಬಲ್ಲ ಕನಕದಾಸ. ಕಲಿಪುರುಷ ವಿಲಂಬ ವರ್ಣನೆ ಏಕೆ, ಅವನ ಈ ನಿರ್ಧಾರ ನಮ್ಮ ಕಿವಿಯನ್ನು ತಾಕುವಾಗ?

"ಹಿಡಿಯೆ ಫಲವನು ಹಿಡಿದ ಬಳಿಕದ ।
ಬಿಡೆನು ಮತವೆನ್ನಲ್ಲಿ."

ಅನಿರುದ್ಧನಿಗೂ ಬಾಣಾಸುರನಿಗೂ ಕಾಳಗವಾಗುವಾಗ ಉಷೆ ನುಲಿದುಕೊಳ್ಳುತ್ತಾಳೆ ಈ ಒಳತೋಟಗೆ ಪಕ್ಕಾಗಿ:

"ಪಱುಕನಘಟ ಸಾಸಿರ ಬಾಹು ಪಿತನೆನ್ನ ।
ಕಿಱುಕಾಂತನೊಳು ಕಾದುತಿಹನು ।
ಇಱಿದುಕೊಂಡರೆ ಹೊಟ್ಟೆ ತಿವಿದುಕೊಂಡರೆ ಕಣ್ಣು ।
ಮಱುಕ ಮನ್ಮನವ ಭಂಗಿಸಿತು ॥"

'ಶಂಬರನನ್ನು ಒಪ್ಪಿಕೊ' ಎಂದು ರಾಕ್ಷಸರಾಣಿ ಅಂಗಲಾಚಿದಾಗ ರತಿ ಹೇಳುವ ಉತ್ತರ:

"ವಾಮಲೋಚನೆ ಕೇಳು ಜಗವ ಮೋಹಿಸುತಿಹ ।
ಕಾಮನ ತೆಕ್ಕೆಗೊಂಡಿರ್ದ ।
ಕೋಮಲತರ ಬಾಹುಗಳಿಂದ ಪುರುಷವಿ ।
ರಾಮ ದೇಹವ ಮುಟ್ಟಬಹುದೆ ॥"

ಹಾಗೆಯೇ, ಪಾತ್ರವನ್ನು ಕುರಿತು ಇತರರಾಡುವ ಒಂದು ವಾಕ್ಯ ಕೆಲವು ಸಾರಿ ಅದರ ಮೇಲೆ ಚೆಲ್ಲಿದ ಸೂರ್ಯರಶ್ಮಿಯಾಗುತ್ತದೆ: ನಳನ ವಿಚಾರವಾಗಿ ವಿಸ್ತಾರದ ವ್ಯಾಖ್ಯಾನ ಬೇಡ, ದೇವತೆಗಳ ಈ ತೀರ್ಪು ಸಾಕು:

"ಒಂದು ನಿನ್ನಲಿ ಕುಟಿಲವಿಲ್ಲರ ।
ವಿಂದವದನೆಯರಿಂದ ಕೇಳಿದೆ ।
ವೆಂದು ಸಂತೈಸಿದರು ಭಯಗೊಂಡಿಹ ನೃಪಾಲಕನ ॥"

೫. ಆಗಾಗ ಒಂದು ವಿಶೇಷ ವಿದ್ಯಮಾನ ನಮ್ಮನ್ನು ವಿಸ್ಮಯಗೊಳಿಸುತ್ತದೆ. ಹೇಳಿಕೆ ಸುಲಭವಾಗಿ ತೋರಿದರೂ ಒಳಗಣ ತೀಕ್ಷ್ಣತೆ ಸಾಂದ್ರತೆ ಘನಸತ್ವ ಭಾರಿ ಧ್ವನ್ಯರ್ಥಗಳಿಂದ ಅದರ ಪ್ರಭಾವ ವೆಗ್ಗಳವಾಗಿ, ಅದು ನಮ್ಮ ಹೃದಯದಲ್ಲಿ ನಾಟಿ ನಿಲ್ಲುತ್ತದೆ; ಇಡೀ ಘಟನಾವಳಿಯ ಗಾಢಾನುಭವ ಕರಗತವಾಗುತ್ತದೆ ನಮಗೆ. ಮದನಧ್ವಂಸಿಯ ಮುಖದೆದುರು ಬಲು ನೊಂದಿರುವ ರತಿ ಎತ್ತುವ ಆಕ್ಷೇಪಣೆಯನ್ನು ತೆಗೆದುಕೊಳ್ಳಿ:

"ಕೊಲ್ಲಲುದ್ಯೋಗಿಸಲಪ್ಪುದೆ ರಸದಾಳಿ ।
ವಿಲ್ಲನಂತವರು ಗಳಿಹರೆ ।
ಒಲ್ಲದ ಹೆಣ್ಣು ಗಂಡುಗಳನೊಂದಾಗಿಸ ।
ಬಲ್ಲ ಭಾವಜ್ಞರ ತೋಱು ॥"

"ಪಾಪಕ್ಷಯಕೆಂದು ಗಂಗೆಯೊಳ್ಮಿಂದರೆ ।
ಪಾಪಿಯ ಮೊಸಳೆ ತಿಂದಂತೆ ।
ತಾಪಸ್ಥ ಸುರರಿಂಗೆ ಹಿತಗೈಯ ಬಂದ ಪ್ರಾ ।
ಣೋಪನ ಸುರುಹಿದೆ ನೀನು ॥"

'ತಾ ಬಾಳಲಾರೆ, ತನ್ನನ್ನೂ ಸಂಹರಿಸು' ಎಂಬ ಅವಳ ವಿಡಂಬನೋಕ್ತಿ ಅತೀವ ಪ್ರತಾಪಪೂರಿತವಾಗಿದೆ; ಅವಳ ವದನದಿಂದ ಬಿರುನುಡಿ ಉದುರುವುದಿಲ್ಲ, ಕಿಚ್ಚಿನ ಕಿಡಿ ಸಿಡಿಯುತ್ತವೆ:

" ಕೊಂಡವ ತೋಡಿಸಬೇಡ ಶುಷ್ಕವ ಸುಟ್ಟು ।
ಕೆಂಡವ ಮಾಡಿಸಬೇಡ ।
ಖಂಡೇಂದುಶೇಖರ ಕಣ್ಗಿಚ್ಚಿನಿಂದೆನ್ನ ।
ಗಂಡನನುರುಹಿದಂತುರುಹು ॥"

ರತಿಯ ರೂಪಾತಿಶಯದಿಂದ ಹುಚ್ಚಾಗಿರುವ ಶಂಬರ ತನ್ನ ದುರ್ಗತಿಯನ್ನು ತನ್ನ ತಳೋದರಿಗೆ ಹೀಗೆ ಬಣ್ಣಿಸುತ್ತಾನೆ:

" ಕೊಂದಳೆ ಪತಿಭಕ್ತಿಯೆಂಬ ಕೂರಸಿಯಿಂದೆ ।
ಕೊಂದಳೆ ಹೇಱೆಂದು ನುಡಿದ ॥"

ಸಮರಕ್ಕಿದಿರಾದ ಪ್ರದ್ಯುಮ್ನನನ್ನು ಕುರಿತು ಶಂಬರಾಸುರನ ಮೂದಲಿಕೆ:

" ಕಱೆ ಗೊರಲನ ಕಣ್ಣ ದಳ್ಳುರಿಯಲಿ ಬೆಂದ ।
ಕೊಱೆಗೊಳ್ಳಿ ನೀನು ನಿನಗೇಕೆ ಪಂತ ॥"

ರಾತ್ರಿ ಸ್ವಪ್ನದಲ್ಲಿ ಪ್ರಿಯನನ್ನು ಕಾಣುವ ಆತುರದಲ್ಲಿರುವ ಉಷೆಗೆ ಭಾಸ್ಕರನ ಮೇಲೆ ಕಡುಕೋಪ; ಗುಡುಗುತ್ತಾಳೆ ಇಂತು:

" ಅಸಗೆಟ್ಟವೊ ಪುರಿ ಹೆರೆಯೆಣ್ಣೆ ತೀದುದೊ ।
ಅಸಮಾಶ್ವಗಳು ಬಾಂದೊರೆಯ ।
ಕೆಸಱೊಳು ಬಿದ್ದೇಱಲಾಱದಾದುವೊ ಎಂದು ।
ಬಿಸಜಾಕ್ಷಿ ರವಿಯ ನೋಡಿದಳು ॥"

ಗೆಳತಿಯ ವಿರಹ ದುಃಖದೊಡನೆ ಭಾಗಿಯಾಗಿ ಚಿತ್ರಲೇಖೆ ಕನಿಕರದಿಂದ ಆಡುವ ಕಳಿಣವಾಕ್ಯ:

" ವರವೊ ಪಾರ್ವತಿ ಕೊಟ್ಟದು ಪ್ರಾಣ ಸಂಹರಣವೊ ನಿನಗೆ ॥"

ಕನಕದಾಸನ ಕಾವ್ಯವಿಲಾಸ ಹಗುರವಾಗಿ ಲಲಿತವಾಗಿ ತೋರುತ್ತದೆ ಹೊರಗಡೆಗೆ; ಅದಕ್ಕೆ ಅಷ್ಟಿಷ್ಟು ತೂಕದ ಒಳಗಡೆಯೂ ಅಲ್ಲಲ್ಲಿ ಉಂಟೆಂಬುದನ್ನು ಯೋಚಿಸಿ ತಿಳಿದುಕೊಳ್ಳಬೇಕು. ಅಷ್ಟೇ ಅಲ್ಲ. ಒಮ್ಮೊಮ್ಮೆಯಾದರೂ ಭಾವಾರ್ಥದ ಭಾರದಿಂದ ಘಟ್ಟಿಯಾದ ಗಂಭೀರ ಅಂತರಾಳವೂ ಅದಕ್ಕೆ ಉಂಟೆಂಬುದು ಕಣ್ಣಲ್ಲಿ ಕಣ್ಣಿಟ್ಟು ಪರಿಶೀಲಿಸಿದಾಗ ತಿಳಿದುಬರುತ್ತದೆ. ಬಿಗಿಯನ್ನೂ

ಶಕ್ತಿಯನ್ನೂ ಹಲವು ವೇಳೆ ಮುಟ್ಟಲಾಪ, ಮಹೋನ್ನತಿಯನ್ನೂ ಆಗಾಗ ಕ್ಷಣಹೊತ್ತು ಎಟುಕಿಸಿಕೊಳ್ಳಲಾಪ, ತನ್ನತನವನ್ನು ಚೆನ್ನಾಗಿ ಮೆರೆಯಲಾಪ, ಕವಿ ಕನಕದಾಸ. ರೋಷತಾಮ್ರಾಕ್ಷನಾಗಿರುವ ಬಾಣಾಸುರನಿಗೆ ನಾರದ ಎನ್ನುತ್ತಾನೆ:

"ಕೋಪವೆಂಬುದು ಪರಮಾತ್ಮಂಗೆ ದುರ್ಗಂಧ ।
ಲೇಪವ ಮಾಡಿದಂತಿಹುದು ।
ಶ್ರೀ ಪರಮೇಶನ ಸೆಱೆಯಾಳ್ದ ಶರಣಂಗೆ ।
ತಾಪತ್ರಯವೇಕೆ ನಿನಗೆ ॥"

ಕಡೆಯಲ್ಲಿ ಸಂಧಾನ ಏರ್ಪಡುತ್ತದೆ; ಉಷೆಯನ್ನು ಅನಿರುದ್ಧನಿಗೋಸ್ಕರ ಬೇಡುತ್ತಾನೆ ಶ್ರೀಕೃಷ್ಣ; ಬಾಣ ಕೊಡುವ ಉತ್ತರ ಅರ್ಥದಿಂದ ಗಿಡಿದು ತುಂಬಿದೆ:

"ತಪ್ಪನಿತಿಲ್ಲದುರ್ವಿಯ ನಿಮ್ಮಡಿಗೆ ಸ ।
ಮರ್ಪಿಸಿದನು ನಮ್ಮ ತಂದೆ ।
ಒಪ್ಪಿಡಿ ನಡುವಿನ ಮಗಳನು ಮೊಮ್ಮಗೆ ।
ಸುಪ್ರೀತಿಯಿಂದೀವುದರಿದೆ ॥"

ಅನಿರುದ್ಧನಿಗೆ ಉಷೆಯ ಪ್ರೇಮವೇ ಸಕಲ ಪುರುಷಾರ್ಥ:

"ಈ ವನಿತೆಯೊಳೊಂದಿ ಸುಖವಟ್ಟು ಮಡಿದಡೆ
ಜೀವನ್ಮುಕ್ತಿಯೆಂದವನು ।"

ಅದನ್ನು ಸಾಂಗವಾಗಿ ನಿಯಂತ್ರಿಸಿಕೊಟ್ಟ ಚಿತ್ರಲೇಖೆಯನ್ನು ಕಂಡು ಅವನಿಗೆ ಮಿತಿಯಿಲ್ಲದ ಗೌರವ:

"ಅತ್ತಿಗೆಯಹುದಕ್ಕನಹುದು ತಾಯಹುದಕ್ಕ ।
ಗುತ್ತಿಗೆಗಾತಿ ನೀನಹುದು !
ಪತ್ತಿಗೆ ಪರಮಾನುಕೂಲೆ ಕೇಳೆಂದು ಕೈ ।
ಯೆತ್ತಿ ಕೊಂಡಾಡಿದ ಕುಮರ ॥"

ನವದಂಪತಿಗಳು ತಮ್ಮೊಳಗೆ ಸಂಭಾಷಿಸುತ್ತಿರುವಾಗ, ತನ್ನ ಸಖಿ ಸಂರಕ್ಷಕಿಗೆ ಯಜ್ಞ ಸತ್ಕರ್ಮ ಮೊದಲಾದವುಗಳ ಫಲ ಏನನ್ನು ಕೊಟ್ಟರೂ ಸಾಲದೆಂದು ಉಷೆ ಮರುಗುತ್ತಾಳೆ; ಅನಿರುದ್ಧ ಅರ್ಧ ಹಾಸ್ಯ ಅರ್ಧ ಗಾಂಭೀರ್ಯ ಬೆರೆಸಿ ಹೇಳುತ್ತಾನೆ:

"ಬೇಕೆನೆ ಪೆತ್ತ ಮಕ್ಕಳ ಪೆಸರ್ಗುಡ ಚಿತ್ರಲೇಖೆ
ಯೆಂದನಿರುದ್ಧ ನುಡಿದ ।"

ನಿರಾಡಂಬರದ ಸಾಮಾನ್ಯ ಮೆಲ್ನುಡಿ ಇದು; ಆದರೆ ಅದರಿಂದ ವ್ಯಂಜಕವಾಗುವ ಭಾವ ಭಾವನಾ ಸಮೂಹ ಒಂದು ಸಣ್ಣ ಪ್ರಪಂಚವೇ ಆಗುತ್ತದೆ, ಅಲ್ಲವೆ? "ಬಂಧು" ಶಬ್ದದಿಂದ ರಮ್ಯಲೋಕವೊಂದನ್ನು ಸೃಜಿಸಬಲ್ಲ ಕನಕದಾಸ. ನಳ ತನಗೆ ಸಹಾಯನೀಡಿದ ಹಂಸೆಗೆ:

"ಸಲಹೆನ್ನಸುವ ಕರುಣದಲಿ ।
ಎನಗೆ ನೀನೇ ಪರಮ ಬಾಂಧವ ।
ಮನಕೆ ಹರುಷವ ಮಾಡು ।"

ಎನ್ನುತ್ತ ಉಪಚರಿಸಿ ಕಳಿಸುತ್ತಾನೆ ಅದನ್ನ; ಆಮೇಲೆ ಅದೇ ಹಂಸೆಗೆ ದಮಯಂತಿ ಉಸಿರುತ್ತಾಳೆ:

"ಪರಮ ಬಾಂಧವ ನೀನೆನಗೆ ಸ ।
ತ್ಕರಿಸು ವಿರಹದಿ ನೊಂದವಳ ।"

ಇದೇ ಸತ್ಕಾವ್ಯದಲ್ಲಿ ಭಾಷೆ ಬೀಸುವ ಮಾಯಾ ಜಾಲದ ವೈಭವ. ಅನ್ಯೋನ್ಯ ನಲ್ಮೆಗಾಗಿ ಹುಟ್ಟಿ ಬಂದಿರುವ ನಳ ದಮಯಂತಿಯರಿಗೆ ಈ ಹಾಲುಬಣ್ಣದ, ಆತ್ಮದ ಸಂಕೇತವಾದ, ರಾಜ ಮರಾಳನೇ ಕೂಡಿಸುವ ಕೊಂಡಿ, ನಿಸ್ವಾರ್ಥ ದುಡಿಮೆಯ ದೂತ, 'ಪರಮ ಬಂಧು'. ಯಕ್ಷ ಯಕ್ಷಿಯರ ನಡುವಣ 'ದೂತಮೇಘ'ಕ್ಕೂ ನಳ ದಮಯಂತಿಯರ ನಡುವಣ ರಾಜಹಂಸಕ್ಕೂ ಇರುವ ವ್ಯತ್ಯಾಸಬಾಹುಳ್ಯವನ್ನು ಬಗೆಯಿರಿ. ಅದೊಂದು ಮನುಷ್ಯನಿರ್ಮಿತ ಜಲಾಶಯ ವಾದರೆ ಇದು ದೇವನಿರ್ಮಿತಿಯ ಮಾನಸ ಸರೋವರ. ಹಂಸದ ಪ್ರಶಸ್ತಿಯನ್ನು ಹೇಳಿ ಮುಗಿಸಲಾದೀತೆ?

"ಸತ್ಯಲೋಕೇ ರಚಿತವಸತಯಃ ಸ್ವರ್ಧುನೀವೀಚಿಮಾಲಾ ।
ಖೇಲಲ್ಲೀಲಾಮರಾಳಾಃ ದ್ರುಹಿಣರಥಗತೇ ಸಾಧಕಾಃ ।"

"ಭಾನುರ್ಹಂಸ ಸ್ಸಹಸ್ರಾಂಶು ಸ್ತಪನಸ್ಸವಿತಾ ರವಿಃ ।"

"ಹಂಸಸ್ತು ಖಗ ಸೂರ್ಯಯೋಃ ನಿರ್ಲೋಭೇ ನೃಪತೌ
ವಿಷ್ಣಾವಂತರಾತ್ಮ ವಿಚೇಷ್ಯತೇ ।"

"ಮೇಘೋ ವಾರಿದ ಮುಸ್ತಯೋಃ" ಎಂದರೆ ಮುಗಿಯಿತು ಬಡಾಯಿ ಮೇಘದ ಹ್ರಸ್ವ ಕಥೆ! ಅದಿರಲಿ. ನಳ ದಮಯಂತಿಯರಿಗೆ ಆ ಶ್ವೇತಪಕ್ಷಿ ಸ್ನೇಹಿತನಾದರೆ, "ಕೆಂಗರಿಗಣ್ಣ ಮೋರೆಯ ಹರಕು ಗಡ್ಡದ ಕೆಂಚುಮಿಸೆಯ" "ಉಕ್ಕಿನ ತೇರಿನ" ಕಲಿಪುರುಷ ಶತ್ರು! ಧೂರ್ಜಟಿಯ ಮೇಲೆ ಧಾಳಿ ಎತ್ತಿರುವ ಕಾಮ ಮಧ್ಯೆ ಸಿಕ್ಕಿದ ಗಂಗೆಯಲ್ಲಿ ಸ್ನಾನಮಾಡುವುದಿಲ್ಲ: ಕಾರಣ?

"ಅತಿಕಾಂಕ್ಷೆಯಿಂ ಮಿಂದೊಡೀಶನಹೆನು ಭಾಗೀ ।
ರಥಿ ನಿನ್ನ ಹುಗಲಾಱಿ ತಾಯೆ ॥"

ಇವುಗಳಿಂದ ಸ್ಫುರಿಸುವ ಸಾಮರ್ಥ್ಯವನ್ನೂ ವಿಶಿಷ್ಟ ವರ್ಚಸ್ಸನ್ನೂ ಬಗೆಯಿರಿ:

"ಭೂಸತಿಯ ರೂಪಾಂತ ರೋಮಾಂಚನದಂತೆ
ಗಂಧಶಾಲೀಫಲದಂಕುರವಿಹುದು ।"

"ಕಣ್ಣಱಿಯದೊಡೇನ ಕರುಳ್ಬಲ್ಲಂತೆ ।
ಚಿಣ್ಣನ ತಾಯಿ ನೋಡಿದಳು ।"

"ಯಮುನ ದಾಡೆಯ ಕೀಲ್ವ ದಡಿಗ ದೈತ್ಯರ ಕಾಹು ।
ಮಮ ಕುಮಾರಿತಿಯ ಗೋಪುರಕೆ ।"

ಕವಿಯನ್ನು ಪರಿಹಾಸಪ್ರಿಯನೆಂದು ಕರೆಯಲಾಗದು; ಆದರೂ ಹಾಸ್ಯದ ಊದುಗುಳ್ಳೆಗಳು ಆಗಾಗ ಮೇಲಕ್ಕೇರಿ ವಿವಿಧ ವರ್ಣಗಳನ್ನು ತೋರಿ ಒಡೆದು ಮಾಯವಾಗುತ್ತವೆ. ಕಂಠಪೂರ್ತಿ ಉಂಡ ಬುಧರು:

"ಪೊಸ ವಿಘ್ನರಾಜನ ಬಳಗವೆಂಬಂತೇಱಿ ।
ವಶವಲ್ಲದೆದ್ದರುತ್ಸವದಿ ।"

ಅನಿರುದ್ಧನ ಜನನವನ್ನು ಕೇಳಿ

"ತಳಿರುಗಾಸೆಯ ಧೋತ್ರ ಬಹಿರ್ವಾಸ ಮೂಗಿನಿಂ ।
ದಿಱಿದ ನಾಮುಗಳ ವೈಷ್ಣವರು ।
ಗಳಿಲನೆ ನಿಳಯದಿಂ ಬಂದರು ।"

ಕವಿ ತಾನೇ ದೂಷಣೆ ಕಟಕಿ ಅಪಹಾಸ್ಯಾದಿ ಚುಚ್ಚುಮಾತನ್ನು ನುಡಿಯುವ ಸಂಭವ ವಿರಳ; ಅವನ ನಾರದಪಾತ್ರವಾದರೋ ಅವನ್ನು ಸಾಕಷ್ಟು ತಂದು ಕೊಡುತ್ತದೆ ನಮಗೆ. ರತಿ ಪ್ರದ್ಯುಮ್ನರ ಗೃಹಪ್ರವೇಶಕ್ಕೆ ದಿನ ನೋಡಿ ಹೇಳಿ ರೆಂದು ಕೃಷ್ಣ ಜ್ಯೋತಿಷ್ಕರನ್ನು ಕೇಳಬಗೆಯುತ್ತಾನೆ; ಅಡ್ಡಬರುತ್ತಾನೆ ನಾರದ:

"ನಾಟಕವಲ್ಲವೆ ನರರಂತೆ ನಕ್ಷತ್ರ ।
ಪಾತಕರ ಪ್ರಶ್ನೆಗೇಳುವುಹು ।
ಕೀಟಕರೇನ ಬಲ್ಲರು ಕೃಷ್ಣ ನಿನಗೆ ಚು ।
ನ್ನಾಟ ಬೇಡೆಂದ ನಾರದನು ॥"

ಶಂಬರನ ಹತ್ತಿರ ಅವನು ನುಡಿಯುವ ನುಡಿಗಳಿಗೆ ಎರಡರ್ಥ; ಬಾಣಾಸುರನ ಪ್ರಕರಣದಲ್ಲಂತೂ ಅವನ ಹದಿರುನುಡಿಗೆ ಮಿತಿಯೇ ಇಲ್ಲ. ದ್ವಾರಪಾಲಕನಾದ ಶಂಭುವೇ ಮೊದಲು ಹೀಯಾಳಿಕೆಗೆ ಗುರಿಯಾಗುತ್ತಾನೆ:

" ಕಂದಾಯಪ್ರಾಪ್ತಿಗೆ ಖಳನಿತ್ತ ಜೀವಿತ ।
ಸಂದುದೆ ನಿಮಗೆಂದ ನಗುತ ।"

" ದುಷ್ಟ ರಕ್ಕಸನ ಬಾಗಿಲ ಕಾದಲ್ಲದೆ ।
ಹೊಟ್ಟೆಯ ಹಸಿವು ತಂಪಿಸದೆ ।"

" ಅಪ್ಪಣೆಗುಡು ಬಾಗಿಲವರ ಕೇಳದೆ ಪೋಗ ।
ಬರ್ಪುದೆ ಬಡವರು ನಾವು ।"

ಬಾಣಾಸುರನನ್ನು ಸಂಧಿಸಿ

" ಭಾಳಾಕ್ಷನ ಸದ್ಭಕ್ತ ನಂದನೆಯತ್ತ ।
ಸೂಳೆಯಾಗಿರ್ಪುದು ಸುಖವೇ ।"

ಎಂಬ ವಚನಕಠಾರಿಯಿಂದ ಇರಿದು, ಗಾಯದ ಮೇಲೆ ಈ ನಿರಪರಾಧ ನುಡಿಯ ಸುಣ್ಣವನ್ನು ಸವರುತ್ತಾನೆ:

" ಹೊಗಟಲದೇಕೆ ನಿಂದಿಸಲದೇಕೆ ನಿಮಗೆ ನಾ ।
ಜಗಳವನಿಕ್ಕ ಬಂದವನೆ ।
ಮಗಳನು ಕೆಡಿಸಿದನಿಗೆ ರಹವಱಿಯದೆ ।
ದೃಗುಯುಗದೊಳು ಕಿಡಿಯೇಕೆ ।"

"ನಳಚರಿತ್ರೆ"ಯ ಕಾರ್ಕೋಟಕ ಪ್ರಸಂಗದಲ್ಲೂ ಬಾಹುಕ ಕನವರಿಸಿಕೊಂಡು ಎಚ್ಚೆತ್ತಮೇಲೆ ವಾರ್ಷ್ಣೇಯ ಅವನನ್ನು ಆಮೋದದಿಂದ ಹಂಗಿಸುವ ಪ್ರಸಂಗ ದಲ್ಲೂ ಹಾಸ್ಯ ಕುಣಿದಾಡುತ್ತದೆ. ಹೆಂಗಸಿನ ಸೀರೆಯ ತುಂಡನ್ನು ನಳ ಉಟ್ಟು ಸುಳಿಯುವುದು, ಕುರೂಪಿಯ ಒಗೆಗೆ ಅಯೋಧ್ಯೆಯಲ್ಲೂ ಕುಂಡಿನನಗರದಲ್ಲೂ ಏಳುವ ಕುತೂಹಲದ ಸಡಗರ, ಐದು ಮಂದಿ ನಳರ ಪ್ರವೇಶ, ಪರಮ ಪತಿವ್ರತೆಗೆ ಎರಡನೇ ಮದುವೆಯೆಂಬ ಕಡ್ಡ ಸಮಾಚಾರ—ಇಂಥ ಪರಿಸ್ಥಿತಿಗಳಲ್ಲಿ ವಿಕಟವಾದೊಂದು 'ಹಾಸ್ಯ' ಕುಳಿತಿದೆ; ಅದು ಜೀವನದ ತಟ್ಟತಳದಲ್ಲಿ ಮಿಡಿಯುತ್ತಿರುವ ಗುಪ್ತ ಕಟಕಿಯ 'ಸಹೋದರ'; ಅದನ್ನು ಅನುಭವಿಸಿ 'ಆನಂದ' ಹೊಂದಬೇಕಾದರೆ ಪರಿಪಕ್ವವಾದ ಅಭಿರುಚಿ ಅಗತ್ಯ.

ನೇರ ಕಥನದ ಗಾಡಿಗಾಗಿ "ನಳಚರಿತ್ರೆ"ಯನ್ನು ಎಷ್ಟು ಹೊಗಳಿದರೂ ಕಡಮೆಯೇ. ಸರಳ ಹೃದಯನಾದ್ದರಿಂದ ಕನಕದಾಸನಿಗೆ ಕಥನದ ಮೇಲೆ ಮನಸ್ಸು ನೆಟ್ಟಿತ್ತು; ಚಿತ್ತವನ್ನು ಚಂಚಲವಾಗಗೊಡಲಿಲ್ಲ; ಹಿಡಿದ ದಾರಿಯನ್ನು ಸ್ಥಿರಸಂಕಲ್ಪದಿಂದ ದುಡುಕದೆ ನಿಲ್ಲದೆ ನಡೆದು ಗುರಿಯನ್ನು ತಲಪಿ ಕೃತಕೃತ್ಯ ನಾದ. ಲಕ್ಷ್ಮೀಶನ "ಚಂದ್ರಹಾಸ ಚರಿತ್ರೆ" ಹೋಲಿಕೆಗಾಗಿ ತವಕಿಸಿ ಮುಂದೆ ಬರುತ್ತದೆ. ಎರಡೂ ಒಳ್ಳೆಯ ಸಮರ್ಪಕ ವಿರಚನೆಗಳೇ; ಆದರೆ ಒಂದು

ಖಂಡ ಉಪಾಖ್ಯಾನ, ಇನ್ನೊಂದು ಅಖಂಡಕಾವ್ಯ. ಲಕ್ಷ್ಮೀಶನಿಗಿಂತಲೂ ಕನಕದಾಸನಿಗೆ ಹೆಚ್ಚು ತ್ರಾಸವಿತ್ತು; ಕಥನದಿಂದಾಚೆಗೆ ಎಳೆಯುವ ಪ್ರಲೋಭನೆಗಳು ಹೆಚ್ಚಾಗಿದ್ದುವು ಅವನಿಗೆ. ಅವೊಂದಕ್ಕೂ ತಲೆಬಾಗದೆ ನಿಂದದ್ದರಿಂದ ಕಥನಕೃತಿ ಮುದ್ದಾಯ್ತು. ಕವಿ ಗೆದ್ದ. ಕಾವ್ಯ ಯಾವುದೇ ಆಗಲಿ ಅದು ಮೈತುಂಬಿಕೊಂಡಿರಬೇಕು, ಬೊಜ್ಜುಗೂಡಿರಬಾರದು; ಅದರ ಯಾವೊಂದು ಅಂಗವೂ ಅತಿಯಾಗಿ ಪ್ರಬಲಿಸಬಾರದು, ತನ್ನ ಪಾಲಿನ ಕರ್ತವ್ಯವನ್ನು ಲೋಪವಿಲ್ಲದಂತೆ ನೆರವೇರಿಸಬೇಕು; ಮುಖ್ಯಾಂಶದ ಮೇಲೆ ಗಮನವೂ ಆಸಕ್ತಿಯೂ ಕೇಂದ್ರೀಕೃತವಾಗಿರಬೇಕು; ಗೌಣಾಂಶಗಳು ನಿಷ್ಠುರ ಮಿತಿಯನ್ನು ಅತಿಕ್ರಮಿಸಬಾರದು. ಈ ಸರ್ವವಿದಿತವಾದ ಸೂತ್ರಗಳು ಸಕಲ ಸಾಹಿತ್ಯಕ್ಕೂ ಅನ್ವಯಿಸುತ್ತವೆ; ನಾಟಕ ಕಥನ ಕಾವ್ಯಗಳ ಮೇಲೆ ಅವುಗಳ ವೀಕ್ಷಣೆಯೂ ಅಧಿಕಾರವೂ ಕಂಡಹಾಗೆಯೇ ಹೆಚ್ಚು. "ನಳಚರಿತ್ರೆ" ಸಂಕ್ಷಿಪ್ತವೂ ಅಲ್ಲ, ಸುದೀರ್ಘವೂ ಅಲ್ಲ; ಹಾಳತವಾಗಿದೆ. ಅದರ ೪೮೧ ಷಟ್ಪದಿಗಳನ್ನು ಕಠೋರದೃಷ್ಟಿಯಿಂದ ಪರೀಕ್ಷಿಸಿದರೆ, ಪ್ರಾಯಶಃ ೧೬ ಅಥವಾ ೧೭ ಅನಾವಶ್ಯಕ ಎನ್ನಿಸಿಯಾವು. ಸ್ತ್ರೀಯರನ್ನು ಟೀಕಿಸುವ ಮೂರನೇ ಸಂಧಿಯ ೨೨ ರಿಂದ ೨೬ ರ ವರೆಗಿನ ಪದ್ಯಗಳಲ್ಲಿ ೨೨ ಒಂದೇ ಸಾಕಾಗಿತ್ತು. ದಮಯಂತಿಯ ತಾಯಿತಂದೆಗಳ ವಿಷಾದ ಪ್ರಕರಣದಲ್ಲಿ ಎರಡು ಪದ್ಯ ಅಧಿಕ. ಒಂಬತ್ತನೇ ಸಂಧಿಯ ಯುದ್ಧಭಾಗವನ್ನು ಕವಿ ತಂದಿಡದೇ ಹೋಗಿದ್ದರೆ ಒಳಿತಾಗುತ್ತಿತ್ತು. ವ್ಯಾಸಭಾರತದಲ್ಲಿ ನಳ ಪುಷ್ಕರರಿಗೆ ಕೈ ಕೈ ಕದನವಾಗುವುದು ರಣರಂಗದಲ್ಲಲ್ಲ, ದ್ಯೂತದ ಹಾಸಿನ ಮೇಲೆ. ಅದ್ಭುತ ಕಥೆಗೂ ರಕ್ತಪಾತಕ್ಕೂ ಸಮಂಜಸತ್ವವಿಲ್ಲ. ಅಷ್ಟಾದಶ ವರ್ಣನೆಯ ನಿರ್ಬಂಧದಿಂದ ಕನಕದಾಸ ಪಾರಾಗದೇ ಹೋದದ್ದು ಆಶ್ಚರ್ಯ; ಸೂಳೆಗೇರಿಯನ್ನು ಬಿಟ್ಟಂತೆ ಯುದ್ಧವನ್ನೂ ಬಿಡದೇ ಹೋದದ್ದು ಹೆಚ್ಚಿನ ಆಶ್ಚರ್ಯ. ಹೋಗಲಿ ; ಯುದ್ಧವನ್ನು ತಂದಿಟ್ಟರೂ ಹದಿನೈದು ಷಟ್ಪದಿ ಪೂರ್ತ ಅದನ್ನು ಲಂಬಿಸಬೇಕಾದ್ದಿರಲಿಲ್ಲ. ಏತಕ್ಕೆಂದರೆ, ಎಂಟನೇ ಸಂಧಿಯ ಅಂತ್ಯದಲ್ಲಿ ಆಗಲೇ ನಾಯಕ ನಾಯಕಿಯರ ಸೌಭಾಗ್ಯ ಹಿಂತಿರುಗಿ ತಲೆದೋರಿದೆ; ನಿಷಧರಾಜ್ಯ ಅವರ ಕೈವಶವಾಗುವುದು ಶೀಘ್ರದಲ್ಲಿಯೇ ಜರುಗುವ ನಿಸ್ಸಂಶಯ ವ್ಯಾಪಾರ. ಆದಕ್ಕೋಸ್ಕರ ರೌದ್ರ ಘಟನೆಗಳ ಅಬ್ಬರವನ್ನು ಎಬ್ಬಿಸುವುದೇತಕ್ಕೆ, ಕಥೆಯ ಶ್ರುತಿಯನ್ನು ಕೆಡಿಸುವುದೇತಕ್ಕೆ?

ಏಳೆಂಟು ಘಟನಾವಳಿಗಳಿಂದ ಸುಪುಷ್ಟವಾದ ಕಥಾವಸ್ತುವಿನಲ್ಲಿ ನಲವತ್ತೈವತ್ತು ಬಿಡಿ ವ್ಯವಹಾರಗಳು ಬಂದು ಸೇರಲೇಬೇಕು. ಅವುಗಳ ಜಾಗವನ್ನು ನಿಗದಿ ಮಾಡುವಾಗ ಕವಿ ವಾಸ್ತುಶಿಲ್ಪಿಯ ಜಾಗರೂಕತೆಯನ್ನೂ, ವಿವೇಚನಾ ಶಕ್ತಿಯನ್ನೂ, ನಿಷ್ಪಕ್ಷಪಾತವನ್ನೂ ಪಡೆದಿರಬೇಕು. ಕನಕದಾಸನ ಸಂವಿಧಾನ ಜಾಣ್ಮೆ ಮೆಚ್ಚತಕ್ಕದ್ದಾಗಿದೆ. ದಮಯಂತಿಯ ಕೀರ್ತಿ ದೇವಲೋಕಕ್ಕೆ

ಹಬ್ಬಿದಾಗ ಕಾರ್ಯಚಟುವಟಿಕೆಗೆ ಅದು ಪ್ರೇರಿಸುವುದು ಮಹೇಂದ್ರನೊಬ್ಬ ನನ್ನೇ ಎಂದು ನಾವು ಭಾವಿಸಿಕೊಳ್ಳುತ್ತೇವೆ ಮೂರನೇ ಸಂಧಿಯ ೧೧ರಿಂದ ೧೪ ಷಟ್ಪದಿ ಪೂರ್ತ; ೧೫ರಲ್ಲಿ "ಯಮ ವರುಣ ವಾಯುವ್ಯರು ಸಹಿತ ಹೊರವಟ್ಟನು" ಎಂದು ಗೊತ್ತಾಗುತ್ತದೆ. ಅನಂತರ ೨೦ ರಲ್ಲಿ "ಈತ ಪಿತೃಪತಿ ಯಮರಪತಿ ತಾನೀತ ವರುಣನು ವಾಯುವೀತನು" ಎಂಬ ಪರಸ್ಪರ ಪರಿಚಯ ಭಾಷಣದಲ್ಲಿ ಮಾತ್ರ ಆ ಮೂವರ ನಾಮಾಂಕಿತ ಕೇಳಿಬರುತ್ತದೆ, ಮಿಕ್ಕೆಲ್ಲ ಕಡೆಯಲ್ಲೂ ಸುರಪತಿಯೇ ಮಾರ್ಗದರ್ಶಿ, ಕಾರ್ಯಕರ್ತ, ಮಾತುಗಾರ, ನಾಯಕ. ಅದು ನ್ಯಾಯವೇ? "ತಸ್ಮಾದ್ ವಾ ಇನ್ದ್ರೋಽತಿತರಾಮಿವಾನ್ಯಾನ್ ದೇವಾನ್" ಎಂದು ಸಾರಿಲ್ಲವೆ "ಕೇನೋಪನಿಷತ್ತು"? ವ್ಯಾಸಭಾರತದಲ್ಲಿ ದೇವತೆಗಳಿಂದ ಪ್ರತ್ಯೇಕ ಪ್ರತ್ಯೇಕವಾಗಿ ಪುಷ್ಕಳ ವರದಾನ ಸಲ್ಲುತ್ತದೆ ನಳನಿಗೆ; ಅದಾವುದಕ್ಕೂ ಆಸ್ಪದವಿತ್ತಿಲ್ಲ ಮಿತತತ್ವದ ನಿಷ್ಠದಾಸ ಕನಕದಾಸ. ಸ್ವಯಂವರದ ಭಾಗಗಳನ್ನು ನಿಷ್ಕರ್ಶಿಸಿರುವ ರಚನಾವಿಧಾನವನ್ನು ತೆಗೆದುಕೊಳ್ಳಿ ಲೋಕಪಾಲಕ ಭೂಪಾಲಕರ ಆಗಮನಕ್ಕೆ ೨ ಪದ್ಯ, ಅವರಿಗಾಗುವ ಸ್ವಾಗತಕ್ಕೆ ೨, ದಮಯಂತಿಯ ಶೃಂಗಾರಕ್ಕೆ ೨, ಮಂಟಪಕ್ಕೆ ಅವಳು ಬರುವುದಕ್ಕೆ ೩, ಅವಳಿಂದ ನೆರವಿಯ ಅವಲೋಕನಕ್ಕೆ ೪, ಅಂತಃಪುರಕ್ಕೆ ಹಿಂದಿರುಗಿ ದೇವಿ ಭಾರತಿಯ ಸಲಹೆ ಪಡೆಯುವುದಕ್ಕೆ ೮, ಮಂಟಪಕ್ಕೆ ಅವಳು ಪುನರಾಗಮನಗೈದು ನಳನನ್ನು ವರಿಸುವುದಕ್ಕೆ ೧೯, ಪಾಣಿಗ್ರಹಣ ಮಹೋತ್ಸವಕ್ಕೆ ೨ ಒಟ್ಟು ೨೧ ಷಟ್ಪದಿಗಳಲ್ಲಿ ನಾನಾ ವಿಚಾರಗರ್ಭಿತವಾದ ಮಂಗಳ ಪರಿಚ್ಛೇದವನ್ನು ಅಳವಡಿಸಿ ಜಯಶೀಲನಾಗಿದ್ದಾನೆ ಕನಕದಾಸ. ಕಾರ್ಕೋಟಕನ ಪ್ರಸಂಗಕ್ಕೆ ಕೊಟ್ಟಿರುವ ೧೪ ಪದ್ಯಗಳು ಸ್ವಲ್ಪ ಹೆಚ್ಚೆಂದು ತೋರಬಹುದು; ಆದರೆ ಅವುಗಳಲ್ಲಿ ಯಾವುದನ್ನು ಕೈಬಿಡುವುದೋ ಗೊತ್ತಾಗುವುದಿಲ್ಲ. ಸರಿಸುಮಾರಾಗಿ ಪ್ರತಿಯೊಂದು ಘಟನಾವಳಿಗೂ ಅದಕ್ಕೆ ಅನುರೂಪವಾದಷ್ಟು ಸ್ಥಳವನ್ನು ನಿರ್ವಂಚನೆಯಿಂದ ಮಮತೆ ತಾತ್ಸಾರಗಳಿಗೆ ಒಳಗಾಗದೆ ಜೋಡಿಸಿಬಿಟ್ಟಿದ್ದಾನೆ. ಒಂದು ಮಾತು. ಕಾವ್ಯಶರೀರದ ಅಂಗಾಂಗಗಳನ್ನು ಪರಿಕಿಸುವಾಗ ಉದ್ದಳತೆಯ ಲೆಕ್ಕಾಚಾರ ಅಗತ್ಯವಾಗಿ ಬೇಕು ರಸಿಕವೃಂದಕ್ಕೆ; ಆದರೆ ಗಣಿತದ ಗುಲಾಮಗಿರಿ ಬೇಡ.

ಕಥನಕ್ಕೆ ವೈರಿಯಾಗಬಲ್ಲ ವಿಚಾರ ಎರಡು ಮೂರು ಇವೆ. ಮೊದಲನೆಯದು, ಪಾತ್ರಗಳಲ್ಲಿ ಉಕ್ಕಿಬರುವ ಚಿತ್ತವೃತ್ತಿಗಳ ತಪಶೀಲು. ಆ ಕೆಲಸದಲ್ಲಿ ತಲ್ಲೀನನಾಗಿ ಯುಕ್ತಾಯುಕ್ತತೆಯನ್ನು ಮರೆತುಬಿಡುವುದು ಸಂಭವನೀಯ. ನಳ ದಮಯಂತಿಯರ ಪ್ರೇಮದ ವಿವರಣೆಗೆ ಕನಕದಾಸ ಒಂದೋ ಎರಡೋ ಷಟ್ಪದಿಗಳನ್ನು ನಿವೇದಿಸಿ, ಮಿಕ್ಕವನ್ನು ಕಾರ್ಯಾವಳಿಗೆ ತೆಗೆದಿಟ್ಟಿದ್ದಾನೆ. ನಳನ ಶೋಕ, ದಮಯಂತಿಯ ತಾಪಗಳ ವಿವರಣೆಗೂ ಅಂತೆಯೇ. ಎಂಥ ಸಂಯಮಶೀಲ ಈ ಕವಿ! ಸತಿ ಸ್ವಯಂವರದ ವಾರ್ತೆಗನುಸಾರವಾಗಿ ತ್ವರೆಯಿಂದ ಕುಂಡಿನ

ಪುರಕ್ಕೆ ಧಾಪಿಟ್ಟ ಋತುಪರ್ಣನಿಗೆ ಅಲ್ಲಿ ಲಭಿಸಿದ ನಿರಾಶೆ, ಆಯಾಸ, ಆಗ್ರಹಗಳ ಮಿಶ್ರ ರಾಗಾವೇಶ ಸಾಧಾರಣವೆ? ಕವಿ ಒಂದೇ ಪದ್ಯದಲ್ಲಿ ಅದನ್ನು ಸೂಚಿಸಿ ಮುಂದಕ್ಕೆ ಹೆಜ್ಜೆಯಿಡುತ್ತಾನೆ:

"ಖಿನ್ನನಾದನು ಚಿತ್ತದಲಿ ಋತು ।
ಪರ್ಣ ಭೂಸುರನೆಂದ ಮಾತಿನ ।
ಬಿನ್ನಣಕೆ ಮರುಳಾಗಿ ಬಂದೆನು ಮೂಢನಾದೆನಲಾ ।
ಭಿನ್ನವಿಲ್ಲದೆ ಕೊಂಡ ನಾಚಿಕೆ ।
ಗಿನ್ನು ಹದನೇನೆನುತ ಗುಣಸಂ ।
ಪನ್ನ ಮರುಗಿದ ತನ್ನ ಮನದ ದುರಂತ ಚಿಂತೆಯಲಿ ॥"

ಏತಕ್ಕೆಂದರೆ, ದಮಯಂತಿ ನಳರ ಭೇಟಿ ಕಾದಿದೆ, ಅದಕ್ಕಾಗಿ ನಾವೂ ಕಾದಿದ್ದೇವೆ; ಈ ಪ್ರಸ್ತಾವದಲ್ಲಿ ಋತುಪರ್ಣನೂ ಅಮುಖ್ಯ ಪಾತ್ರಗಳಲ್ಲಿ ಒಬ್ಬ. ಕವಿಯ ಕಾಲಿಗೆ ಬೇಡಿ ಗುಂಡನ್ನು ತೂಗುಹಾಕುವ ಎರಡನೇ ವಿಚಾರ 'ವರ್ಣನೆ', ಪೂರ್ವ ಕವಿಗಳನ್ನು ಮರುಳುಮಾಡಿರುವ 'ವರ್ಣನೆ'. ವರ್ಣನೆಯ ಚಟವನ್ನು ಹೆಚ್ಚುಕಡಮೆ ಪೂರ್ತಿಯಾಗಿ ಹೊರದೂಡಿದ್ದಾನೆ ಕನಕದಾಸ, "ನಳಚರಿತ್ರೆ" ಯಲ್ಲಿ. ನಾಯಕಿಯ ಅನುಪಮ ಲಾವಣ್ಯದ ಪ್ರಶಂಸೆಗೆ ಒಂದು ಕಡೆ ಮೂರು, ಇನ್ನೊಂದು ಕಡೆ ಒಂದು ಪದ್ಯ, ಅಷ್ಟೆ.

"ಸುಂದರಿಗೆ ಮಿಕ್ಕಿನ ಬಣಗು ಸತಿಯರು ಸರಿಯೆ ಲೋಕದೊಳು"

ಎಂದಮೇಲೆ ಮತ್ತಾವ ಗಳಹಕ್ಕೆ ಆವಶ್ಯಕತೆ ಇದೆ? ಬೇಟೆಗೆ ಕೇವಲ ಎರಡು ಪದ್ಯ; ಹಂಸದೌತ್ಯಕ್ಕೆ ಹೋಗುವ ಆತುರವಿದೆ ಕವಿಗೆ. ಕಾಡ್ಗಿಚ್ಚಿನ ಚಿತ್ರ ೨-೩ ಷಟ್ಪದಿಯಲ್ಲಿ ಪೂರೈಸುತ್ತದೆ: ಏತಕ್ಕೆಂದರೆ, ಆ ಪ್ರಸ್ತಾವದಲ್ಲಿ ಪ್ರಧಾನ ವಿಷಯ ಕಾಡ್ಗಿಚ್ಚಲ್ಲ, ಕಾರ್ಕೋಟಕನಿಂದ ನಳನಿಗಾಗುವ ಅನುಗ್ರಹ.

ಬರಿ ಕಥನಕಾರನನ್ನೇ ಅಲ್ಲ, ನಾಟಕ ನಿರ್ಮಾಪಕ, ಗೀತಲೇಖಕ, ಮಹಾ ಕಾವ್ಯಕರ್ತೃ ಎಲ್ಲರನ್ನೂ ಬಡಿದು ಕೆಡವಿ ಧೂಳಂಟಿಸುವ ಸಾಹಿತ್ಯಾಂಗ ಒಂದಿದೆ: ಶಬ್ದ. ಎಲ್ಲಿ ಅರ್ಥಕ್ಕೆ ಪ್ರಾಮುಖ್ಯತೆ ಇದೆಯೋ ಅಲ್ಲಿ ರಸಾಸ್ವಾದ ಸಮರ್ಪಕ, ತೃಪ್ತಿಕರ, ಲಾಭದಾಯಕ; ಎಲ್ಲಿ ಶಬ್ದವು ಪ್ರಥಮಸ್ಥಾನವನ್ನು ಹಿಡಿದುಕೊಳ್ಳು ತ್ತದೋ ಅಲ್ಲಿ ರಸಭಂಗ, ಅತೃಪ್ತಿ, ದುಗುಡ. ಹಿಂದಣ ಕನ್ನಡ ಕವಿಗಳಾರೂ ಪ್ರಾಸ, ಅನುಪ್ರಾಸ, ಯಮಕಗಳನ್ನು ಪರಿತ್ಯಜಿಸುವಂತಿರಲಿಲ್ಲ; ಭಾಮಿನಿ ಷಟ್ಪದಿ ಸಾಂಗತ್ಯಗಳಲ್ಲಂತೂ ಅವುಗಳಿಗೆ ಮನೆಯ ಯಜಮಾನನಂತೆ ಆಳುವ ಹೆಬ್ಬಯಕೆ. ಅವನ್ನು ಹದ್ದಿನಲ್ಲಿಟ್ಟು 'ಭಾವಾರ್ಥವೇ ಯಜಮಾನ, ಅವು ಪರಿ ಚಾರಿಕೆ ಮಾಡಬೇಕೇ ವಿನಾ ಪಾರುಪತ್ಯಕ್ಕೆ ಆಟಿಸಬಾರದು' ಎಂಬ ವಿಧಿಯನ್ನು ಪಾಲಿಸುವುದು ಕರಕಷ್ಟ. ಒಟ್ಟಿನಲ್ಲಿ ಕನಕದಾಸ ತನ್ನ ಕಾವ್ಯಗಳಲ್ಲಿ ಪದಗಳ

ಸಪ್ಪಳ ಎಲ್ಲೆಲ್ಲಿಯೂ ರಾದ್ಧಾಂತವಾಗದಂತೆ ನೋಡಿಕೊಂಡಿದ್ದಾನೆ. ಅವನ ಕೀರ್ತನೆಗಳ ವಿಷಯ ಬೇರೆ. ಗಾಯನಕ್ಕೆ ಅವು ಹುಟ್ಟಿಬಂದುದರಿಂದ ಶಬ್ದದ ಲಾಸ್ಯತಾಂಡವಗಳನ್ನು ಹೇಗೆ ನಿಷೇಧಿಸಿಯಾವು?

"ತಾಳಲಲ್ಲಲ್ಲಲ್ಲಲ್ಯೋ ವ್ಯಸುತ್ತ ಳಲ್ಲಲ್ಲಲ್ಲಲ್ಯೋ।"

ಎಂಬ ಪಲ್ಲವಿ ಕೀರ್ತನೆಗೆ ಸಲ್ಲುತ್ತದೆ.

"ರಣರಂಗಧೀರಂ ಗುಣಗಂಭೀರಂ।
ದಾನವ ದೈತ್ಯಾರಣ್ಯಕುಠಾರಂ।";

"ಸೈಯವ್ವ ಇದು ಸೈಯೆ ಗೋಪಿ।
ಸೈಯವ್ವ ಇದು ಸೈಯೆ।";

"ಎಲ್ಲಾರು ಮಾಡುವುದು ಹೊಟ್ಟೆಗಾಗಿ
ಗೇಣು ಬಟ್ಟೆಗಾಗಿ ತುತ್ತು ಹಿಟ್ಟಿಗಾಗಿ।";

"ಕಂಡೆ ನಾ ತಂಡತಂಡದ ಹಿಂಡು ಹಿಂಡು ದೈವ ಪ್ರಪಂಡ ರಿಪು।
ಗಂಡ ಉದ್ದಂಡ ನರಸಿಂಹನ ಕಂಡೆನಯ್ಯ।"

ಇವೂ ಬಹುಶಃ ಸಲ್ಲುತ್ತವೆ. ಅಥವಾ

"ಘುಡುಘುಡಿಸಿ ಕಂಬದಲಿ ಧಡಧಡ ಸಿಡಿಲು ಸಿಡಿಲೆಯೆ।
ಕಿಡಿಕಿಡಿಸೆ ನುಡಿಯಡಗಲೊಡನೆ ಮುಡಿವಿಡಿದು।
ಘುಡಘುಡನೆ ನಡುನಡುಗೆ ಘುಡುಘುಡಿಸಿ ಸಭೆ ಬೆದರೆ।
ಹಿಡಿಹಿಡಿದು ಹಿರಣ್ಯಕನ ತೊಡೆಯೊಳಿಡೆ ಕೆಡಹಿದನ॥"

ಎಂದು 'ಡ'ಕಾರದ ಸುರಿಮಳೆಯನ್ನು ಕರೆಯಬಹುದು. ಕಷ್ಟನಷ್ಟವೆಲ್ಲವನ್ನೂ ಮುಚ್ಚಿಬಿಡುವುದಕ್ಕೆ ಅನುವಾಗುತ್ತದೆ ಸಂಗೀತ.

ಕಾವ್ಯಗಳಲ್ಲಿ ಅದೇ ರೀತಿ ಮೇರೆ ಮೀರಿ ಹೋಗುವುದಿಲ್ಲ ಕನಕದಾಸ. ಹುಡುಕಿ ಹುಡುಕಿ ತೆಗೆಯಬೇಕು ಆಭಾಸವೆನ್ನಿಸುವಂಥ ಪದಗುಚ್ಛಗಳನ್ನ.

"ಹರಿಶರಣರಚ್ಚು ಬುಧಜನರಿಗೆ ಪೆಚ್ಚು।
ದುರಿತವನಕೆ ಕಾಳ್ಕಿಚ್ಚು।
ವಿರಹಿಗಳಿಗೆ ಪುಚ್ಚು ವೀರರ್ಗೆ ನುಚ್ಚು ಕೇ।
ಳ್ವರಿಗಿದು ತನಿಬೆಲ್ಲದಚ್ಚು॥"

"ಓಪನೆ ಸಕಲ ಕಲಾಪನೆ ಸತ್ಕುಲ।
ದೀಪನೆ ಲಲಿತ ಪುಂಡ್ರೇಕ್ಷು।
ಚಾಪನೆ ಮೋಹನರೂಪನೆ ನಿನ್ನ ಬಿ।
ಟ್ಟೀಪರಿಯಲಿ ಬಾಳ್ವೆ ಜೀಯ॥"

"ನೀಲೋತ್ಪಲ ಗಾಡಿ ವಿರಹಿಗಳೆದೆಗೇಡಿ ।
ಜ್ವಾಲಾಂಬಕ ಪುತ್ರ ಶತ್ರು ।
ಹಾಲಾಹಲ ಬಂಧು ತ್ರಿದಶಾಮೃತ ಸಿಂಧು ।
ಲೋಲಾಕ್ಷಿ ನೋಡ ಪೂರ್ಣೇಂದು ॥"

"ಗಂಧ ಸುಗಂಧ ಗಂಧಿಯು ಮೊಗ ನೋಡಲು ।
ಗಂಧಕುಂಕುಮ ರಸಭರಿತ ।
ಗಂಧವ ಗಂಧೋದಕದಿಂದೆ ಹದಮಾಡಿ ।
ಗಂಧವಟ್ಟಲನಿರಿಸಿದಳು ॥"

ಇಂಥವು ತೀರ ಅಪರೂಪ.

ಚೆಂಡನ್ನು ಗೋಡೆಗೆಸೆದು ಆತುಕೊಳ್ಳುವಂತೆ, ನೆಲಕ್ಕೆ ಹಾಕಿ ಹಿಡಿಯುತ್ತ ಪುಟಚೆಂಡನ್ನಾಡುವಂತೆ, ಶಬ್ದದೊಡನೆ ಸಾಮಾನ್ಯವಾಗಿ ಸಮಸ್ತ ಕವಿಗಳೂ 'ಆಟ'ವಾಡುತ್ತಾರೆ. ಕನಕದಾಸನಲ್ಲೂ ಅಪೂರ್ವವಾಗಿ ಆ ಹವ್ಯಾಸ ಗೋಚರಿಸುತ್ತದೆ. ದೈತ್ಯರು ಅನಿರುದ್ಧನನ್ನು "ಎಳವಾಟಿ"ಯೆಂದು ಹಂಗಿಸಿದಾಗ ಅವನಾಡುವ ಪ್ರತಿಮಾತದಲಿಕೆ:

"ಬಾಟಿ ನಾನಹುದು ನಿಮ್ಮವ ಕೊಲ್ಲದನ್ನಕ ।
ಬಾಟಿ ಬಿಲಾಸ್ವಿತನಾಗಿ ।
ಬಾಟಿ ಬಾಣಾತ್ಮ ಸಂಭವೆಯಿಲ್ಲದಾನೊರ್ವ ।
ಬಾಳೆನೆಂದನಿರುದ್ಧ ನುಡಿದ ॥"

ಕುಂಭಾಂಡನ ಸಾಹಸ:

"ಪಂಚಬಾಣನ ಕುಮಾರಕನಾದ ಕಾರಣ ।
ಪಂಚಸಾಯಕನ ತೋಱಿಸಿದೆ ।
ಪಂಚಗುಂಡಿಗೆಯಿಂದೆ ಕಾದುಕೊ ಎನುತಲಿ ।
ಪಂಚಸಾಯಕದೊಳಿಕ್ಕಿದನು ॥"

ಉಷೆ ಚಿತ್ರಲೇಖೆಯನ್ನು ನುತಿಸುವ ರೀತಿ:

"ತಾಯೆಂದು ಕಳುಹಲು ತಂದೆ ನೀ ।
ಕೇಳೆನ್ನ ಪ್ರೀಯದ ಗುರುವಕ್ಕೋಜೆ ।
ಬಾಯೆನ್ನ ಬಂದುಗೆವಾಯ ಭಾಮಿನಿ ರನ್ನೆ ।
ಬಾಯೆಂದು ಸಖಿಯನಪ್ಪಿದಳು ॥"

ಇವೆಲ್ಲ ಮಿತವಾಗಿರುವುದರಿಂದ ಹಿತವಾಗಿವೆ; ಪದಗಳೊಡನೆ ಆಡುವ 'ಆಟ' ಎಲ್ಲೂ ಚೇಷ್ಟೆಯಾಗಿಲ್ಲ.

“ವಡಿ” ಎಂಬ ಮಾತನ್ನು ಕನಕದಾಸ ಹೇಳಿದ್ದಾನೆ, “ಮೋಹನ ತರಂಗಿಣಿ”ಯ ಪೀಠಿಕಾ ಪದ್ಯಗಳಲ್ಲಿ. ಆದರೆ ವಡಿಯ ನಿದರ್ಶನಗಳು ಆ ಕಾವ್ಯದಲ್ಲಿ ಅಷ್ಟೇನೂ ಕಣ್ಣನ್ನು ಕುಕ್ಕುವಷ್ಟಿಲ್ಲ; ಬರುವ ಕಡೆಯುಲ್ಲೆಲ್ಲ ಅದು ಸಲಕ್ಷಣವಾಗಿದೆ. ಬರಿ ಶಬ್ದಚಿತ್ರದಂತೆ ತಿರಸ್ಕಾರಯೋಗ್ಯವಾಗುವುದಿಲ್ಲ. ಇವುಗಳನ್ನು ಲಕ್ಷಿಸಿ:

“ಕರಗಸವೆತ್ತ ಕಂದಳಿಯೆತ್ತ ಕಾಲಸಂ।
ಹರನೆತ್ತ ಕಂದರ್ಪನೆತ್ತ।”

“ಮೊನೆದೋಱದೆ ಮೃದುವಾಕ್ಯದಿಂದಡಿಗೆಯ।
ಮನೆಗೆಲಸಕೆ ಸಾರ್ಚಿದಳು।”

“ಬಾರದ ಬಟ್ಟೆಯ ಬೞಿವಿಡಿದನ ಬಿಟ್ಟು।
ನೇರದಿ ಬಾಳೆಂದು ನುಡಿದ।”

“ಕೀಲಣೆಗೆಯ್ದ ಸುವರ್ಣವೇತಂಡ ಶುಂ।
ಡಾಲದೆ ಸುರಿದುದು ಸಲಿಲ।”

“ಮಾತಾಡು ಮಜ್ಜನ್ಮದುಃಖವಿಚ್ಛೇದನ।
ಮಾತಾಡು ಮತ್ಪುಣ್ಯನಿಧಿಯೆ।
ಮಾತಾಡು ಮತ್ಸುತ ಕುಂಜರ ನೀ ಮುದ್ದು।
ಮಾತನಾಡೆಂದಳರ್ಭಕನ॥”

“ಗಿರಿಜೇಶನೊಳ್।
ಭೇದವಿಲ್ಲದೆ ಭಕುತಿಯಲಿ।
ಪಾದಪದ್ಮವ ನಿರೀಕ್ಷಿಸಿ ಬೇಗ ಬಹುದೆಂದು।
ಭೂಧವ ಬೀಳ್ಕೊಟ್ಟನವಳ॥”

“ಮಾರನ ಮಂತ್ರ ದೇವತೆ ಮಂಗಳಾಂಗಿ ಮಂ।
ದಾರ ಗಂಧಾನ್ವಿತೆ ಯೆಸೆವ।
ತೋರನುಕ್ಕೊಲೆಯ ಮಾನಿನಿ ರನ್ನೆ ಕತೆಯ ವಿ।
ಸ್ತಾರವ ಕೇಳು ಪೇೞುವೆನು॥”

“ಕಂಡುದ ನುಡಿದರೆ ಕೋಪವೆ ಕುಸುಮ ಕೋ।
ದಂಡ ಕಾದಲಿಕೆ ಬಂದಿಹನೆ।”

“ನಳಚರಿತ್ರೆ”ಯಲ್ಲಿ ಆದ್ಯಕ್ಷರ ಪ್ರಾಸ ಇನ್ನೂ ವಿರಳ; ಪಂಜು ಹಿಡಿದು ಅರಸಿದರೆ ಇವು ಕೆಲವು ಸಿಕ್ಕುತ್ತವೆ:

“ಪತಿವಿಹೀನೆಗೆ ಸಲುವುದೇ ಸು।
ವ್ರತ ಸುಭೋಜನ ಸೌಖ್ಯ ಸುಖಸಂ!
ಗತಿಗಳುಂಟೇ ತಾಯೆ।”

"ಮರೆದು ಮಲಗಿದಳವಳ ಮುಗ್ಧುಲ ।
ಸೆರಗ ಮೆಲ್ಲಗೆ ಜಾರಿಸುತಲಾ ।
ಗರಸ ವಸನವ ಕೊಂಡು ಮಲಗಿದ ಸತಿಯನೀಕ್ಷಿಸುತ ।
ಮರುಗಿದನು ಮನದೊಳಗೆ ।"

"ಪರರ ದುಃಖವ ಪರಿಹರಿಸಿ ಮಿಗೆ ।
ಪರರಿಗುಪಕಾರಾರ್ಥವೆಸಗಲು ।
ಪರಮಪುಣ್ಯವಿದೆಂದು ಪೇಳ್ವರು ಪಿರಿಯರಾದವರು ।
ಪರಮ ಬಾಂಧವ ನೀನೆನಗೆ ಸತ್ಕರಿಸು ।"

ದಾಸಪಂಥದ ಶ್ರೇಷ್ಠ ವ್ಯಕ್ತಿಗಳಲ್ಲಿ ಕನಕದಾಸನಿಗೆ ಇರುವ ಸ್ಥಾನವನ್ನು ಕುರಿತು ಯಾರೂ ಏನೂ ಬಣ್ಣಿಸಬೇಕಾಗಿಲ್ಲ, ಅದಾಗಲೇ ನಿಶ್ಚಿತವಾಗಿಬಿಟ್ಟಿದೆ. ನಡುಗನ್ನಡದ ಕವಿಗಡಣದಲ್ಲಿ ಸ್ಮರಣೀಯರಾದವರು ಹಲವರುಂಟು; ಅವರಲ್ಲಿ ಕನಕದಾಸನೂ ಒಬ್ಬನೆಂಬುದು ನಿರ್ವಿವಾದ.

# ಕನಕದಾಸರ ಕೃತಿಗಳಲ್ಲಿ ಕಂಡುಬರುವ ಚಾರಿತ್ರಿಕ ಅಂಶಗಳು

ಶ್ರೀ ಬಿ. ಎಸ್. ಸಣ್ಣಯ್ಯ

ಕನಕದಾಸರು ಶ್ರೀ ವ್ಯಾಸರಾಯರ ಶಿಷ್ಯರು, ಪುರಂದರದಾಸರ ಸಮಕಾಲೀನರು. ವಿಜಯನಗರ ಸಾಮ್ರಾಜ್ಯ ಅತ್ಯಂತ ಉಚ್ಛ್ರಾಯಸ್ಥಿತಿಯಲ್ಲಿ ವೈಭವದಿಂದ ಮೆರೆಯುತ್ತಿದ್ದ ಕಾಲದಲ್ಲಿದ್ದವರು. ಕರ್ಣಾಟಕ ಇತಿಹಾಸದಲ್ಲಿ ಸುವರ್ಣಯುಗವೆಂದು ಕರೆದ ಕೃಷ್ಣದೇವರಾಯನ ಕಾಲದಲ್ಲಿದ್ದವರು. ಎಂದರೆ ಕನಕದಾಸರ ಕಾಲವನ್ನು ಸುಮಾರು ಕ್ರಿ.ಶ. ೧೫೫೦ ಎಂದು ಎಲ್ಲರೂ ಒಪ್ಪಿಕೊಂಡಿದ್ದಾರೆ.

ಕನಕದಾಸರು ಧಾರವಾಡ ಜಿಲ್ಲೆಯ ಬಾಡ ಎಂಬ ಗ್ರಾಮದವರು. ತಂದೆ ಬೀರಪ್ಪ, ತಾಯಿ ಬಚ್ಚಮ್ಮ. ಕನಕನ ಹುಟ್ಟುಹೆಸರು ತಿಮ್ಮಪ್ಪ. ತಂದೆ ಬೀರಪ್ಪನು ವಿಜಯನಗರದ ಅರಸರಲ್ಲಿ ದಂಡನಾಯಕನಾಗಿದ್ದನು. ತಿಮ್ಮಪ್ಪನು ಚಿಕ್ಕವನಾಗಿದ್ದಾಗಲೇ ತಂದೆಯು ತೀರಿಕೊಂಡನು. ಇದರಿಂದ ದಂಡನಾಯಕನ ಕೆಲಸ ತಿಮ್ಮಪ್ಪನ ಪಾಲಿಗೆ ಬಂದಿತು. ತಿಮ್ಮಪ್ಪನು ಚಿಕ್ಕಂದಿನಿಂದಲೂ ಗರಡಿ ಸಾಧನೆ, ಕುಸ್ತಿ, ಕತ್ತಿವರಸೆ ಮೊದಲಾದುವುಗಳಲ್ಲಿ ಆಸಕ್ತನಾಗಿ ಉತ್ತಮ ದೇಹದಾರ್ಢ್ಯವನ್ನು ಪಡೆದಿದ್ದುದರಿಂದ ದಂಡನಾಯಕನ ಕೆಲಸವನ್ನು ದಕ್ಷತೆಯಿಂದ ನಿರ್ವಹಿಸಲು ಸಮರ್ಥನಾದನು. ಕೆಲವು ಯುದ್ಧಗಳಲ್ಲಿಯೂ ಭಾಗವಹಿಸಿ ತನ್ನ ಶೌರ್ಯವನ್ನು ಪ್ರದರ್ಶಿಸಿದನು.

ದಂಡನಾಯಕನಾಗಿದ ತಿಮ್ಮಪ್ಪನು ಒಮ್ಮೆ ಭೂಶೋಧನೆ ಮಾಡುತ್ತಿರುವಾಗ್ಗೆ ಅಪಾರ ಧನರಾಶಿ ದೊರೆಯಿತು. ಇದನ್ನು ಹಾಳುಮಾಡದೆ ಕಾಗಿನೆಲೆಯಲ್ಲಿ ದೇವಾಲಯವನ್ನು ಕಟ್ಟಿಸಿ ಆದಿಕೇಶವನ ಮೂರ್ತಿಯನ್ನು ಪ್ರತಿಷ್ಠಿಸಿ ಪೂಜಾಪದ್ಧತಿಯನ್ನೇರ್ಪಡಿಸಿದನು. ಹೀಗೆ ಅಪಾರ ಧನವನ್ನು ಹೊಂದಿ ಸದ್ವಿನಿಯೋಗ ಮಾಡಿದ ತಿಮ್ಮಪ್ಪನನ್ನು ಜನರು ಕನಕನೆಂದು ಕರೆದರು.

ಮೊದಲೇ ತಂದೆಯನ್ನು ಕಳೆದುಕೊಂಡಿದ್ದ ಕನಕನು ಕೆಲವು ದಿನಗಳ ನಂತರ ತಾಯಿಯನ್ನೂ, ಹೆಂಡತಿಯನ್ನೂ ಕಳೆದುಕೊಂಡನು. ಇದರಿಂದ ಜೀವನದಲ್ಲಿ ಜಿಗುಪ್ಸೆ ಹೊಂದಿದ ಕನಕನ ಬಾಳಿನ ದಿಕ್ಕೇ ಬದಲಿಸಿತು. ದಂಡನಾಯಕನ ಕೆಲಸವನ್ನು ಬಿಟ್ಟು ವ್ಯಾಸರಾಯರ ಶಿಷ್ಯನಾದನು. ವ್ಯಾಸರಾಯರ ಶಿಷ್ಯನಾಗಿ, ಪುರಂದರದಾಸರ ಸಮಕಾಲೀನನಾಗಿ ಸ್ವಪ್ರತಿಭೆಯಿಂದ ಪ್ರಸಿದ್ಧಿಗೆ ಬಂದನು. ತಿಮ್ಮಪ್ಪನು ಕನಕನಾದಂತೆ ಕನಕನು ಕನಕದಾಸರಾದರು.

'ನಾವು ಕುರುಬರು, ನಮ್ಮ ದೇವರೋ ಬೀರಪ್ಪ
ಕಾವ ನಮ್ಮಜ್ಜ ನರಕುರಿಯ'
'ಕುಲವಿಲ್ಲದ ದಾಸ ಕುರುಬ ದಾಸ'

ಎಂದು ಮೊದಲಾಗಿ ಅವರೇ ಹೇಳಿಕೊಳ್ಳುವಂತೆ ಸಾಮಾನ್ಯವಾದ ಕುರುಬ ಜಾತಿಯಲ್ಲಿ ಹುಟ್ಟಿದ ಕನಕದಾಸರು ವ್ಯಾಸರಾಯರ ಶಿಷ್ಯರಾಗಿ, ಪುರಂದರದಾಸರ ಹೊಯಿಕಯ್ಯಾಗಿ ಲೋಕಪೂಜ್ಯತ್ವವನ್ನು ಪಡೆದುದು ಸಾಮಾನ್ಯವಲ್ಲ. ಅಂತಹ ಅಸಾಧಾರಣ ಪ್ರತಿಭಾವಂತ ಕನಕದಾಸರು ಹಲವಾರು ಹಾಡುಗಳನ್ನು ರಚಿಸಿ ಭಕ್ತಿ ವೈರಾಗ್ಯಗಳ ಪ್ರತಿಪಾದನೆ ಮಾಡಿರುವುದಲ್ಲದೆ ಜನರ ದಿನನಿತ್ಯದ ವಂಕು ಡೊಂಕುಗಳನ್ನು ತಿದ್ದಲು ಹವಣಿಸಿದ್ದಾರೆ. ಅದಕ್ಕಾಗಿ ಹಲವಾರು ಹಾಡುಗಳು ಅವರ ಬಾಯಿಂದ ಹೊರಟಿವೆ. ನೂರಾರು ಹಾಡುಗಳನ್ನು ಹಾಡಿದುದಲ್ಲದೆ ಮೋಹನತರಂಗಿಣಿ, ನಳಚರಿತ್ರೆ, ರಾಮಧಾನ್ಯಚರಿತೆ, ಹರಿಭಕ್ತಿಸಾರ ಎಂಬ ಗ್ರಂಥಗಳನ್ನು ರಚಿಸಿದ್ದಾರೆ. ನೃಸಿಂಹಸ್ತವ ಎಂಬ ಇನ್ನೊಂದು ಗ್ರಂಥವೂ ಇವರದೇ ಇರಬೇಕೆಂಬ ಊಹೆಯಿದೆ.

ಇವುಗಳಲ್ಲೆಲ್ಲಾ ದೊಡ್ಡ ಕಾವ್ಯವೆಂದರೆ ಸಾಂಗತ್ಯದಲ್ಲಿ ರಚಿತವಾಗಿರುವ ಮೋಹನತರಂಗಿಣೀ ಕಾವ್ಯ. ಇದನ್ನು ರಚಿಸಿದುದು ವಿಜಯನಗರ ಸಾಮ್ರಾಜ್ಯ ಅತ್ಯಂತ ಉಚ್ಛ್ರಾಯಸ್ಥಿತಿಯಲ್ಲಿ ಮೆರೆಯುತ್ತಿದ್ದ ಕಾಲದಲ್ಲಿ. ಇತಿಹಾಸಕಾರರೂ ಅನೇಕ ವಿದೇಶ ಯಾತ್ರಿಕರೂ ವಿಜಯನಗರ ಸಾಮ್ರಾಜ್ಯವನ್ನೂ ಕೃಷ್ಣದೇವ ರಾಯನನ್ನೂ ಹಾಡಿ ಹೊಗಳಿ ಅದಕ್ಕೆ ಚಿರಸ್ಮರಣೀಯವಾದ ಒಂದು ಉನ್ನತ ಸ್ಥಾನವನ್ನು ನೀಡಿ ಹೋಗಿದ್ದಾರೆ. ಅಂತಹ ಸುಖಸಂಪತ್ತುಗಳ ಆಗರವಾದ ವಿಜಯನಗರವನ್ನೂ, ಅದಕ್ಕೆ ಕಾರಣನಾದ ಕೃಷ್ಣದೇವರಾಯನನ್ನೂ ಕಂಡ ಕನಕ ದಾಸರಿಗೆ ಸಂತೋಷ ಹೆಚ್ಚಿ, ಆ ಕಾಲದ ಜನಜೀವನವನ್ನೂ ಒಂದೆಡೆ ಹಿಡಿದಿಡ ಬೇಕೆಂದು ತೋರಿರಬೇಕು. ಇತಿಹಾಸಪ್ರಸಿದ್ಧ ಪುರುಷನಾದ ಕೃಷ್ಣದೇವ ರಾಯನನ್ನು ಪರೋಕ್ಷವಾಗಿ ಹೊಗಳುವ ದಾರಿಯನ್ನು ಹುಡುಕಿರಬೇಕು. ಆದರಿಂದ ಮೋಹನತರಂಗಿಣೀ ಕಾವ್ಯ ಸೃಷ್ಟವಾಗಿರಬೇಕು.

ಇದರಿಂದಲೇ, ಎಂದರೆ ಕೃಷ್ಣದೇವರಾಯನ ಚರಿತೆಯನ್ನು ರಚಿಸುವ ದೃಷ್ಟಿಯಿಂದಲೇ, ಮೋಹನತರಂಗಿಣೀ ಕಾವ್ಯವನ್ನು ಶ್ರೀಕೃಷ್ಣಚರಿತೆ ಎಂದೂ ಕರೆದಿದ್ದಾರೆ. ಇದರಲ್ಲಿ ಪವಿತ್ರ ಕ್ಷೇತ್ರವೆನಿಸಿಕೊಂಡ ದ್ವಾರಕಾಪುರದ ಶ್ರೀ ಕೃಷ್ಣನನ್ನೂ, ಇತಿಹಾಸಪ್ರಸಿದ್ಧವಾದ ಸುಖಸಂಪತ್ತುಗಳ ಆಗರವೆನಿಸಿಕೊಂಡ ವಿಜಯನಗರದ ಕೃಷ್ಣದೇವರಾಯನನ್ನೂ ಒಂದೇ ತೊಟ್ಟಿಲಲ್ಲಿಟ್ಟು ತೂಗಿದಂತೆ ತೋರುತ್ತದೆ. ಬಾಹ್ಯವಾಗಿ ಅದು ದ್ವಾರಕಾಪುರದ ಶ್ರೀಕೃಷ್ಣಚರಿತೆಯಾದರೂ ಆಂತರ್ಯವಾಗಿ ಕೃಷ್ಣದೇವರಾಯನನ್ನು ಹೊಗಳುವ, ಕೊಂಡಾಡುವ ಚರಿತ್ರೆಯೂ ಆಗಿದೆ. ಕನಕದಾಸರು ನೋಡಿದ್ದ ತಮ್ಮ ಕಾಲದ ಸುಖಜೀವನವನ್ನು

ಕಾವ್ಯದಲ್ಲಿ ಕಂಡರಸಿದ್ದಾರೆ. ಕೃಷ್ಣದೇವರಾಯನ ಕಾಲದ ಮುತ್ತು ರತ್ನಗಳಿಂದ ದ್ವಾಪರ ಯುಗದ ಕೃಷ್ಣಚಿತ್ರವನ್ನು ಅಲಂಕರಿಸಿದ್ದಾರೆ. ಆ ಚಿತ್ರವನ್ನು ಅಲುಗಿಸಿ ನೋಡಿದರೆ ಅದರಲ್ಲಿ ಅಡಗಿರುವ ವಿಜಯನಗರದ ಕೃಷ್ಣದೇವರಾಯನ ಚಿತ್ರವೂ ಕಣ್ಣಿಗೆ ಬೀಳುತ್ತದೆ.

ಕನಕದಾಸರ ಹುಟ್ಟು ಕುರುಬಮನೆತನದಲ್ಲಾದರೂ, ವೃತ್ತಿ ದಂಡ ನಾಯಕನದಾದರೂ, ಕೊನೆಗೆ ಅವರು ಸ್ವೀಕರಿಸಿದ ತತ್ವ ಯಾವುದು? ಯಾವ ಸಂಪ್ರದಾಯವನ್ನು ಅನುಸರಿಸಿದರು? ಎಂಬುದೆಲ್ಲವೂ ಅವರ ಕೃತಿಗಳಿಂದಲೇ ತಿಳಿದುಬರುತ್ತದೆ.

ಶ್ರೀಮದ್ಗುರುರಾಯ ದುರಿತವಿಜೇಯ ದು।
ಷ್ಕಾಮ ವಿಚ್ಛೇದನಾಹ್ಲಾದ।
ತಾಮಸಗುಣನಾಶ ಸಾತ್ವಿಕೋಲ್ಲಾಸ ಶ್ರೀ।
ರಾಮಾನುಜಮುನಿ ಶರಣು ॥ ೧–೨ ॥

ಅರ್ಕನೊಳಾಟವೆ ತಮಕೆ ತಾರ್ಕ್ಷ್ಯನ ಕೂಡೆ।
ಕಾರ್ಕೋಟಕ ಮೇಳವಿಪುದೆ।
ತರ್ಕಕೆ ರಾಮಾನುಜರೊಳು ವಾದಿಸಂ।
ಪರ್ಕ ನಿಲ್ವುದೆ ನಿಲ್ಲಲರಿದು ॥ ೧–೩ ॥

ಈ ರೀತಿ ಪೆಂಪುವಡೆದ ಸದ್ಗುರುಕರ।
ವಾರಿಜೋದ್ಭವ ಶಿಷ್ಯಜನರ।
ಪೇರಿಸಿ ನಾಲ್ವಗೆ ಫಲವೀವ ತಾತಾ।
ಚಾರಿಯರಡಿಗೆರಗುವೆನು ॥ ೧–೪ ॥

ಎಂಬೀ ಪದ್ಯಗಳಲ್ಲಿ ಕನಕದಾಸರು ರಾಮಾನುಜರನ್ನೂ, ಅವರ ಗುರು ತಾತಾ ಚಾರಿಯವರನ್ನೂ ಸ್ತುತಿಸಿರುವುದರಿಂದ ವೈಷ್ಣವ ಮತಾನುಯಾಯಿಗಳಾಗಿದ್ದ ರೆಂದು ತೋರುತ್ತದೆ. ಹೀಗೆ ವೈಷ್ಣವ ಮತವನ್ನು ಅವಲಂಬಿಸಿದ್ದರೂ ಯಾವ ಮತವನ್ನೂ ತೆಗಳಿಲ್ಲ. ಎಲ್ಲ ಮತದವರೂ ಒಂದೇ ಎಂಬ ಉದಾತ್ತ ತತ್ವವನ್ನು ಜನತೆಗೆ ಸಾರಿದರು.

"ಕುಲಕುಲವೆನ್ನುತಿಹರೇ ಕುಲ ಯಾವುದು ನೋಡಿ ಸತ್ಯಸಜ್ಜನರೆ ॥ ಪ ॥

ಕೆಸರೊಳು ತಾವರೆ ಪುಟ್ಟಲು ಅದ ತಂದು
ಬಿಸಜನಾಭನಿಗರ್ಪಿಸಲಿಲ್ಲವೇ?
ಹಸುವಿನ ಮಾಂಸದೊಳುದಿಸಿದ ಕ್ಷೀರವ
ವಸುಧೆಯೊಳಗೆ ಭೂಸುರರುಣಲಿಲ್ಲವೆ?'
. . . . . . . . . . . . . . . . . . . . . . . . .
ಆತ ಮಹಾತ್ಮನು ನೆಲೆಯಾದಿಕೇಶವ
ಯಾತರ ಕುಲವಯ್ಯ ಆತನೊಲಿದ ಮೇಲೆ ॥"

ಎಂಬ ಹಾಡಿನಲ್ಲಿಯೂ,

"ಕುಲಕುಲಕುಲವೆಂದು ಹಾರಾಡದಿರಿ, ನಿಮ್ಮ
ಕುಲದ ನೆಲೆಯನೇನಾದರು ಬಲ್ಲಿರಾ ॥"

ಎಂಬ ಹಾಡಿನಲ್ಲಿಯೂ ಕೀಳುಜಾತಿ ಮೇಲುಜಾತಿ ಎನ್ನುತ್ತಿದ್ದ ಜನರಿಗೆ ಉತ್ತರ ಕೊಟ್ಟಿದ್ದಾರೆ. ಜನತೆಯನ್ನು ಎಚ್ಚರಿಸಿದ್ದಾರೆ.

ಮೋಹನತರಂಗಿಣೀಕಾವ್ಯದಲ್ಲಿ ರಾಮಾನುಜ, ತಾತಾಚಾರಿಯರನ್ನು ಸ್ತುತಿಸಿದ ಮೇಲೆ,

ನಿಮ್ಮಯ ಪಿತ ಕೃಷ್ಣರಾಯನ ಮಹಿಮೆಯ ।
ಹೆಮ್ಮೆಯಬಿಡದು ಕೀರ್ತಿಪೊಡೆ ।
ಎಮ್ಮಳವಲ್ಲ ಶಾರದೆಗೂಡಿ ಚತುರಾಸ್ಯ ।
ಬೊಮ್ಮಬಾರೆನ್ನ ವಂದನೆಗೆ ॥ ೧-೯ ॥

ಎಂದು ಹೇಳುತ್ತಾರೆ. ಇಲ್ಲಿ ಕೃಷ್ಣರಾಯ ಎಂಬ ಪದವನ್ನು ನೋಡಿದರೆ ಕವಿಯು ದ್ವಾರಕಾಪುರದ ಶ್ರೀಕೃಷ್ಣನನ್ನಲ್ಲದೆ ವಿಜಯನಗರದ ಕೃಷ್ಣದೇವರಾಯನನ್ನೂ ನೆನೆಯುವಂತೆ ತೋರುತ್ತದೆ. ಮುಂದೆ ವಿಜಯನಗರ ಸಾಮ್ರಾಜ್ಯದಲ್ಲಿನ ಜನರ ಸುಖಜೀವನವನ್ನೂ, ವಿಲಾಸವಿಭ್ರಮಗಳನ್ನೂ ಕಣ್ಣಾರೆ ಕಂಡ ಕನಕದಾಸರು ಕಾವ್ಯದುದ್ದಕ್ಕೂ ಹೃದಯಂಗಮವಾಗಿ ವರ್ಣಿಸಿದ್ದಾರೆ. ಅವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ನೋಡಬಹುದು. ದೇಶದ ವರ್ಣನೆಯನ್ನು ಮಾಡುತ್ತಾ,

ರಾರಾಜಿಸುತಿಪ್ಪ ತೊಡಿಗೆ ನಿಖಿಳಾಗ್ರ ।
ಹಾರ ಷಡ್ದರ್ಶನಾರ್ಯರಿಗೆ ।
ವೀರ ಮಾನ್ಯವನಿತ್ತು ಪುರಗಳೊಪ್ಪಿರ್ದುದಾ ।
ದ್ವಾರಾವತಿಯ ದೇಶದೊಳು ॥ ೨-೧೭ ॥

ಆವಾವ ಗ್ರಾಮಾನುಗ್ರಾಮದಿ ಶಿವ ವಿಷ್ಣು ।
ದೇವಾಲಯ ಪಾತ್ರಭೋಗ ।
ತೀವಿದ ಮೃಷ್ಟಾನ್ನಸತ್ರದೊಳೊತ್ತಿಲಿ ।
ಭಾವಿಸೆ ಕೊಳಗಳೊಪ್ಪಿದುವು ॥ ೨-೧೮ ॥

ಕೆರೆ ಬಾವಿಗಳಿಲ್ಲದೆಡೆಯಲ್ಲಿ ।
ತೊರೆ ನೀರ ಕಂಬಿಯೊಳ್ತರಿಸಿ ।
ನೆರೆ ಧರ್ಮಿಷ್ಠರು ನಿರ್ಮಿತವನು ।
ಮಾಡಿದಅರವಟ್ಟಿಗೆಗಳೊಪ್ಪಿದವು ॥ ೨-೨೬ ॥

ಮೊದಲಾದ ಹಲವಾರು ಪದ್ಯಗಳನ್ನು ಓದಿದಾಗ ಅಥವಾ ಕೇಳಿದಾಗ ಇಂದಿನ ಈ ಕಾಲದ ಜನರಿಗೆ ಆ ಕಾಲದಲ್ಲಿ ನಾವೂ ಇರಬಾರದಿತ್ತೆ ಎಂದೆನಿಸುವುದು

ಸಹಜವಾಗಿದೆ. ಕೆರೆ ಬಾವಿಗಳು ಇಲ್ಲದ ಕಡೆ ನದಿಯಿಂದ ನೀರನ್ನು ಕಂಬಿಯ ಮೂಲಕ ತರಿಸಿ ಪಾನೀಯ ಶಾಲೆಗಳನ್ನು ನಿರ್ಮಿಸುವ ಆ ಧರ್ಮಿಷ್ಠರ ಆ ಕಾಲದಲ್ಲಿದ್ದ ಜನ ಧನ್ಯರು; ಪುಣ್ಯವಂತ ಜನರೇ ಸರಿ. ಯಾವುದಕ್ಕೂ ಸರ್ಕಾರದ ಕಡೆಯೇ ಕೈಚಾಚಿ ಕುಳಿತಿರುವ ಇಂದಿನ ಕಾಲದಲ್ಲಿ ಜನರು ಈ ಕೆಲವಾರು ಪದ್ಯಗಳನ್ನಾದರೂ ಓದಿ ಮನನಮಾಡಬೇಕು, ಅದೂ ಹಣವಂತರು. ಮೇಲಿನ ಪದ್ಯಗಳಲ್ಲಿ ದ್ವಾರಾವತಿಯ ಹೆಸರು ಬಂದರೂ ವಿಜಯನಗರದ ಐಸಿರಿಯೇ ಇದು ಎಂಬುದು ವಿಜಯನಗರದ ಇತಿಹಾಸವನ್ನು ಬಲ್ಲ ಎಲ್ಲರಿಗೂ ಮನವರಿಕೆಯಾಗುತ್ತದೆ.

ಇನ್ನು ಮುಂದಿನ ಕೆಲವು ವರ್ಣನೆಗಳನ್ನು ನೋಡಿ. ವಿಜಯನಗರದ ಸಂಪತ್ತು ಎಷ್ಟಿತ್ತು ? ಎಂತಿತ್ತು ? ಎಂಬುದೆಲ್ಲವೂ ತಾನಾಗಿಯೇ ತಿಳಿಯುತ್ತದೆ:

ಸೋಮಸೂರಿಯ ವೀಥಿ ವೀಥಿಯಿಕ್ಕೆಲದಲ್ಲಿ ॥
ಹೇಮನಿರ್ಮಿತ ಸೌಧದೋಳಿ ।
ರಾಮಣೀಯತೆವೆತ್ತ ಕಳಸದಂಗಡಿಯಿದ್ದುವ ।
ವಾ ಮಹಾದ್ವಾರಕಾಪುರದೆ ॥ ೩–೧೧ ॥

ಭೋಜಿಪ ಕರ್ಪೂರ ಕಸ್ತೂರಿ ಜೀರ್ಣಜ ।
ವಾಜಿ ಪುಣುಗು ಬಹುತೈಲ ।
ಸೋಜಿಗವಡೆದ ಸುಗಂಧದಂಗಡಿಗಳು ।
ರಾಜಿಸುತಿರ್ದುವಿಕ್ಕೆಲದಿ ॥ ೩–೧೮ ॥

ಚಪ್ಪನ್ನದೇಶದ ನಾಣ್ಯಯಂಗಳ ನೋಟ ।
ತಪ್ಪದ ಚಪಲ ಸೆಟ್ಟಿಗಳು ।
ಒಪ್ಪವಡೆದು ಕುಳಿತಿರ್ದರು ಹಣಹೊನ್ನ ।
ಕುಪ್ಪೆಯ ಮುಂದಿಟ್ಟುಕೊಂಡು ॥ ೩–೨೭ ॥

ಒರೆಗಲ್ಲ ರಜವ ಮೇಣದೊಳೊತ್ತಿ ತೆಗೆದದ ।
ಕರಗಿಸುವರ್ಣ ಬಂಡುಗವ ।
ನೆರೆದ ಯಾಚಕರಿಗೆ ಹಂಚಿಕುಡುವ ಚಿನ್ನ ।
ವರದರೊಪ್ಪಿದರು ಕಟ್ಟೆಯಲಿ ॥ ೩–೨೮ ॥

ಓರಂತೆ ಮರಕಾಲರು ಹಡಗಿನ ವ್ಯವ ।
ಹಾರದಿ ಗಳಿಸಿದ ಹಣವ ।
ಭಾರಸಂಖ್ಯೆಯಲಿ ತೂಗುವರು ಬೇಡಿದರೆ ಕು ।
ಬೇರಂಗೆ ಕಡವ ಕುಡುವರು ॥ ೩–೨೯ ॥

ಇಂತಹ ಐಶ್ವರ್ಯದ ಆಗರವನ್ನು ಸಂದರ್ಶಿಸಿದ ಸಹೃದಯರ ಮನಸ್ಸು ವಿಜಯನಗರ ಸಾಮ್ರಾಜ್ಯವನ್ನು ತಾನಾಗಿಯೇ ನೆನೆಯುತ್ತದೆ. ಚಿನ್ನದಿಂದಲೇ

ನಿರ್ಮಿತವಾದ ಉಪ್ಪರಿಗೆ ಮನೆಗಳು, ಸುಗಂಧದ ಅಂಗಡಿಗಳು, ಹಣಹೊನ್ನಿನ ಗುಡ್ಡೆಗಳನ್ನು ಮುಂದಿಟ್ಟುಕೊಂಡು ಕುಳಿತಿರುವ ಸೆಟ್ಟರುಗಳನ್ನು ನೋಡಿದರೆ ಯಾವನಿಗಾದರೂ ಮನಸ್ಸು ಚಂಚಲವಾಗುವುದು ಸಹಜವಾಗುತ್ತದೆ. ಸುವರ್ಣ ಬಂಡುಗವನ್ನು ಯಾಚಕರಿಗೆ ಹಂಚಿಕೊಡುವ ಚಿನಿವಾರರನ್ನೂ, ಹಡಗಿನ ವ್ಯಾಪಾರದಿಂದ ಗಳಿಸಿದ ಹಣವನ್ನು ಭಾರಸಂಖ್ಯೆಯಲ್ಲಿ ತೂಗುವ, ಬೇಡಿದರೆ ಕುಬೇರನಿಗೂ ಕಡಕೊಡುವ ಹರದರನ್ನೂ ನೆನೆದರೆ ಎಂತಹ ವೈಭವದ ಕಾಲ ಎಂದೆನಿಸುತ್ತದೆ. 'ವಿಜಯನಗರ ಸಾಮ್ರಾಜ್ಯದಲ್ಲಿ ಮುತ್ತು ರತ್ನಗಳಿಂದ ತುಂಬಿದ್ದ ಅಂಗಡಿಗಳನ್ನು ಹಾಗೆಯೇ ತೆರೆದುಹೋಗುತ್ತಿದ್ದರು. ಕಳ್ಳಕಾಕರ ಭಯವಿರಲಿಲ್ಲ. ಮೋಸ ವಂಚನೆ ಸುಲಿಗೆಗಳ ಹೆಸರಿರಲಿಲ್ಲ' ಎಂದು ಮೊದಲಾಗಿ ಹೇಳುವ ಇತಿಹಾಸಕಾರರ ಮಾತುಗಳು ನೂರಕ್ಕೆ ನೂರು ಸತ್ಯವಾಗಿ ತೋರುತ್ತವೆ.

ಇದಿಷ್ಟನ್ನು ನೋಡಿದ ಮೇಲೆ,

"ತಾಳಮದ್ದಳೆ ಪಾವುಜ ಶ್ರುತಿ ಮುಖವೀಣೆ ।
ಸಾಳಂಗ ಶುದ್ಧಗಾನೆಯರ ।
ಮೇಳನಟ್ಟುವ ನಾನಾ ವಿದ್ಯೆಗಳ ಗಟ್ಟಿ ।
ವಾಳರ ಮನೆಗಳೊಪ್ಪಿದವು ॥ ೩–೩೧ ॥

ರವಿಸಿದ್ಧಾಂತ ಪಾಠಕರಷ್ಟಭಾಷಾ ।
ಕವಿಗಮಕಿಗಳು ತಾರ್ಕಿಕರು ।
ವಿವಿಧವಿದ್ವತ್ಸಭೆ ನೆರೆದುದು ಲಲಿತ ಭಾ ।
ರ್ಗವಿಯ ಕಾಂತನ ಪುರದೊಳಗೆ ॥ ೩–೪೦ ॥

ಏನ ಬಣ್ಣಿಸಬರ್ಪುದು ಚಂದ್ರಕಾಂತ ಸೋ ।
ಪಾನ ಪುಷ್ಕರಣಿಗಳೊಳಗೆ ।
ನಾನಾ ದೇಶಭಾಷೆಯ ಬುಧರುಗಳನು ।
ಷ್ಠಾನವ ಮಾಳ್ಪ ಸಂಭ್ರಮವ ॥ ೩–೪೨ ॥

ಮೊದಲಾದ ಪದ್ಯಗಳಲ್ಲಿ ಸಂಗೀತ ಸಾಹಿತ್ಯದ ವಿವಿಧ ಪ್ರಕಾರದ ವೈಭವ ಗೊತ್ತಾಗುತ್ತದೆ. ಅಷ್ಟಭಾಷಾಕವಿಗಳ ಗಮಕಿಗಳ ತಾರ್ಕಿಕರ ವಿದ್ವತ್ಸಭೆ ಅಂದೇ ಕೂಡಿದ್ದಿತಂತೆ. ಎಂದರೆ, ವಿವಿಧ ಕಲೆಗಳಿಗೆ ವಿವಿಧ ಭಾಷೆಗಳಿಗೆ ರಾಜನ ಪ್ರೋತ್ಸಾಹವಿದ್ದುದು ತಿಳಿದುಬರುತ್ತದೆ. ಇದಾದ ನಂತರ ಊಟದ ವೈಭವ ಕಣ್ಣಿಗೆ ಕಟ್ಟುತ್ತದೆ.

ಹೀಗೆ ಜನಜೀವನದ ವಿವಿಧ ರೀತಿನೀತಿಗಳನ್ನು ಚಿತ್ರಿಸಿದ ಕವಿಯು ಮುಂದೆ ಪುರಾಣಕಥೆಯನ್ನು ಮುಂದುವರಿಸುತ್ತಾನೆ. ಕಥೆಯ ಓಟದೊಡನೆ ವಿಜಯನಗರದ ವೈಭವವೂ, ಕೃಷ್ಣದೇವರಾಯನ ಐಸಿರಿಯೂ ಜೊತೆಗೂಡಿಯೇ ಮುಂದು

ವರಿಯುತ್ತವೆ. ಕೊನೆಗೆ ಯುದ್ಧವರ್ಣನೆ ಬರುತ್ತದೆ. ಸ್ವತಃ ಯುದ್ಧಮಾಡಿ ಅನುಭವವಿದ್ದ ಕನಕದಾಸರಿಗೆ ಯುದ್ಧದ ವರ್ಣನೆಯನ್ನು ಮಾಡುವ ಚಾತುರ್ಯ ಮತ್ತೊಬ್ಬರಿಂದ ಬರಬೇಕೆ? ಅವರು ಯುದ್ಧವರ್ಣನೆಯನ್ನು ಸಹಜಸುಂದರವಾಗಿ ಬಣ್ಣಿಸಿದ್ದಾರೆ. ಇಲ್ಲಿ ಕೃಷ್ಣನು ಬಾಣಾಸುರನ ಶೋಣಿತಪುರದ ಮೇಲೆ ದಂಡೆತ್ತಿ ಹೋಗುವಾಗ ಕನಕದಾಸರು,

ಮುತ್ತಿನ ಗದ್ದುಗೆ ಗರುಡನ ಹೆಗಲಿನೊ ।
ಳೆತ್ತಿಸಿ ಬಿಗಿದು ಹಲ್ಲಣಿಸೆ ।
ಅತ್ಯಂತ ಸೌಖ್ಯವ ಮಾಡಿ ಸಂತಸದಿಂದೆ ।
ಹತ್ತಿದ ಶ್ರೀಕೃಷ್ಣರಾಯ ॥ ೩೬–೩೭ ॥

ಎಂದು ಹೇಳುತ್ತಾರೆ. ಇಲ್ಲಿ 'ಶ್ರೀಕೃಷ್ಣರಾಯ' ಎಂದು ಸಂಬೋಧಿಸುವುದನ್ನು ನೋಡಿದರೆ ಕೃಷ್ಣದೇವರಾಯನ ನೆನಪು ಸಹಜವಾಗಿ ಬರುತ್ತದೆ. ಕೃಷ್ಣನು ಬಾಣಾಸುರನ ಮೇಲೆ ಯುದ್ಧಕ್ಕೆ ಹೋಗುವುದನ್ನು ಕೃಷ್ಣದೇವರಾಯನು ಆದಿಲಶಹನ ವಶದಲ್ಲಿದ್ದ ರಾಯಚೂರ ಕೋಟೆಯನ್ನು ಮುತ್ತಿದ ವಿಷಯಕ್ಕೆ ಹೋಲಿಸಬಹುದು. ಈ ವಿಷಯ ಕನಕದಾಸರ ಮನಸ್ಸಿನಲ್ಲಿದ್ದಿರಬಹುದು. ಮತ್ತೆ ಕನಕದಾಸರು ಈ ಕಾವ್ಯದಲ್ಲಿ ಪೆಟಲಂಬಿನವರ ಪಥಕಗಳನ್ನು ಹೇಳಿದ್ದಾರೆ. ಎಂದರೆ ಆ ಕಾಲಕ್ಕೆ ದಕ್ಷಿಣ ದೇಶದಲ್ಲಿ ತುಬಾಕಿಯ ಉಪಯೋಗ ಇದ್ದಿತೆಂದು ತಿಳಿಯಬಹುದು.

ಕಾವ್ಯದ ಕೊನೆಗೆ ಕನಕದಾಸರು,

ದುಷ್ಟರ ಮುರಿದು ಸಜ್ಜನರ ಪಾಲಿಗೆ ಸಂ ।
ತುಷ್ಟಿಯ ಮಾಡಿ ಭಕ್ತರಿಗೆ ।
ಇಷ್ಟಾರ್ಥವನೀವ ಕೃಷ್ಣ ದ್ವಾರಕಿಯೊಳ ।
ಗಷ್ಟೈಶ್ವರ್ಯದೊಳೊಪ್ಪಿದನು ॥ ೪೨–೭೪ ॥

ಭೋಜ್ಯವಸ್ತುಗಳೊಳು ಮುಖ್ಯವಾದುದು ಲಲಿ ।
ತಾಜ್ಯ ನಿರ್ಜರ ಜನರೊಳಗೆ ।
ಸೋಜ್ಯ ಸುಖಾಢ್ಯಪಾಲಕ ಕೃಷ್ಣ ಸುಖಸಾ ।
ಮ್ರಾಜ್ಯವನಾಳಿದ ಮುದದೆ ॥ ೪೨–೭೫ ॥

ಮೊದಲಾಗಿ ಹೇಳುವ ಮಾತುಗಳು ಕೃಷ್ಣದೇವರಾಯನ ವಿಷಯದಲ್ಲಿ ಅಕ್ಷರಶಃ ಒಪ್ಪುತ್ತವೆ. ಇಲ್ಲಿ ದ್ವಾರಕಿಯ ಸ್ಥಾನಕ್ಕೆ ವಿಜಯನಗರವನ್ನು ಸೇರಿಸಿದರೆ ಸಾಕು. ಅಲ್ಲಿಗೆ ಕೃಷ್ಣದೇವರಾಯನ ವೈಭವ ತಾನಾಗಿಯೇ ವಿದಿತವಾಗುತ್ತದೆ.

ಉಳಿದ ಕೃತಿಗಳಲ್ಲಿ ನಳಚರಿತ್ರೆಯನ್ನು ನೋಡಬಹುದು. ಇದರಲ್ಲಿ ಪುರಾಣ ಪ್ರಸಿದ್ಧವಾದ ನಳೋಪಾಖ್ಯಾನದ ಕಥೆಯನ್ನು ಆರಿಸಿಕೊಂಡು ಅತ್ಯಂತ ಸರಳವಾಗಿ

ಸುಲಭವಾಗಿ ಜನಸಾಮಾನ್ಯರಿಗೂ ಅರ್ಥವಾಗುವಂತೆ ರಚಿಸಿದ್ದಾರೆ. ಮೂಲದಲ್ಲಿ ಯಾವ ಯುದ್ಧವರ್ಣನೆಯಿಲ್ಲದಿದ್ದರೂ ತಮ್ಮ ಕಾವ್ಯದಲ್ಲಿ ಯುದ್ಧದ ವರ್ಣನೆಯನ್ನು ತಂದಿದ್ದಾರೆ. ಇದಕ್ಕೆ ಕಾರಣ ಅಂದಿನ ಯುದ್ಧಪ್ರಿಯ ಜನರ ವೀರಜೀವನವಿರಬಹುದು. ಮತ್ತೆ ಯುದ್ಧಾನುಭವಿಗಳಾದ ಕನಕದಾಸರ ಜೀವನವೂ ಇರಬಹುದು. ಮೋಹನತರಂಗಿಣಿಯು ಕಾಗಿನೆಲೆಯ ಆದಿಕೇಶವನ ಅಂಕಿತದಲ್ಲಿ ರಚಿತವಾದರೆ, ನಳಚರಿತ್ರೆಯು 'ವರಪುರದ ಚೆನ್ನಿಗರಾಯನ' ಅಂಕಿತದಲ್ಲಿ ರಚಿತವಾಗಿದೆ. ಇದರಿಂದ ಈ ಕೃತಿ ಬೇಲೂರಿನಲ್ಲಿ ರಚಿತವಾಗಿರಬಹುದೆಂದು ತೋರುತ್ತದೆ. ಕನಕದಾಸರು ಮೋಹನತರಂಗಿಣಿಯಲ್ಲಿ ವಿಜಯನಗರ ಸಾಮ್ರಾಜ್ಯದ ವೈಭವವನ್ನೂ, ಅಲ್ಲಿಯ ಜನಜೀವನವನ್ನೂ, ಕೃಷ್ಣದೇವರಾಯನು ಅನೇಕ ಯುದ್ಧಗಳಲ್ಲಿ ಜಯಶೀಲನಾಗಿ ಸುಖಸಂತೋಷಗಳಿಂದ ಮೆರೆಯುತ್ತಿದ್ದುದನ್ನೂ ಚಿತ್ರಿಸಿದರೆ, ನಳಚರಿತ್ರೆಯಲ್ಲಿ ವಿಜಯನಗರದ ಅರಸರು ರಾಕ್ಷಸತಂಗಡಿಯಲ್ಲಿ ಸೋತು ಕೆಲಕಾಲ ತೊಂದರೆಗೊಳಗಾಗಿ ಮತ್ತೆ ಅಧಿಕಾರಕ್ಕೆ ಬಂದುದನ್ನು ವರ್ಣಿಸಿರಬಹುದು. ವಿಜಯನಗರದ ಔನ್ನತ್ಯವನ್ನೂ, ಕೃಷ್ಣದೇವರಾಯನ ಧರ್ಮನಿಷ್ಠೆಯನ್ನೂ, ಸುಖಸಂತೋಷಗಳನ್ನೂ ಹಾಡಿ ಹೊಗಳಲು ಪುರಾಣಕಥೆ ಶ್ರೀಕೃಷ್ಣಚರಿತೆಯನ್ನು ಆರಿಸಿಕೊಂಡಂತೆ, ವಿಜಯನಗರದ ಅರಸರು ಯುದ್ಧದಲ್ಲಿ ಸೋತು ಕಷ್ಟಗಳಿಗೆ ಗುರಿಯಾಗಿ ಮತ್ತೆ ಅಧಿಕಾರಕ್ಕೆ ಬಂದುದನ್ನು ವಿವರಿಸಲು ಪುರಾಣಕಥೆ ನಳಚರಿತ್ರೆಯನ್ನು ಆರಿಸಿಕೊಂಡಿದ್ದಾರೆ.

ರಾಮಧಾನ್ಯಚರಿತೆಯಲ್ಲಿ ರಾಗಿಯೇ ಎಲ್ಲ ಧಾನ್ಯಗಳಿಗಿಂತಲೂ ಶ್ರೇಷ್ಠ ಎಂಬುದನ್ನು ಬಹು ಚಮತ್ಕಾರವಾಗಿ ಬಣ್ಣಿಸಿದ್ದಾರೆ. ಹರಿಭಕ್ತಿಸಾರದಲ್ಲಿ ಕನಕದಾಸರು ಹರಿಯನ್ನು ಸ್ತುತಿಸಿದ್ದಾರೆ. ಇದು ಸರಳವಾಗಿಯೂ ಸುಲಭವಾಗಿಯೂ ಇದೆ. ಇಲ್ಲಿ ನಾವು ಭಕ್ತನ ಹೃದಯತುಂಬಿದ ಪ್ರಾರ್ಥನೆಯನ್ನು ಕಾಣುತ್ತೇವೆ.

ಕನಕದಾಸರ ಕಾವ್ಯಗಳಿಂದ ಇಷ್ಟನ್ನು ತಿಳಿದ ನಾವು ಮುಂದೆ ಅವರ ಹಾಡುಗಳನ್ನು ನೋಡೋಣ. ಅವರ ಕಾವ್ಯಗಳಿಂದ ಅಂದಿನ ಕಾಲದ ವೈಭವ, ಜನಜೀವನ ಮೊದಲಾದುವುಗಳನ್ನು ತಿಳಿದರೆ, ಅವರ ಹಾಡುಗಳಿಂದ ಕನಕದಾಸರ ಓಡಾಟ, ಅನುಭವಿಸಿದ ಕಷ್ಟಗಳು, ಒದಗಿದ ತಿರಸ್ಕಾರ ಪುರಸ್ಕಾರಗಳು ತಿಳಿದು ಬರುತ್ತವೆ. ಇದರಲ್ಲಿ ಅವರು ತಿರುಪತಿ, ಬೇಲೂರು, ವಿಜಯನಗರ ಮುಂತಾದೆಡೆಗಳಲ್ಲಿ ಸಂಚರಿಸಿದುದು, ತಮ್ಮ ಭಕ್ತಿಯನ್ನು ಬೆಳಸಿಕೊಂಡುದು, ಅನುಭಾವ ಹೆಚ್ಚಾದುದು, ಅನೇಕ ಹಾಡುಗಳಿಂದ ಜನರ ಕಣ್ಣನ್ನು ತೆರೆಯಿಸಿದುದು ಗೋಚರವಾಗುತ್ತದೆ.

ದಾಸರು ಕಾಗಿನೆಲೆಯಲ್ಲಿ ದೇವಾಲಯವನ್ನು ಕಟ್ಟಿಸಿ ಬಾಡದಲ್ಲಿದ್ದ ಆದಿಕೇಶವ ಮೂರ್ತಿಯನ್ನು ತಂದು ಪ್ರತಿಷ್ಠಿಸಿದಂದಿನಿಂದ ಹಾಡುಗಳನ್ನು



ಕಾಗಿನೆಲೆಯ ದೇವಾಲಯಗಳ ಮತ್ತೊಂದು ದೃಶ್ಯ



ಬಾಡ ಗ್ರಾಮದಲ್ಲಿ ಶ್ರೀಕನಕದಾಸರ ಅರಮನೆಯಿದ್ದ ನಿವೇಶನ

ಹಾಡಲು ತೊಡಗಿದರು. ಒಂದೊಂದೂ ಮನದಾಳದಿಂದ ಮಥಿಸಿಬಂದ ಆಣಿ ಮುತ್ತುಗಳು. ಇವುಗಳಲ್ಲಿ ಕೆಲವು ಭಕ್ತಿಯಿಂದ ಭಾವಪರವಶರಾಗಿ ಹಾಡಿದವುಗಳಾದರೆ, ಮತ್ತೆ ಕೆಲವು ಜನರ ನಡೆನುಡಿಗಳನ್ನು ನೋಡಿ ಅವರನ್ನು ಸರಿಯಾದ ದಾರಿಯಲ್ಲಿ ನಡೆಯಿಸುವ ದಾರಿದೀವಿಗೆಗಳಾಗಿವೆ.

ಕನಕದಾಸರು 'ಎಲ್ಲರು ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ' ಎಂಬ ಹಾಡಿನಲ್ಲಿ ಎಲ್ಲ ವರ್ಗದ ಜನರನ್ನೂ ಕುರಿತು ದೇವರನ್ನು ಮರೆಯಬಾರದು, ಅದರಿಂದಲೇ ಮುಕ್ತಿ ಎಂದು ಉಪದೇಶಿಸಿದ್ದಾರೆ. ಬಿದುರುಗಳನ್ನು ಹೊತ್ತು ಕೂಲಿಮಾಡುವುದು, ನಾಲ್ಕು ವೇದ ಪುರಾಣ ಶಾಸ್ತ್ರ ಪಂಚಾಂಗಗಳನು ಹೇಳಿಕೊಂಡು ಕಾಲಕಳೆಯುವುದು, ಕಬ್ಬಿಣವನ್ನು ಬಡಿದು ತುಬಾಕಿಯನ್ನು ಮಾಡುವುದು, ಮದ್ದು ಗುಂಡುಗಳನ್ನು ಮಾಡುವುದು, ಕತ್ತಿಢಾಲವನ್ನು ಹಿಡಿದು ಖಂಡತುಂಡ ಮಾಡುವುದು, ಕುದುರೆಯೇರಿ ರಾವುತರಾಗಿ ಹೊಡೆದಾಡಿ ಸಾಯುವುದು, ಹೆಂಟೆಮಣ್ಣನ್ನು ಹದಮಾಡಿ ಕಷ್ಟಪಡುವುದು, ಕಳ್ಳತನ ಮಾಡಿ ಕಟ್ಟಿ ಹೊಡೆಸಿಕೊಳ್ಳುವುದು, ಸನ್ಯಾಸಿ ಜಂಗಮ ಜೋಗಿ ಜಟ್ಟಿ ಮೊಂಢ ಬೈರಾಗಿಗಳ ನಾನಾ ವೇಷಗಳನ್ನು ತೊಟ್ಟು ಅಲೆಯುವುದು—ಎಲ್ಲವೂ ಹೊಟ್ಟೆ ಬಟ್ಟೆಗಳಿಗಾಗಿ. ಈ ಎಲ್ಲ ಕಾರ್ಯಗಳಿಂದ ದೊರೆಯುವ ಒಂದೇ ಒಂದು ಲಾಭವೆಂದರೆ ಹೊಟ್ಟೆಹೊರೆಯುವುದು, ಬಟ್ಟೆಯನ್ನು ತೊಡುವುದು. ಆದರೆ ಕಾಗಿನೆಲೆಯಾದಿಕೇಶವನನ್ನು ಭಕ್ತಿಯಿಂದ ನೆನೆದರೆ ಮುಕ್ತಿ ದೊರೆಯುತ್ತದೆ. ಇದೇ ಜೀವನದ ಪರಮ ಧ್ಯೇಯ—ಎಂದು ಸಾರಿದ್ದಾರೆ. ಇದರಿಂದ ಕನಕದಾಸರು ಜನತೆಗೆ ಉಪದೇಶಿಸಿದುದು ತಿಳಿಯುವುದಲ್ಲದೆ, ಅಂದಿನ ಜನಜೀವನ ವಿಶದವಾಗಿ ಗೊತ್ತಾಗುತ್ತದೆ. ಈ ಹಾಡು 'ಕಾಗಿನೆಲೆಯಾದಿಕೇಶವ'ನ ಅಂಕಿತದಿಂದ ಕೂಡಿರುವುದರಿಂದ ಇದು ಕಾಗಿನೆಲೆಯಲ್ಲಿಯೇ ರಚಿತವಾಗಿರಬೇಕು.

ಕನಕದಾಸರು ಕಾಗಿನೆಲೆಯನ್ನು ಬಿಟ್ಟು ತಿರುಪತಿಗೆ ಬಂದು ತಮ್ಮ ಜೀವನದ ಬಹುಭಾಗವನ್ನು ಅಲ್ಲಿಯೇ ಕಳೆದಂತೆ ಐತಿಹ್ಯವಿದೆ.

> ನಡುಗಿದೆ ಯಾಕೆ ತಾಯಿಭೂಮಿ । ನಡುರಾತ್ರಿಯೊಳು ।
> . . . . . . . . . . . . . . . . . . . . . . . . .
> ಗುರುವೆ ಕೇಳಯ್ಯ ಕನಕಪ್ರಿಯ ತಿರುಪತಿಯ
> ಗಿರಿಯಾದಿಕೇಶವನೆ ಒಲಿದು ನಿಲ್ಲಿಸಿರಾ ॥

ಎಂಬ ಹಾಡಿನಲ್ಲಿ 'ತಿರುಪತಿಯ ಗಿರಿಯಾದಿಕೇಶವನ' ಎಂಬ ಅಂಕಿತವಿರುವುದರಿಂದ ಇದು ತಿರುಪತಿಯಲ್ಲಿ ರಚಿತವಾಗಿರಬೇಕು. ಅವರು ತಿರುಪತಿಗೆ ಬಂದು ಗೋವಿಂದನನ್ನು ಕುರಿತು

ಬಂದೆನಯ್ಯ ಗೋವಿಂದಶೆಟ್ಟಿ—ಇಂದು ನಿನ್ನ ಮದುವೆಗೆ ಬಾರೆಂದೆನೆ ॥ ಪ ॥

. . . . . . . . . . . . . . . . . . . . .

ಶೇಷಗಿರಿಯ ಮೇಲೆ ಇರುವ ತಿಮ್ಮಶೆಟ್ಟಿ
ದೇಶದೇಶಕ್ಕೆಲ್ಲಾ ಪ್ರಸಿದ್ಧ ಶೆಟ್ಟಿ
ಆಶೆಯ ತೋರಿ ಮುಡುಪನ್ನೆ ತರಿಸುವ
ಕೇಶವ ನಾರಾಯಣ ವೆಂಕಟಶೆಟ್ಟಿ ॥

ಮೊದಲಾಗಿ ತಿರುಪತಿಯ ದೇವರನ್ನು ಕುರಿತು ವಿಡಂಬನೆ ಮಾಡಿದುದಲ್ಲದೆ 'ಗೋವಿಂದ ಸಲಹೆನ್ನನು ಸದಾನಂದ ಗೋವಿಂದ ಸಲಹೆನ್ನನು' ಎಂದು ಗೋವಿಂದನನ್ನು ಸ್ತುತಿಸುತ್ತಾರೆ. ಕನಕದಾಸರು ತಿರುಪತಿಯಲ್ಲಿದ್ದಾಗ್ಗೆ ಇಂತಹ ಹಲವಾರು ಹಾಡುಗಳನ್ನು ರಚಿಸಿರುವುದಲ್ಲದೆ, ಅನೇಕ ಪವಾಡಗಳನ್ನೂ ಮೆರೆದಂತೆ ಐತಿಹ್ಯವಿದೆ.

ಕನಕದಾಸರು ಹಲವಾರು ತೀರ್ಥಕ್ಷೇತ್ರಗಳ ಸಂದರ್ಶನ ಮಾಡಿರಬೇಕು. ಅವುಗಳಲ್ಲಿ ಮುಖ್ಯವಾಗಿ ನಮಗೆ ತಿಳಿದುಬರುವ ತೀರ್ಥಕ್ಷೇತ್ರಗಳೆಂದರೆ ತಿರುಪತಿ, ಬೇಲೂರು, ಉಡುಪಿ—ಮೊದಲಾದುವು. ಕಾಗಿನೆಲೆಯನ್ನು ಬಿಟ್ಟಮೇಲೆ ತಿರುಪತಿಗೆ ಹೋಗಿರಬೇಕು. ಅಲ್ಲಿಂದ ಉಡುಪಿ, ಮತ್ತೆ ಬೇಲೂರು ಹೀಗೆ ಸಂಚಾರ ಮಾಡಿರಬೇಕು. ಇದನ್ನು ನಿಖರವಾಗಿ ಹೇಳುವಂತಿಲ್ಲ. ಈ ಕಡೆಗಳಲ್ಲೆಲ್ಲಾ ಹರಿದಾಡಿದುದಕ್ಕೆ ಅವರ ಕೃತಿಗಳೇ ಸಾಕ್ಷಿಯಾಗಿವೆ. ಅವರು ಉಡುಪಿಗೆ ಬಂದಾಗ ಕೀಳುಕುಲದವರೆಂದು ಕೃಷ್ಣದರ್ಶನ ಮಾಡಲು ಅವಕಾಶ ಸಿಕ್ಕಲಿಲ್ಲ. ಹಾಗಾದಾಗ ಕನಕದಾಸರು ನಿರಾಶರಾಗಲಿಲ್ಲ. ಅವರು ಕೃಷ್ಣದರ್ಶನಮಾಡಲು ಉತ್ಕಟೇಚ್ಛೆಯುಳ್ಳವರಾಗಿಯೇ ಬಂದಿದ್ದರು. ಆದ್ದರಿಂದ ಅವರು ತಮ್ಮನಿಶ್ಚಲಭಕ್ತಿಯಿಂದ ಗೋಡೆಯ ಹೊರಗೆ ನಿಂತು ಕೃಷ್ಣನನ್ನು ಸ್ತುತಿಸಿದರು. ಕನಕದಾಸರ ಅನನ್ಯ ಭಕ್ತಿಗೆ ಬೆರಗಾದ ಶ್ರೀಕೃಷ್ಣನು ಕನಕನ ಕಡೆಗೆ ತಿರುಗಿನಿಂತನು. ಎಂದರೆ ಪೂರ್ವಾಭಿಮುಖವಾಗಿದ್ದವನು ಪಶ್ಚಿಮಾಭಿಮುಖನಾದನು. ಕನಕದಾಸರು ನಿಂತೆಡೆಯಲ್ಲಿ ಗೋಡೆಯು ಒಡೆದುಬಿದ್ದಿತು. ಆ ಎಡೆಯಲ್ಲಿ ಒಂದು ಕಟಾಂಜನವು ನಿರ್ಮಿತವಾಗಿರುವುದು ಈಗಲೂ ಇದೆ. ಕೃಷ್ಣನೂ ಆ ಕಡೆಗೆ ನಿಂತಿದ್ದಾನೆ. ಇದೆಲ್ಲವನ್ನೂ ನೋಡಿದರೆ ಕನಕದಾಸರು ಎಂತಹ ಮಹಿಮಾನ್ವಿತ ವ್ಯಕ್ತಿಗಳೆಂಬುದು ಅರಿವಾಗುತ್ತದೆ. ಉಡುಪಿಗೆ ಬಂದಾಗ್ಗೆ ಅವರಿಗೆ ಹಲವಾರು ಕಷ್ಟಗಳು ಒದಗಿಬಂದರೂ ಹೆದರದೆ, ತಮ್ಮ ನಿಶ್ಚಲ ಭಕ್ತಿಯಿಂದ ಕೃಷ್ಣನ ಅನುಗ್ರಹಕ್ಕೆ ಪಾತ್ರರಾದರು. ಆದರಿಂದ ಅಲ್ಲಿಯ ಜನರ ಕಣ್ಣನ್ನು ತೆರೆಯಿಸಿದರು. ಆಗ ಅಲ್ಲಿಯ ಗುರುಗಳಾಗಿದ್ದ ವಾದಿರಾಜರು ಕನಕದಾಸರನ್ನು ಸತ್ಕರಿಸಿದರು. ಇಬ್ಬರೂ ಜೊತೆಯಲ್ಲಿಯೇ ಇದ್ದು ಭಜನೆ ಮುಂತಾದ ಕಾರ್ಯಗಳಲ್ಲಿ ಭಾಗ ವಹಿಸುತ್ತಿದ್ದರು.

ಕನಕದಾಸರು ಉಡುಪಿಯನ್ನು ಬಿಟ್ಟನಂತರ ಬೇಲೂರಿಗೆ ಬಂದರೆಂದು ತೋರುತ್ತದೆ. ಇಲ್ಲಿ ಹಲವಾರು ಹಾಡುಗಳನ್ನು ರಚಿಸಿದುದಲ್ಲದೆ ನಳಚರಿತ್ರೆ ಮತ್ತು ಹರಿಭಕ್ತಿಸಾರಗಳನ್ನು ಇಲ್ಲಿಯೇ ರಚಿಸಿರಬಹುದೆಂದು ಹೇಳುತ್ತಾರೆ. ಬೇಲೂರಿಗೆ ಬಂದಾಗ್ಗೆ ಅವರು ಅಲ್ಲಿಯ ಪ್ರಸಿದ್ಧ ದಾಸರಾದ ವೈಕುಂಠದಾಸರ ಮನೆಯಲ್ಲಿ ಊಳಿಗವನ್ನು ಮಾಡಿಕೊಂಡಿದ್ದರು. ಅದನ್ನು

"ಬಂಟನಾಗಿ ಬಾಗಿಲಕಾಯುವೆ ವೈ
ಕುಂಠದಾಸೋತ್ತಮ ದಾಸರ ಮನೆಯ"

ಎಂಬ ಹಾಡಿನಲ್ಲಿ ವಿವರಿಸಿದ್ದಾರೆ. ಇದು ವೈಕುಂಠದಾಸರಿಗೆ ತಿಳಿದ ಕೂಡಲೆ ಅವರ ಕೈಹಿಡಿದು ಏಕಾಂತಗೃಹಕ್ಕೆ ಕರೆದೊಯ್ದು ಅವರ ಊಳಿಗವನ್ನು ಕೈಕೊಂಡು ತಮಗೆ ಪ್ರಾಯಶ್ಚಿತ್ತವೇನೆಂದು ಚಿಂತಿಸಿ ದಾಸರನ್ನು ಉಪಚರಿಸಿದರು. ಕನಕ ದಾಸರು ಬಹುಕಾಲ ವಾಸಮಾಡಿದ ಸ್ಥಳಗಳಲ್ಲಿ ಬೇಲೂರೂ ಒಂದಾಗಿದೆ.

ಕನಕದಾಸರು ಬೇಲೂರನ್ನು ಬಿಟ್ಟಮೇಲೆ ಹಲವೆಡೆ ಸಂಚರಿಸಿರಬಹುದು. ಕರ್ಣಾಟಕದ ಎಲ್ಲ ಪ್ರಸಿದ್ಧ ಕ್ಷೇತ್ರಗಳನ್ನೂ ಸಂದರ್ಶಿದರೆಂದು ತೋರುತ್ತದೆ. ವ್ಯಾಸರಾಯರ ಶಿಷ್ಯರಾಗಿ ಪ್ರಸಿದ್ಧ ಹರಿದಾಸರಾದರೂ ಒಂದು ದಿನವೂ ಮೇನೆ ಪಲ್ಲಕ್ಕಿಗಳಲ್ಲಿ ಕುಳಿತವರಲ್ಲ. ಕಾಲು ನಡಗೆಯಲ್ಲೇ ಅಲೆದರು. ಬೇಲೂರನ್ನು ಬಿಟ್ಟನಂತರ ಮೇಲುಕೋಟೆಗೆ ಬಂದರು. ಅಲ್ಲಿ ಚೆಲುವರಾಯಸ್ವಾಮಿಯ ಮೇಲೆ ಅನೇಕ ಹಾಡುಗಳನ್ನು ಹಾಡಿದ್ದಾರೆ. ಅಲ್ಲಿಂದ ಮುಂದೆ ಇನ್ನೂ ಹಲವೆಡೆ ಸಂಚರಿಸಿರಬಹುದು.

"ಯಾಕೆ ನೀನಿಲ್ಲಿ ಪವಡಿಸಿದೆ ಹರಿಯೆ ಜಗ
ದೇಕ ವಿಖ್ಯಾತ ಪಶ್ಚಿಮ ರಂಗನಾಥ"

ಎಂಬುದರಿಂದ ಕನಕದಾಸರು ಮೇಲುಕೋಟೆಯಿಂದ ಶ್ರೀರಂಗಪಟ್ಟಣಕ್ಕೆ ಬಂದುದು ತಿಳಿಯುತ್ತದೆ. ಮುಂದೆ ನಂಜನಗೂಡು, ಮಳೂರು, ಮುಳಬಾಗಿಲು ಗಳನ್ನೂ ಸಂದರ್ಶಿಸಿದಂತೆ ಅವರ ಹಾಡುಗಳಿಂದ ತಿಳಿದುಬರುತ್ತದೆ.

ಒಟ್ಟನಲ್ಲಿ ಕನಕದಾಸರು ದಾಸಪಂಕ್ತಿಯಲ್ಲಿ ಶ್ರೇಷ್ಠ ಸ್ಥಾನವನ್ನು ಗಳಿಸಿ ಕೊಂಡರು. ಅವರು ಹಿರಿಯ ದಾಸರಾದುದಲ್ಲದೆ, ಉತ್ತಮ ಉಪದೇಶಕ ರಾಗಿದ್ದಾರೆ. ಶ್ರೇಷ್ಠ ಸಾಹಿತಿಯಾಗಿದ್ದಾರೆ. ಮೇಲಾಗಿ ಅವರು ತಮ್ಮ ಕೃತಿಗಳಲ್ಲಿ ಅಂದಿನ ಜನಜೀವನವನ್ನೂ ಅರಸರ ಆಳ್ವಿಕೆಯನ್ನೂ ಕರ್ಣಾಟಕದ ವೈಭವ ವನ್ನೂ ಹಿಡಿದಿಟ್ಟಿರುವುದಲ್ಲದೆ, ತಮ್ಮ ವ್ಯಕ್ತಿತ್ವವನ್ನು ತಮ್ಮ ಕೃತಿಗಳ ಮೂಲಕ ಅರಿಯಲು ಸಹಾಯಕರಾಗಿದ್ದಾರೆ. ಹೀಗಾಗಿ ಅವರು ಶ್ರೇಷ್ಠ ಸಾಹಿತಿಯಾದಂತೆ ಪ್ರಸಿದ್ಧ ಇತಿಹಾಸಕಾರರೂ ಆಗಿದ್ದಾರೆ.

# ಕನಕದಾಸರ ಕಾಣ್ಕೆ

## ಶ್ರೀ ಸಿದ್ಧಯ್ಯ ಪುರಾಣಿಕ

"ಪುಟ್ಟಿದಂದಿನಾರಭ್ಯ ಸುಖವೆಂಬುವುದನರಿಯೆ
ಕಷ್ಟಪಟ್ಟೆನು ಕೇಳೊ ಕೃಷ್ಣ!
ತೊಟ್ಟಿಲ ಶಿಶು ತಾಯ್ಗೆ ಬಾಯ್ಬಿಟ್ಟ ತೆರನಂತೆ ಕಂ
ಗೆಟ್ಟು ಶೋಕಿಪೆನೊ ಕೃಷ್ಣ!
ಮುಟ್ಟಲಮ್ಮರು ಎನ್ನ ಬಂಧುಗಳು ಕಂಡರೆ
ಅಟ್ಟಿಬಿಡುವುತಲಿಹರೊ ಕೃಷ್ಣ!
ದಟ್ಟ ದಾರಿದ್ರ್ಯವನು ಪರಿಹರಿಸದಿದ್ದರೆ
ಮುಟ್ಟುವುದು ದೂರು ನಿನಗೆ ಕೃಷ್ಣ!"

ಎಂದು ಆದಿಯಲ್ಲಿ ಅಳಲ ಕೊಳಲನ್ನೂದಿದ ಕನಕದಾಸರೇ ಕೊನೆಗೆ:

"ಬದುಕಿದೆನು ಬದುಕಿದೆನು ಭವವೆನಗೆ ಹಿಂಗಿತು
ಪದುಮನಾಭನ ಪಾದದೊಲುಮೆ ಎನಗಾಯ್ತು!
ಹರಿತೀರ್ಥಪ್ರಸಾದ ಜಿಹ್ವೆಗೆ ದೊರಕಿತು,
ಹರಿಯ ನಾಮಾಮೃತವು ಕಿವಿಗೊದಗಿತು,
ಹರಿದಾಸರು ಎನ್ನ ಬಂಧುಗಳಾದರು,
ಹರಿಯ ಶ್ರೀಮುದ್ರೆ ಆಭರಣವಾಯ್ತು!
ಮುಕ್ತರಾದರು ಎನ್ನ ನೂರೊಂದು ಕುಲದವರು,
ಮುಕ್ತಿಮಾರ್ಗಕೆ ಯೋಗ್ಯ ನಾನಾದೆನು,
ಅಕಳಂಕ ಶ್ರೀಹರಿಯ ಭಕ್ತಿಗೆ ಮನವೊಲಿದು
ರುಕುಮಿಣೀಯರಸ ಕೈವಶನಾದ ನನಗೆ!
ಇಂದೆನ್ನ ಜೀವಕ್ಕೆ ಸಕಲ ಸಂಪದವಾಯ್ತು,
ಮುಂದೆನ್ನ ಜನ್ಮ ಸಾಫಲ್ಯವಾಯ್ತು!
ತಂದೆ ಶ್ರೀ ಕಾಗಿನೆಲೆಯಾದಿಕೇಶವರಾಯ
ಬಂದೆನ್ನ ಹೃದಯದಲಿ ನೆಲೆಯಾಗಿ ನಿಂತ!"

ಎಂದು ಧನ್ಯತೆಯ ಕೈವಲ್ಯವೀಣೆಯನ್ನು ನುಡಿಸಿದರು. ಅದು ಸಾಧಕನ ಆರ್ತ ಧ್ವನಿಯಾದರೆ ಇದು ಸಿದ್ಧನ ಸಂತೃಪ್ತಿಯ ಸೊಲ್ಲು. ನಿಜ, 'ಅಕಳಂಕ ಶ್ರೀಹರಿಯ ಭಕ್ತಿಗೆ ಮನವೊಲಿದ' ಕನಕದಾಸರಿಗೆ 'ರುಕುಮಿಣೀಯರಸ ಕೈವಶನಾದ'ನು; 'ತಂದೆ ಶ್ರೀ ಕಾಗಿನೆಲೆಯಾದಿಕೇಶವರಾಯ ಬಂದು' ಅವರ 'ಹೃದಯದಲಿ ನೆಲೆಯಾಗಿ ನಿಂತ'.

ಅವರ ಸಾಧನೆಯ ಗುರಿಯೂ ಅದೇ ಆಗಿದ್ದಿತು: "ಮೊದಲು ನಿನ್ನ ಪಾದ ಪೂಜೆ । ಮುದದಿ ಮಾಡುವೆನು ನಾನು । ಹೃದಯದೊಳಗೆ ಹುದುಗಿಸಯ್ಯ ಮಧುಸೂದನ ॥ ಮದನನಯ್ಯ ನಿನ್ನ ಮಹಿಮೆ । ವದನದಲ್ಲಿ ಇರುವಹಾಗೆ

ಹೃದಯದಲ್ಲಿ ಸದನಮಾಡು। ಮುದದಿ ಶ್ರೀಧರ" ಎಂದಲ್ಲವೆ ಅವರು ಮತ್ತೆ ಮತ್ತೆ ಬೇಡಿಕೊಂಡುದು?

"ಊರಿಗೆ ಬಂದರೆ ದಾಸಯ್ಯ—ನಮ್ಮ
ಕೇರಿಗೆ ಬಾ ಕಂಡ್ಯ ದಾಸಯ್ಯ
ಆದಿನಾರಾಯಣ ದಾಸಯ್ಯ—ಒಂದು
ಸಾಸಿರನಾಮದ ದಾಸಯ್ಯ!
ಇರುಳು ಹಗಲು ನಿನ್ನ ಕಾಣದೆ ಇರಲಾರೆ
ಮರುಳುಮಾಡುವಂಥ ದಾಸಯ್ಯ!"

ಎಂದಲ್ಲವೇ ಅವರು ಪುನಃ ಪುನಃ ಪ್ರಾರ್ಥಿಸಿಕೊಂಡುದು? "ವೇದಶಾಸ್ತ್ರ ಪುರಾಣ ಪುಣ್ಯದ ಹಾದಿಯನು ನಾನರಿಯೆ; ತರ್ಕದ ವಾದದಲಿ ಗುರುಹಿರಿಯರರಿಯದ ಮೂಢಮತಿಯೆನಗೆ; ಆದಿಮೂರುತಿ ನೀನು ನೆರೆ ಕರುಣೋದಯನು; ಹೃದಯಾಂಗಣದಿ ಜ್ಞಾನೋದಯುವನೆನಗಿತ್ತು ರಕ್ಷಿಸು ನಮ್ಮನನವರತ!" ಎಂದಲ್ಲವೆ ಅವರು ಮರಳಿ ಮರಳಿ ಮೊರೆಹೊಕ್ಕುದು?

ಮಧುಸೂದನ 'ಹೃದಯದಲ್ಲಿ ಸದನಮಾಡು'ವ ಮೊದಲು 'ಹೃದಯಾಂಗಣದಿ ಜ್ಞಾನೋದಯ'ವಾಗಬೇಕು. 'ಏನು ಮಾಡಿದಡೇನು ಮುಕ್ತಿ ಜ್ಞಾನವಿಲ್ಲದಡಿಲ್ಲ'ವೆಂದುದನ್ನು ಅರಿತಿದ್ದ ಅವರು:

"ಮಣ್ಣು ಮಣ್ಣಿನೊಳುದಿಸಲದರಲಿ
ಮಣ್ಣು ಬೊಂಬೆಗಳಾಗಿ ರಂಜಿಸಿ
ಮಣ್ಣಿನಾಹಾರದಲಿ ಜೀವವ ಹೊರೆದು ಉಪಚರಿಸಿ
ಮಣ್ಣಿನಲಿ ಬಂಧಿಸಿದ ದೇಹವ
ಮಣ್ಣುಗೂಡಿಸಬೇಡ ಜ್ಞಾನದ
ಕಣ್ಣದೃಷ್ಟಿಯನಿತ್ತು ರಕ್ಷಿಸು ನಮ್ಮನನವರತ"

ಎಂದು ಕೇಳಿಕೊಳ್ಳದಿರಲಿಲ್ಲ. 'ತಾನ್ಯಾರೋ ತನ್ನ ದೇಹವ್ಯಾರೋ—ದಿವ್ಯ ಜ್ಞಾನದಿಂದ ತಿಳಿದವನೆ ಪರಮ ಯೋಗಿ'. ಆದುದರಿಂದ ಜ್ಞಾನದ ಕಣ್ಣು ಮೊದಲು ತೆರೆಯಬೇಕು. ಹೌದು, ಇದು ಮೊದಲು ಒದಗಬೇಕು.

"ಕಣ್ಣೆ ಕಾಮನ ಬೀಜ—ಈ
ಕಣ್ಣಿಂದಲೆ ನೋಡೊ ಮೋಕ್ಷಸಾಮ್ರಾಜ್ಯ
ಕಣ್ಣಿನ ಮೂರುತಿ ಬಿಗಿದು—ಒಳ
ಗಣ್ಣಿನಿಂದಲೆ ದೇವರ ನೋಡಣ್ಣ!"

ಈ ಒಳಗಣ್ಣಿನಿಂದ, ತಿಳಿಗಣ್ಣಿನಿಂದ ನೋಡಿದಾಗ 'ಎಲ್ಲಿ ನೋಡಿದರೆ ಅಲ್ಲಿ ರಾಮ!' ಎಂಥ ರಾಮ?

" ತಾಮರಸದಳನಯನ ಭಾರ್ಗವ
ರಾಮ ಹಲಧರರಾಮ ದಶರಥ
ರಾಮ ಮೇಘಶ್ಯಾಮ ಸದ್ಗುಣಧಾಮ ನಿಸ್ಸೀಮ
ಸಾಮಗಾನ ಪ್ರೇಮ ಕಾಂಚನ
ದಾಮಧರ ಸುತ್ರಾಮ ವಿರಚಿತ
ಕಾಮ ರವಿಕುಲ ಸೋಮ"

ನಾದ ರಾಮ. ಕೃಷ್ಣನು ಕಾಣಿಸುವುದಿಲ್ಲವೆ? ಅವನೂ ಕಾಣಿಸುತ್ತಾನೆ. ಅವರಿಬ್ಬರಲ್ಲಿ ಭೇದವೆಲ್ಲಿ? 'ದೇವ ದೇವ ಜಗದ್ಭರಿತ ವಸುದೇವಸುತ ಜಗದೇಕನಾಥ ರಮಾವಿನೋದಿತ ಸಜ್ಜನಾನತ ನಿಖಿಲಗುಣಭರಿತ ಭಾವಜಾರಿಪ್ರಿಯ ನಿರಾಮಯ ರಾವಣಾಂತಕ ರಘುಕುಲಾನ್ವಯ ದೇವ ಅಸುರವಿರೋಧಿ' ರಾಮನೂ ಅಹುದು, ಕೃಷ್ಣನೂ ಅಹುದು. ಎಂಥ ಕೃಷ್ಣ?

" ಕರದಲಿ ಕೊಳಲನು ಊದುತ ಪಾಡುತ
ಸರಿಗಮ ಪಧನಿ ಸ್ವರಗಳ ನುಡಿಸುತ
ಹರಿಹರ ಬ್ರಹ್ಮರು ನಲಿದಾಡುತಿರೆ—ತುಂ
ಬುರ ನಾರದರು ಪಾಡುತಿರೆ
ಪರಿಪರಿ ವಿಧದಲಿ ರಾಗವ ನುಡಿಸುತ
ತುರುಹಿಂಡುಗಳ ಕೂಡುತ ಪಾಡುತ
ತುರುಹಿಂಡುಗಳಾ ತರತರದಲಿ ತನ್ನ
ಕರದಿಂ ಲಾಲಿಸಿ ಸಂತೈಸುತಲಿ—ನಮ್ಮ
ಅರವಿಂದದಳನಯನ ಕೃಷ್ಣ!"

ಹರಿಹರಬ್ರಹ್ಮರು ಬೇರಾಗಿ ಕಂಡರೆ ಕನಕದಾಸರ ತಿಳಿಗಣ್ಣಿಗೆ? ಇಲ್ಲ:

" ಮೂರು ಗುಣ ಮೊಳೆದೋರಿತದರೊಳು
ಮೂರು ಮೂರ್ತಿಗಳಾಗಿ ರಂಜಿಸಿ
ತೋರಿ ಸೃಷ್ಟಿಸ್ಥಿತಿಲಯಂಗಳ ರಚಿಸಿ ವಿಲಯದಲಿ
ಮೂರು ರೂಪೊಂದಾಗಿ ಪ್ರಳಯದ
ವಾರಿಯಲಿ ವಟಪತ್ರ ಶಯನದಿ
ಸೇರಿದವ ನೀನೀಗ ರಕ್ಷಿಸು ನಮ್ಮನನವರತ"

ದೇವರ ಬಗ್ಗೆ ಎಂಥ ಕಾಣ್ಕೆ ಕನಕದಾಸರದು! ಇದೋ, ಕೇಳಿ:

" ಆರು ಬಲ್ಲರು ಹರಿಹರಾದಿಗಳ ಮಹಿಮೆಯನು ॥ ಪ ॥
ವಾರಿಜೋದ್ಭವ ಸುರೇಂದ್ರಾದಿಗಳಿಗಳವಲ್ಲ ॥ ಅ.ಪ. ॥

ಪೌರತ್ರಯವ ಗೆಲ್ವ ಸಮಯದಲಿ ತಪಮಾಡಿ
ನಾರಾಯಣಾಸ್ತ್ರವನು ಪಡೆದನೀಶ
ಗೌರೀಮನೋಹರನ ಘನತರಾರ್ಚನೆಗೈದು
ಚಾರುತರ ಚಕ್ರವನು ಪಡೆದನಾ ಶೌರಿ ॥

ಬಲಿಚಕ್ರವರ್ತಿ ಭಕ್ತಿಗೆ ಮೆಚ್ಚಿ ಆವನ ಬಾ-
ಗಿಲಕಾಯ್ದನಚ್ಯುತನು ಅನುಗಾಲದಿ
ಬಲುಭುಜನು ಬಾಣಾಸುರನ ಗೃಹದ್ವಾರವನು
ಬಳಸಿ ಕಾಯ್ದನು ಹರನು ವರವ ತಾನಿತ್ತು ॥

ಭೋಗಿ ಶಯನನು ಆಗಿ ಭೋಗಿಭೂಷಣನಾಗಿ
ವಾಗೀಶನಾಗಿ ಸೃಷ್ಟಿಸ್ಥಿತಿಲಯ
ಕ್ಕಾಗು ಕಾರಣ ಕಾರ್ಯಕರ್ಮಾದಿ ರೂಪಕ್ಕೆ
ಕಾಗಿನೆಲೆಯಾದಿಕೇಶವನ ಮಹಿಮೆಯನು ॥"

ಇಂಥ ಉದಾರದೃಷ್ಟಿಯ ಕನಕದಾಸರು "ಕೇಶವನೆಡೆಗೆನ್ನೆಡೆಗಾವನೋರ್ವನು । ದ್ವೇಷಬುದಿಯ ಮಾಡಿದರು । ದೋಷ ಸಂಭವಿಸುವುದೆಂದು ॥" ಧೂರ್ಜಟಿಯಿಂದ ಬಾಣಾಸುರನಿಗೆ ಹೇಳಿಸಿದುದು ಆಚ್ಚರಿಯಲ್ಲ. ತಮ್ಮ 'ಮೋಹನ ತರಂಗಿಣಿ'ಯಲ್ಲಿ ಇನ್ನೂ ಮುಂದುವರಿದು:

"ದಾಸನಾಗಬೇಕು ಸದಾಶಿವನ ದಾಸನಾಗಬೇಕು ॥ ಪ ॥
ದಾಸನಾಗಬೇಕು । ಕ್ಲೇಶಪಂಚಕವಳಿದು

ಆಶೆಯಲಿ ಮನ । ಸೂಸದೆ ಸರ್ವದಾ ॥ ಅ.ಪ. ॥

ಮನದ ಕಲ್ಮಷ ಕಳೆದು । ಮಹೇಶನ
ಮಹಿಮೆಗಳನು ಇನಿತು ತಿಳಿದು
ಈ ಜಗವೆಲ್ಲ ಈಶ್ವರಮಯವೆಂದು
ಘನವಾದ ಮೋಹದ ಗಡಿಯನು ದಾಟುತ
ದಾಸನಾಗಬೇಕು ಸದಾಶಿವನ ದಾಸನಾಗಬೇಕು"

ಎಂದು ಹಾಡಿದುದು ಅರಿದಲ್ಲ. 'ಈ ಜಗವೆಲ್ಲ ಈಶ್ವರಮಯವೆಂದು' ಅರಿತುಕೊಂಡ ಮೇಲೆ ಆರೊಡನೆ ವೈರ? ಇದನ್ನರಿಯದೆ ದೇವರ ಹೆಸರುಗಳಿಗಾಗಿ ಹೋರಾಡುವ ವೇಷಧಾರಿಗಳನ್ನು, ದಾಂಭಿಕರನ್ನು, ಬಾಹ್ಯಾಡಂಬರದ ದೊಂಬರನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸುತ್ತಾರೆ ಕನಕದಾಸರು—

"ತೀರ್ಥವನು ಪಿಡಿದವರೆಲ್ಲ ತಿರುನಾಮಧಾರಿಗಳೆ, ಜನ್ಮ
ಸಾರ್ಥಕವಿಲ್ಲದವರೆಲ್ಲ ಭಾಗವತರೇ? ॥ ಪ ॥

ಮೂಗ್ಹಿಡಿದು ನೀರೊಳಗೆ ಜಪತಪವ ಮಾಡಿ
ವೇದಶಾಸ್ತ್ರಪುರಾಣಗಳನೋದಿ ತಿಳಿದು
ಬಾಗಿ ಪರಸ್ತ್ರೀಯರಿಗೆ ಭ್ರಮಿಸಿ ಕಣ್ಣಿಡುವಂಥ
ನೀತಿತಪ್ಪಿದವರೆಲ್ಲ ದೇವಬ್ರಾಹ್ಮಣರೇ ಕೃಷ್ಣಾ? ॥

ಪಟ್ಟೆನಾಮುವ ಬಳಿದು ಪಾತ್ರೆ ಕೈಯಲಿ ಹಿಡಿದು
ಗುಟ್ಟಿನಲಿ ರಹಸ್ಯವ ಗುರುತರಿಯದೆ
ಕೆಟ್ಟ ಕೂಗನು ಕೂಗಿ ಬೊಗಳಿ ಬಾಯಾರುವಂಥ
ಹೊಟ್ಟೆಗುಡ ಮೃಗಗಳೆಲ್ಲ ಶ್ರೀವೈಷ್ಣವರೆ ಕೃಷ್ಣಾ ? ॥

ಅಂಗಲಿಂಗದೊಳಗಿರುವ ಚಿನ್ಮಯವ ತಿಳಿಯದಲೆ
ಲಿಂಗಾಂಗದ ನೆಲೆಯ ಗುರುತರಿಯದೆ
ಜಂಗಮಸ್ಥಾವರದ ಭಾವವನು ತಿಳಿಯದೆ
ಭಂಗಿಮುಕ್ಕಗಳೆಲ್ಲ ಲಿಂಗವಂತರಹರೆ ಕೃಷ್ಣಾ ? ॥

ಅಲ್ಲಾ ಖುದಾ ಎಂದು ಆತ್ಮದಲಿ ತಿಳಿಯದೆ
ಮುಲ್ಲಾ ಶಾಸ್ತ್ರದ ನೆಲೆಯ ಗುರುತರಿಯದೆ
ಜೊಳ್ಳು ಕೂಗನು ಕೂಗಿ ಬೊಗಳಿ ಬಾಯಾರುವಂಥ
ಕಳ್ಳ ತುರುಕರಿಗೆಲ್ಲ ವೀರಸ್ವರ್ಗವುಂಟೆ ಕೃಷ್ಣಾ ? ॥

ಹಾಸ್ಯಗಳನು ಕಲಿತು ಘೋಷಾ ವಸ್ತ್ರಗಳ್ಹಾಕಿ
ಆಸೆಗಳ ತೊರೆದೆವೆಂದು ತಪಸು ಕುಳಿತು
ವಾಸುವೆಯ ಗುರುಕೃಪಾ ಗುರುತರಿಯದಂಥ
ವೇಷಧಾರಿಗಳೆಲ್ಲ ಸನ್ಯಾಸಿಗಳಾಗಬಲ್ಲರೆ ಕೃಷ್ಣಾ ? ॥

ಆರು ಚಕ್ರದ ನೆಲೆಯ ಅಷ್ಟಾಂಗಯೋಗದಲಿ
ಮೂರು ಮೂರ್ತಿಯ ಮೂರು ಕಡೆಯೊಳಿರಿಸಿ
ಮಾರನಯ್ಯ ಕಾಗಿನೆಲೆಯಾದಿ ಕೇಶವನ
ಸಾರಿ ಭಜಿಸಿದವರಿಗೆ ಮನದ ಕೊರತೆಯುಂಟೆ ? ॥"

'ಮನದ ಕೊರತೆ' ಯಿದ್ದವರು ಶೈವರಾದರೇನು, ವೈಷ್ಣವರಾದರೇನು, ಮಹಮ್ಮದೀಯರಾದರೇನು, ಕ್ರೈಸ್ತರಾದರೇನು, ಇನ್ನಾರಾದರೇನು? ಅವರೆಲ್ಲ 'ಜೊಳ್ಳು ಕೂಗನು ಕೂಗಿ ಬಳಲಿ ಬಾಯಾರುವಂಥ' ವೇಷಧಾರಿಗಳು. ಅರಿವಿನ ಕೊರತೆಯಿಂದ ಮನದ ಕೊರತೆ, ಮನದ ಕೊರತೆಯಿಂದ 'ಸತ್ಯಸುಖ' ದ ಕೊರತೆ. ಆದುದರಿಂದ ಅರಿವಿನ ಕಣ್ಣು ಮೊದಲು ತೆರೆಯಬೇಕು. ಆಗ ಹಲವು ನಾಮಗಳುಳ್ಳ ದೇವನೊಬ್ಬನೇ ಎಂಬುದು ಹೊಳೆಯುವುದು; ಅವನ ಮಕ್ಕಳು ಯಾವ ವರ್ಣದವರೇ ಇರಲಿ, ಯಾವ ಉದ್ಯೋಗದವರೇ ಇರಲಿ, ಯಾವ ಕುಲದವರೇ ಇರಲಿ—ಮೂಲತಃ ಒಂದೇ ಎಂಬುದು ತಿಳಿಯುವುದು. ಹೀಗೆ ತಿಳಿದವರಿಗೆ ಕುಲವಾವುದೂ ಇಲ್ಲ. 'ಕುಲಕುಲ ಕುಲವೆನ್ನುತಿಹರೊ, ಕುಲಯಾವುದು ಸತ್ಯಸುಖ ಸಜ್ಜನರಿಗೆ?....ಆತನೊಲಿದವ್ಯಾಲೆ ಯಾತರ ಕುಲವೊ ?' 'ಕುಲ ಕುಲ ಕುಲವೆಂದು ಹೋರಾಡದಿರಿ ನಿಮ್ಮ ಕುಲದ ನೆಲೆಯ ನೇನಾದರು ಬಲ್ಲಿರಾ? ಹುಟ್ಟದ ಯೋನಿಗಳಿಲ್ಲ ಮೆಟ್ಟದ ಭೂಮಿಗಳಿಲ್ಲ, ಅಟ್ಟು

ಉಣ್ಣದ ವಸ್ತುಗಳಿಲ್ಲ!' ಇಂದು ಈ ಕುಲದಲ್ಲಿರುವಿರಿ; ಹಿಂದೆ ಯಾವ ಯಾವ ಕುಲದಲ್ಲಿ ಹುಟ್ಟಿದ್ದಿರಿ, ಯಾವ ಯಾವ ಭೂಮಿಯಲ್ಲಿ ಹುಟ್ಟಿದ್ದಿರಿ, ಏನೇನು ಭುಂಜಿಸಿದ್ದಿರಿ ಹೇಳಬಲ್ಲಿರಾ? ಏಕೆ ಈ ಜನ್ಮದ ಕುಲದ ಛಲ? ಉದ್ಯೋಗವೆ? 'ಎಲ್ಲರೂ ಮಾಡುವುದು ಹೊಟ್ಟೆಗಾಗಿ—ಗೇಣು ಬಟ್ಟೆಗಾಗಿ!' ಯಾವ ಉದ್ಯೋಗ ಮಾಡಿದರೂ ಗುರಿ ಒಂದೇ: ಹೊಟ್ಟೆ, ಬಟ್ಟೆ! ಅದರಲ್ಲಿ ಹಿರಿದು ಕಿರಿದೆಲ್ಲಿ ಬಂತು? ವರ್ಣವೆ?

'ಕಾಲ ಕರ್ಮದೊಳುಪೇಕ್ಷೆ ಮಾಡಿ ಹರಿ ಭಕುತಿ
ಶೀಲರಹಿತ ಬ್ರಾಹ್ಮಣನಾಗಲೊಲ್ಲೆ
ಕೀಲನರಿತು ಭಕುತಿ ಮಾಳ್ಪ ಚಂ-
ಡಾಲನ ಮನೆಯ ಬಾಗಿಲ ಕಾಯಿಸೆನ್ನ!'

ಹೊಲೆಯೆ?

"ತೊಲಗುವರು ಕಡೆಕಡೆಗೆ ತಾ ಹೊಲೆ
ಹೊಲೆಯೆನುತ ಕಳವಳಿಸಿ ಮೂತ್ರದ
ಬಿಲದೊಳಗೆ ಬಂದಿಹುದ ಕಾಣದೆ ಬರಿದೆ ಮನನೊಂದು
ಜಲದೊಳಗೆ ಮುಳುಗಿದರೆ ತೊಲಗದು
ಹೊಲೆಗೆಲಸ ವೀ ದೇಹದೊಳು ನೀ
ನೆಲೆಸಿರಲು ಹೊಲೆಯುಂಟೆ? ರಕ್ಷಿಸು ನಮ್ಮನನವರತ!"

ಹೀಗಿದ್ದೂ ಯಾತಕ್ಕೆ ಮಾತು ಮಾತಿಗೆ ಯಾತರವರೆಂದು ಕೇಳುವಿರಿ? ಯಾತರವನೆಂದು ಹೇಳಬೇಕು?

"ಯಾತರವನೆಂದುಸುರಲಿ? ಜಗನ್ನಾಥ ಮಾಡಿದನು ನರಜನ್ಮವ!
ಇಂದ್ರಿಯದ ಸೂತಕ ಮಲ ಮೂತ್ರ ದುರ್ಗಂಧ-
ದಿಂದಲಿ ಬಂದೆನು ನಿಜವರಿಯದೆ
ಬಂದದ್ದು ಮೂತ್ರಕುಳಿ ತಿಂದದ್ದು ಮೊಲೆಮಾಂಸ
ಹಿಂದೆ ಹೀಗಿರಲದಿನ್ನೇತರ ಕುಲವಯ್ಯ?"

ಈ ಹಾಳು ಮಾತುಗಳಲ್ಲಿ ಹೊತ್ತುಗಳೆಯದಿರಿ. ಇರುವ ಆಯುಷ್ಯವೇ ಸ್ವಲ್ಪ. ಅದರಲ್ಲಿ ಬಾಲ್ಯದಲ್ಲಿಷ್ಟು, ವಾರ್ಧಕ್ಯದಲ್ಲಿಷ್ಟು, ನಿದ್ರೆಯಲ್ಲಿಷ್ಟು, ರೋಗದಲ್ಲಿಷ್ಟು ಕಳೆದು ಹೋಗಿ ಉಳಿವುದೆಷ್ಟು?

"ವರುಷ ನೂರಾಯುಷ್ಯವದರೊಳ
ಗಿರುಳು ಕಳೆದೈವತ್ತು ಐವ
ತ್ತರಲಿ ವಾರ್ಧಿಕ ಬಾಲ್ಯ ಕೌಮಾರದಲಿ ಮೂವತ್ತು
ಇರದೆ ಸಂದುದು ಬಳಿಕವಿಪ್ಪ
ತ್ತ್ವರುಷ!"

ಈ ಇಪ್ಪತ್ತು ವರ್ಷಗಳನ್ನೂ ವ್ಯರ್ಥವಾದಗಳಲ್ಲಿ ಕಳೆಯಬೇಡ. ಇಷ್ಟು ಕಾಲವಾದರೂ ಚೆನ್ನಾಗಿ ಬದುಕು. ಬಾಳಿನಲ್ಲಾವ ಸೊಗವಿದೆ?

"ಕೇಳುವುದು ಕಡುಕಷ್ಟ ಕಷ್ಟದ
ಬಾಳುವೆಯು! ಬದುಕೇನು ಸುಡುಸುಡು
ಗಾಳಿಗೊಡ್ಡಿದ ಸೊಡರು ಈ ಸಂಸಾರದೇಳಿಗೆಯು!
ಬಾಳಬೇಕೆಂಬವಗೆ ನೆರೆ ನಿ
ನ್ನೂಳಿಗವ ಮಿಗೆ ಮಾಡಿ ಭಕ್ತಿಯೊ-
ಳಾಳಿ ಬದುಕುವುದುಚಿತ!"

"ನಿನ್ನ ನಾಮಾವಳಿಯ ಜಿಹ್ವೆಗೆ ತಂದು ಪಾಪವ ಕಳೆದ ಬದುಕೇ ಲೇಸು!" ಇದು ಕನಕದಾಸರ ಸಂದೇಶ. ಈ ಹುದುವಾಳಿಕೆಗೆ ಎಲ್ಲರನ್ನೂ ಕರೆಯುತ್ತಾರೆ ಕನಕದಾಸರು. ಒಬ್ಬನೇ ಪರಮಾತ್ಮ, ಒಂದೇ ಮನುಕುಲ, ಒಂದೇ ದಾರಿ ಲೇಸಿನ ಬದುಕಿಗೆ: ಅವನ ಊಳಿಗ ಮಾಡಬೇಕು, ಭಕ್ತಿಮಾರ್ಗದಲ್ಲಿ ಮುನ್ನಡೆಯಬೇಕು. ಭಕ್ತಿಯೆಂದರೆ ಪರಮಾತ್ಮನನ್ನು ಪ್ರೀತಿಸುವುದಷ್ಟೇ ಅಲ್ಲ; ಪರಮಾತ್ಮನ ಮಕ್ಕಳನ್ನೂ ಅವರಿವರೆನ್ನದೆ ಪ್ರೀತಿಸುವುದು, ಅವರಿಗೆ ನೆರವಾಗುವುದು:

"ಪರರ ದುಃಖವ ಪರಿಹರಿಸಿ ಮಿಗೆ
ಪರರಿಗುಪಕಾರಾರ್ಥವೆಸಗಲು
ಪರಮಪುಣ್ಯವದು" (ನಳಚರಿತ್ರೆ: ೨–೪೯)

ಆದುದರಿಂದ,

"ಮೀಸಲು ಊಳಿಗವನ್ನು ಮಾಡುವೆನು
ಶೇಷ ಬ್ರಹ್ಮಾದಿ ವಂದಿತನಾದ ನಮ್ಮ
ವಾಸುದೇವ ಆದಿಕೇಶವರಾಯನ
ದಾಸ ದಾಸ ದಾಸ ದಾಸರ ಮನೆಯ!"

ವಾಸುದೇವನ ದಾಸರ ದಾಸರ ದಾಸರ ಮೀಸಲು ಊಳಿಗವೇ ಲೇಸಾಗಿ ಬಾಳುವ ದಾರಿ. ಆದರಿಂದಲೇ ಅವನೊಲುಮೆಯೂ ದೊರೆಯುವುದು. ಹರಿಯ ಸೇವೆ ಸಿಕ್ಕಬಹುದು; ಹರಿದಾಸರ ಸೇವೆ ಸುಲಭವಾಗಿ ಸಿಕ್ಕದು. ಇದನ್ನು ಮೊದಲು ಮಾಡು. ಇದರ ಮೂಲಕವೇ ಪದುಮನಾಭನ ಪದಪದ್ಮವನ್ನು ಸೇರು. ಇದನ್ನು ಮಾಡದೆ ಜಪವ ಮಾಡಿದರೇನು, ತಪವ ಮಾಡಿದರೇನು, ಕಪಟಗುಣ ವಿಪರೀತ ಕಲುಷವಿದ್ದವರು?

ಮಾನವಪ್ರೇಮವೇ ಭಗವದ್ಭಕ್ತಿಯ ಒರೆಗಲ್ಲು. 'ನೀನಾರಿಗಾದೆಯೋ ಎಲೆಮಾನವ?' ಎಂದು ಗೋವು ಕೇಳುವಂತೆ ಪರಮಾತ್ಮನೂ ಕೇಳುತ್ತಾನೆ.

ಜನರಿಗೆ ಆಗದೆ ಭಕ್ತಿ ಸಫಲವಾಗದು. ಅದರಲ್ಲಿಯೂ ತಿರಸ್ಕೃತರಿಗೆ, ವಂಚಿತರಿಗೆ, ದುರ್ಬಲರಿಗೆ, ಪರಿತ್ಯಕ್ತರಿಗೆ ಪಾಮರರಿಗೆ ಮೊದಲು ಆಗಬೇಕು.* ಅವರಿಗಾಗುವ ಭಕ್ತನೇ ಹಿರಿಯ ಭಕ್ತ; ಅವರಿಗಾಗುವ ರಾಗಿಯೇ ಸಿರಿವಂತರಿಗಾಗುವ ಅಕ್ಕಿಗಿಂತ ಶ್ರೇಷ್ಠವಾದುದು. (ರಾಮಧಾನ್ಯಚರಿತೆ ನೋಡಿರಿ). ಹೀಗೆ ಸಾಮಾನ್ಯರ ಸೇವೆಯೇ ಶ್ರೀ ಹರಿಯ ಸೇವೆಯೆಂದು ನಂಬಿ ನಡೆದವರು ಕನಕದಾಸರು. (ಈಗಲೀ ಮರ್ಯಾದೆಯಲಿ ಶರಣಾಗತರ ಸೇವೆಯಲಿ ಹೊಂಪುಳಿಯಾಗಿ ಬಾಳುವರೇನು ಧನ್ಯರೊ ಹರ ಮಹಾದೇವ—ಹರಿಕಥಾಮೃತಸಾರ : ೧೭).

ಜ್ಞಾನವಾಯಿತು, ಮಾನವ ಪ್ರೇಮದಲ್ಲಿ ಪ್ರಕಟವಾಗುವ ಭಗವದ್ಭಕ್ತಿಯಾಯಿತು. ಆದರೂ ನಾನೆಂಬುದು ಉಳಿಯಿತು. 'ನಾನು' ಹೋಗದೆ ವೈಕುಂಠಕ್ಕೆ ಯಾರೂ ಹೋಗರೆಂದು ಸಾರಿದ ಕನಕದಾಸರು ಈ 'ನಾನು' ಎಂಬುದನ್ನು ಉಳಿಸಿಕೊಳ್ಳುವರೆ? ಅದೊಂದಿದ್ದರೆ ಜ್ಞಾನ ಭಕ್ತಿಗಳೆರಡೂ ವ್ಯರ್ಥವಾಗುವುವೆಂಬುದನ್ನು ಅರಿಯರೆ ಅವರು? ಆದುದರಿಂದಲೇ ಜ್ಞಾನ ಭಕ್ತಿಗಳಿಗೆ ಪೂರಕವಾಗಿ ಅರ್ಪಣ ತತ್ತ್ವವನ್ನೂ ಆಲಿಂಗಿಸಿದರು ಅವರು :

'ಮನವಚನದಿ ಮಾಡಿದ ಪುಣ್ಯಪಾಪಗಳ
ನಿನಗರ್ಪಿಸುವೆನು ಕಾಲಕಾಲದಲಿ,'

ಎಂದು ನಿವೇದಿಸಿಕೊಂಡರು.

"ನಿನ್ನ ಸೂತ್ರದೊಳಾಡುವುವು ಜೈ
ತನ್ಯ ಸಚರಾಚರಗಳೆಲ್ಲವು
ನಿನ್ನ ಸೂತ್ರವು ತಪ್ಪಿದರೆ ಮುಗ್ಗುವುವು ಹೂಹೆಗಳು
ಇನ್ನು ನಮಗೆ ಸ್ವತಂತ್ರವೆಲ್ಲಿಯ
ದನ್ಯ ಕರ್ಮ ಸುಕರ್ಮವೆಲ್ಲವ
ನಿನ್ನದೆಂದೊಪ್ಪಿಸಿದೆ ರಕ್ಷಿಸು ನಮ್ಮನನವರತ,"

ಎಂದು ಬಿನ್ನವಿಸಿಕೊಂಡರು. ಇನ್ನೂ ಮುಂದುವರಿದು :

'ತನು ನಿನ್ನದು ಜೀವನ ನಿನ್ನದೋ ॥ ಪ ॥
ಅನುದಿನದಲಿ ಬಾಹ ಸುಖದುಃಖ ನಿನ್ನದಯ್ಯ ! ॥ ಅ.ಪ. ॥

ಸವಿನುಡಿ ವೇದ ಪುರಾಣ ಶಾಸ್ತ್ರಂಗಳ
ಕಿವಿಯಲ್ಲಿ ಕೇಳುವ ಕಥೆ ನಿನ್ನದೋ
ನವಮೋಹನಾಂಗಿಯರ ರೂಪವ ಕಣ್ಣಿಂದ
ಎವೆಯಿಕ್ಕದೆ ನೋಡಿದ ನೋಟ ನಿನ್ನದಯ್ಯ !

* "ಜಾತಿ ಜಾತಿಗಳಲ್ಲಿ ತಿರಸ್ಕೃತರಾದವರಿಗೆ ಪುರಸ್ಕಾರ ಕೊಟ್ಟವರು ಕನಕದಾಸರು. ತಿರಸ್ಕಾರ ಶಬ್ದಕ್ಕೇ ತಿರಸ್ಕಾರ ಕೊಟ್ಟವರು ಕನಕದಾಸರು."—ಶ್ರೀ ಕರ್ಣಾಟಕ ಭಕ್ತ ವಿಜಯ: ಪು. ೩೧೫.

ಒಡಗೂಡಿ ಗಂಧ ಕಸ್ತೂರಿ ಪರಿಮಳಗಳ
ಬಿಡದೆ ಲೇಪಿಸಿಕೊಂಡ ಸುಖ ನಿನ್ನದೋ
ಷಡುರಸದನ್ನಕ್ಕೆ ನಲಿದಾಡುವ ಜಿಹ್ವೆ
ಕಡುರುಚಿಗೊಂಡರೆ ಆ ರುಚಿ ನಿನ್ನದಯ್ಯ !

ಮಾಯಾಪಾಶದ ಬಲೆಯೊಳಗೆ ಸಿಲ್ಕಿರುವಂಥ
ಕಾಯ ಪಂಚೇಂದ್ರಿಯಗಳು ನಿನ್ನವೋ
ನ್ಯಾಯದಿ ಕನಕನೊಡೆಯನಾದಿಕೇಶವ
ರಾಯ ನೀನಲ್ಲದೆ ನರರ ಸ್ವತಂತ್ರವೆ ?'

ಎಂದು ಪ್ರಶ್ನಿಸಿದರು. 'ಬುದ್ಧಿಯುಕ್ತೋ ಜಹಾತೀಹ ಉಭೇ ಸುಕೃತ ದುಷ್ಕೃತೇ' ಎಂಬ ಗೀತೋಕ್ತಿಯಂತೆ ಕನಕದಾಸರೂ 'ಮನವಚನದಿ ಮಾಡಿದ ಪುಣ್ಯಪಾಪಗಳ ನಿನಗರ್ಪಿಸುವೆನು' ಎಂದು ಅದರಂತೆ ಆಚರಿಸಿದರು. ಭಗವಂತನನ್ನು ಅರಿತುಕೊಳ್ಳುವುದು, ಭಗವಂತನ ಮಕ್ಕಳನ್ನೂ ಅವನನ್ನೂ ಪ್ರೀತಿಸುವುದು, ಎಲ್ಲವನ್ನೂ ಭಗವಂತನಿಗೆ ಅರ್ಪಿಸುವುದು—ಈ ಮೂರೂ ಅವರ ಕಾಣ್ಕೆಯ ಮೂರು ಮುಖಗಳು. ಅರಿವು, ಒಲವು, ಅರ್ಪಣ—ಎಂಥ ಕಾಣ್ಕೆಯಿದು !

'ನೀರು ಶುಕ್ತಿಯು ಸೇರಿ ತೋರ ಮುತ್ತಾದ ಪರಿ
ಸೇರಿಸೋ ನಿನ್ನಂಘ್ರಿ ಹರಿಯೇ !'

ಎಂದು ಕೇಳಿಕೊಂಡಿದ್ದರು ಕನಕದಾಸರು. ಅವರು ಭಗವದಂಘ್ರಿಯ ಶುಕ್ತಿಯನ್ನು ಸೇರಿ ತೋರ ಮುತ್ತಾದರು. ಅವರಿತ್ತ ಕಾಣ್ಕೆಯೂ ತೋರ ಮುತ್ತೇ. ಈ ಮುತ್ತು ಕೊಳ್ಳಿ :

"ಮುತ್ತು ಬಂದಿದೆ ಕೇರಿಗೆ—ಜನರು ಕೇಳಿ
ಮುತ್ತು ಬಂದಿದೆ ಕೇರಿಗೆ
ಭಕ್ತಿಯುಳ್ಳವರೆಲ್ಲ ಕಟ್ಟಿಕೊಳ್ಳಿ ಸೆರಗಿನಲ್ಲಿ
ಮುತ್ತು ಬಂದಿದೆ ಕೇರಿಗೆ !

ಥಳಥಳಿಸುವ ಮುತ್ತು
ಕಲುಷಪರ್ವತಕಿದು
ಕುಲಿಶವಾಗಿಪ್ಪ ಮುತ್ತು
ಭಕ್ತಿಯುಳ್ಳವರೆಲ್ಲ
ಕಟ್ಟಿಕೊಳ್ಳಿ ಸೆರಗಿನಲ್ಲಿ !"

# ಕನಕದಾಸರ ಅನುಭಾವ ದೃಷ್ಟಿ

ಶ್ರೀ ಬಿ. ಶಿವಮೂರ್ತಿ ಶಾಸ್ತ್ರೀ

ಕನ್ನಡ ಸಾಹಿತ್ಯದ ವಿಖ್ಯಾತ ಕವಿಗಳಲ್ಲಿ ಕನಕದಾಸರ ಹೆಸರು ಹಲವಾರು ಕಾರಣಗಳಿಂದ ಗಣ್ಯವಾಗಿದೆ. ಇವರು ನಳಚರಿತ್ರೆ, ಮೋಹನತರಂಗಿಣಿ, ರಾಮ ಧಾನ್ಯಚರಿತೆ ಎಂಬ ಕಾವ್ಯಗಳನ್ನೂ, ಹರಿಭಕ್ತಿಸಾರ, ನರಸಿಂಹಸ್ತವನ ಮತ್ತು ಕೀರ್ತನೆಗಳು ಎಂಬ ಭಕ್ತಿ ಗೀತೆಗಳನ್ನೂ ಬರೆದು ಕನ್ನಡಿಗರಿಗೆ ಮಹೋಪಕಾರ ಮಾಡಿದ್ದಾರೆ. ಮೊದಲ ಮೂರು ಗ್ರಂಥಗಳು ಸಾಹಿತ್ಯ ಪ್ರಧಾನವಾಗಿಯೂ, ಅನಂತರದ ಮೂರು ಗ್ರಂಥಗಳು ಅನುಭಾವ ಪ್ರಧಾನವಾಗಿಯೂ ಇವೆ. ಈ ಆರು ಗ್ರಂಥಗಳಲ್ಲಿ ಐದು ಗ್ರಂಥಗಳು ಪ್ರಕಟವಾಗಿವೆ. ನೃಸಿಂಹಸ್ತವನ ಮಾತ್ರ ಬೆಳಕಿಗೆ ಬಂದಿಲ್ಲ. ಆದರೆ ಕವಿಚರಿತ್ರೆಕಾರರಿಗೆ ಈ ಗ್ರಂಥ ಸಿಕ್ಕಿತ್ತೆಂದು ತಿಳಿದುಬಂದಿದೆ. ಕನಕದಾಸರ ಗ್ರಂಥಗಳು ನಿಜಗುಣರು, ಪುರಂದರದಾಸರು, ಸರ್ಪಭೂಷಣರ ಕೃತಿಗಳಂತೆ ಕನ್ನಡ ನಾಡಿನಲ್ಲೆಲ್ಲಾ ಪ್ರಸಾರವಾಗಿವೆ. ಸಂಗೀತ-ಸಾಹಿತ್ಯ-ವೇದಾಂತವೆಂಬ ತ್ರಿವೇಣೀ ಸಂಗಮದಿಂದ ಕೂಡಿವೆ.

ಹನ್ನೆರಡನೇ ಶತಕದಲ್ಲಿ ಕನ್ನಡದಲ್ಲಿ ತಲೆಯೆತ್ತಿದ ಶಿವಶರಣರ ವಚನ ಶಾಸ್ತ್ರದಂತೆಯೇ ಹದಿನಾರನೇ ಶತಕದಲ್ಲಿ ಪ್ರಖ್ಯಾತವೆನಿಸಿದ ಹರಿದಾಸರ ಸಾಹಿತ್ಯ ಕೂಡ ಹಲವಾರು ಕಾರಣಗಳಿಂದ ಗಣ್ಯವಾದುದು. ವಚನಶಾಸ್ತ್ರ ಕಾರರಲ್ಲಿ ಭಕ್ತಿಗೆ ಬಸವಣ್ಣ, ಜ್ಞಾನಕ್ಕೆ ಚೆನ್ನಬಸವಣ್ಣ, ವೈರಾಗ್ಯಕ್ಕೆ ಪ್ರಭು ದೇವರು ಪ್ರಮುಖರೆನಿಸಿದಂತೆ ದಾಸಸಾಹಿತ್ಯದಲ್ಲಿ ಕೂಡ ಭಕ್ತಿಗೆ ಪುರಂದರ ದಾಸರು, ಜ್ಞಾನಕ್ಕೆ ಜಗನ್ನಾಥದಾಸರು, ವೈರಾಗ್ಯಕ್ಕೆ ಕನಕದಾಸರು ಹಿರಿಯ ರೆನಿಸಿದ್ದಾರೆ. ಅದರಲ್ಲಿಯೂ ಕನಕದಾಸರು ಮಹಾ ಕವಿಗಳೂ ಅನುಭಾವಿಗಳೂ ಪವಾಡ ಪುರುಷರೂ ಭಗವಂತನನ್ನು ಪ್ರತ್ಯಕ್ಷ ಮಾಡಿಕೊಂಡ ಭಾಗ್ಯಶಾಲಿಗಳೂ ಎನಿಸಿದ್ದಾರೆ. ದಾಸಕೂಟದಲ್ಲಿ ಕನಕದಾಸರು ಧ್ರುವನಕ್ಷತ್ರದಂತೆ ಕಂಗೊಳಿಸುತ್ತಾ ಭಾಗವತೋತ್ತಮರೆನಿಸಿದ್ದಾರೆ. ಕನಕದಾಸರು ೧೬ ನೆಯ ಶತಕದಲ್ಲಿ ಬಾಳಿ ಬದುಕಿದವರು; ಪುರಂದರದಾಸರು, ವ್ಯಾಸರಾಯರು, ವಾದಿರಾಜರು, ವೈಕುಂಠ ದಾಸರು, ತಾತಾಚಾರ್ಯರು ಮೊದಲಾದ ಮಹಾ ತತ್ತ್ವಜ್ಞಾನಿಗಳ ಸಮ ಕಾಲೀನರು. ಮಾಧ್ವಮತ ಹಾಗೂ ರಾಮಾನುಜ ಮತಗಳ ಸಾರಸರ್ವಸ್ವವನ್ನು ಅರಿತವರು. ಜನ್ಮತಃ ಅಬ್ರಾಹ್ಮಣರಾದ ಕಾರಣ ಕೇವಲ ಭಾಗವತಪಂಥವನ್ನು ಅನುಸರಿಸಿದವರು. ವಿಜಯನಗರದ ಮಹಾ ವೈಭವವನ್ನು ಕಣ್ಣಾರ ಕಂಡವರು. ಕೃಷ್ಣದೇವರಾಯ, ಅಚ್ಯುತರಾಯರ ಆಡಳಿತವನ್ನು ಕಣ್ಣಾರ ಕಂಡವರು.

ಶ್ರೀ ತಿರುಪತಿ, ಬೇಲೂರು, ಶ್ರೀರಂಗಪಟ್ಟಣ, ಉಡುಪಿ ಮೊದಲಾದ ಕ್ಷೇತ್ರಗಳನ್ನು ಸಂಚರಿಸಿದವರು. ಮಿಗಿಲಾದ ಲೋಕಾನುಭವ ಹಾಗೂ ಶಾಸ್ತ್ರ ಪಾಂಡಿತ್ಯಗಳನ್ನು ಪಡೆದವರು. ಎಲ್ಲಕ್ಕೂ ಮಿಗಿಲಾಗಿ ಭಗವಂತನ ಅನುಗ್ರಹಕ್ಕೆ ಪಾತ್ರರಾದವರು. ಆದ್ದರಿಂದಲೇ ಕಾರಣಪುರುಷರು, ಅನುಭಾವಿಗಳು, ಲೋಕೋದ್ಧಾರಕರು.

ಕನಕದಾಸರು ಧಾರವಾಡ ಜಿಲ್ಲಾ ಬಾಡ ಗ್ರಾಮದಲ್ಲಿ ಕುರುಬ ಮತಸ್ಥರಾದ ಬೀರಪ್ಪ–ಬಚ್ಚಮ್ಮನವರ ಮಗನಾಗಿ ಜನಿಸಿದರು. ಇವರ ಮೊದಲ ಹೆಸರು ತಿಮ್ಮಪ್ಪ, ಅನಂತರ ಇವರಿಗೆ ಅಲ್ಲಲ್ಲಿ ನಿಧಿ ಕಾಣಿಸಿಕೊಂಡುದರಿಂದ ಕನಕಪ್ಪ ಎಂದು ಜನ ಕರೆದರು. ತಂದೆಯ ಮರಣಾನಂತರ ಆತನ ಅಧಿಕಾರ ನಡೆಸಿ ಕನಕನಾಯಕರಾದರು. ಕೆಲ ಕಾಲ ಸಂಸಾರಸುಖ ಅನುಭವಿಸಿದರು. ಕಡೆಗೆ ತಂದೆ, ತಾಯಿ, ಹೆಂಡತಿ ಎಲ್ಲರೂ ಪರಲೋಕವಾಸಿಗಳಾದ ಮೇಲೆ ವೈರಾಗ್ಯ ತಾಳಿದರು. ಕಾಗಿನೆಲೆಯಲ್ಲಿ ಆದಿಕೇಶವ ಗುಡಿ ಕಟ್ಟಿಸಿದರು. ತಮ್ಮ ಜೀವನದ ಕಡೆಯಲ್ಲಿ ಅಲ್ಲಿಯೇ ವಾಸಮಾಡಿ ಭಗವಂತನ ಧ್ಯಾನದಲ್ಲಿದ್ದು ಸಮಾಧಿಸ್ಥರಾದರು. ಅವರ ಸಮಾಧಿ ಕಾಗಿನೆಲೆಯಲ್ಲಿದೆ.

ಕನಕದಾಸರ ಅಂಕಿತ ಕಾಗಿನೆಲೆಯಾದಿಕೇಶವ. ಅದೇ ಅವರ ಇಷ್ಟದೇವರು. ಕೆಲ ಕಾಲ ಬೇಲೂರಿನಲ್ಲಿ ಇದ್ದು ಚೆನ್ನಕೇಶವಸ್ವಾಮಿಯನ್ನೂ ಒಲಿಸಿಕೊಂಡರು. ಅವರ ಹರಿಭಕ್ತಿಸಾರ ಬೇಲೂರು ಚೆನ್ನಕೇಶವಸ್ವಾಮಿಗೆ ಅಂಕಿತವಾಗಿದೆ, ಬಾಡದ ನೆಲೆಯಾದಿಕೇಶವನ ಅಂಕಿತವೂ ಉಂಟು. ಕನಕದಾಸರು ವೈಕುಂಠದಾಸರ ಕೈಂಕರ್ಯದಲ್ಲಿದ್ದಾಗ ಹರಿಭಕ್ತಿಸಾರ ರಚನೆಯಾಯಿತೆಂದು ತೋರುತ್ತದೆ. ಕನಕದಾಸರ ಕಾಲ ಕ್ರಿ.ಶ. ೧೫೦೮ ರಿಂದ ೧೬೦೬ ಎಂದು ಹೇಳಲಾಗಿದೆ. (ಕವಿ ಕನಕದಾಸರು, ಪುಟ ೫) ಕರ್ಣಾಟಕ ಕವಿಚರಿತ್ರೆಯಲ್ಲಿ ಇವರ ಕಾಲ ಸುಮಾರು ಕ್ರಿ.ಶ. ೧೫೫೦ ಎಂದು ತರ್ಕಿಸಲಾಗಿದೆ. (ಭಾಗ ೨, ಪುಟ ೨೩೭).

ಕವಿ ಕನಕದಾಸರು ಭಗವಂತನಿಂದಲೇ ಮಾರ್ಗದರ್ಶನ ಪಡೆದವರೆಂದು ತೋರುತ್ತದೆ. ಹಲವಾರು ಸಲ ಅವರ ಸ್ವಪ್ನದಲ್ಲಿ ಆದಿಕೇಶವಸ್ವಾಮಿ ವೆಂಕಟರಮಣನಾಗಿ, ಚೆನ್ನಕೇಶವನಾಗಿ, ಉಡುಪಿ ಕೃಷ್ಣನಾಗಿ ಕಾಣಿಸಿಕೊಂಡಿದ್ದಾನೆ; ಮಹಾಮಹಿಮರಾದ ವ್ಯಾಸರಾಯರು, ವಾದಿರಾಜರು, ಪುರಂದರದಾಸರು, ವೈಕುಂಠದಾಸರು, ತಾತಾಚಾರ್ಯರು ಇಂತಹ ದಿವ್ಯ ಜ್ಞಾನಿಗಳ ಸಾಂಗತ್ಯವನ್ನು ದಾಸರಿಗೆ ದೊರೆಕಿಸಿಕೊಟ್ಟಿದ್ದಾನೆ. ಶಾಸ್ತ್ರಕಾರರು ಹೇಳುವ 'ಮಾರ್ಜಾಲ ಕಿಶೋರ ನ್ಯಾಯ' ಅಂದರೆ ಬೆಕ್ಕು ತನ್ನ ಮರಿಯನ್ನು ಬಾಯಿಯಲ್ಲಿ ಹಿಡಿದುಕೊಂಡು ರಕ್ಷಿಸುವಂತೆ ಎಂಬ ವಾಕ್ಯ ಇವರಿಗೆ ಅನ್ವಯಿಸುತ್ತದೆ. ಶ್ರೀ ಪುರಂದರದಾಸರ ಜೀವನವು 'ಮರ್ಕಟ ಕಿಶೋರ ನ್ಯಾಯ'ದಂತಿದೆ. ಅಂದರೆ ಕೋತಿಯ ಮರಿ ತನ್ನ ತಾಯಿಯನ್ನು ಅಪ್ಪಿಕೊಂಡು ಜೀವಿಸುವಂತಿದೆ ಎಂಬುದನ್ನು ನಾವು ಅವರ ಚರಿತ್ರೆ

ಯಿಂದ ತಿಳಿಯಬಹುದು. ಪುರಂದರದಾಸರು ಭಕ್ತಿಯಲ್ಲಿ ಹಿರಿಯರು, ಕನಕದಾಸರು ಅನುಭಾವದಲ್ಲಿ ಪ್ರಮುಖರು.

ಶ್ರೀ ಕನಕದಾಸರ ಸುದೀರ್ಘವಾದ ಜೀವನಕಾಲದಲ್ಲಿ ಹಲವು ಮಹತ್ಕಾರ್ಯಗಳೂ ಪವಾಡಗಳೂ ನಡೆದಿವೆ. ಅವುಗಳು ದಂತಕಥೆಯ ರೂಪದಲ್ಲಿ ಪ್ರಸಾರದಲ್ಲಿವೆ. ಅವುಗಳಲ್ಲಿ ಕೆಲವು ಈ ಮುಂದೆ ಹೇಳಿದಂತಿವೆ:—

೧. ಕನಕದಾಸರು ಕಾಗಿನೆಲೆಯಿಂದ ಹಂಪೆಗೆ ದೈವಪ್ರೇರಣೆಯಂತೆ ಆಗಮಿಸಿದರು. ದಿವ್ಯಜ್ಞಾನಿಗಳಾದ ವ್ಯಾಸರಾಯರ ಸನ್ನಿಧಿಗೆ ಬಂದರು. ತನ್ನ ಕುಲ ಜಾತಿಗಳನ್ನು ತಿಳಿಸಿದರು. ಗುರುಗಳು ತನಗೆ ಉಪದೇಶ ಮಾಡಬೇಕೆಂದು ಪ್ರಾರ್ಥಿಸಿದರು. ಕಾಲಧರ್ಮದಂತೆ ಗುರುಗಳು "ಕುರುಬನಿಗೇನೋ ಕೋಣಮಂತ್ರ" ಎಂದು ಹೇಳಿದರು. ಶ್ರದ್ಧಾನ್ವಿತನಾದ ಕನಕನು ಗುರುಮುಖದಿಂದ ಬಂದ 'ಕೋಣಮಂತ್ರ'ದಲ್ಲಿ ನಂಬಿಕೆಯಿಟ್ಟು 'ಕೋಣ, ಕೋಣ' ಎಂದು ಎದುರಿನಲ್ಲಿದ್ದ ಒಂದು ಕಲ್ಲುಗುಂಡನ್ನು ನಾಟಿಸುತ್ತ ಜಪಿಸಿದರು. ಯಮನ ಅವತಾರಿ ಎನಿಸಿದ್ದ ಅವನಿಗೆ ಆ ಜಪದಿಂದ ಚೈತನ್ಯಮೂಡಿ ಕಲ್ಲುಗುಂಡು ಕೋಣನಾಗಿ ಎದುರಿಗೆ ನಿಂತಿತು. ಗುರುಗಳು ಶಿಷ್ಯನ ಶ್ರದ್ಧೆಗೆ ತಲೆದೂಗಿದರು, 'ಇವನೇ ನಿಜವಾದ ಶಿಷ್ಯ' ಎಂದು ಬೆನ್ನು ಚಪ್ಪರಿಸಿ ಕನಕನನ್ನು ತಮ್ಮ ಶಿಷ್ಯನನ್ನಾಗಿ ಅಂಗೀಕರಿಸಿದರು. ಪ್ರತ್ಯಕ್ಷವಾದ ಕೋಣ ಗುರುಗಳು ಕಟ್ಟಿಸುತ್ತಿದ್ದ ವ್ಯಾಸಸಮುದ್ರದ ಕೆರೆಯ ತೂಬಿಗೆ ಅಡ್ಡಲಾಗಿದ್ದ ಕಲ್ಲುಗುಂಡನ್ನು ಪಕ್ಕಕ್ಕೆ ಜರುಗಿಸಿತೆಂದೂ ಆದ್ದರಿಂದಲೇ ಆ ತೂಬಿಗೆ 'ಕೋಣನ ತೂಬು' ಎಂದು ಹೆಸರು ಬಂದಿದೆಯೆಂದೂ ಹೇಳುತ್ತಾರೆ. ಇದು ದಾಸರ ಮೊದಲನೆಯ ಪವಾಡ.

೨. ಒಂದು ದಿನ ಗುರುಗಳು ಶಿಷ್ಯರ ಯೋಗ್ಯತೆ ಪರೀಕ್ಷಿಸಲು ಒಂದು ಹಂಚಿಕೆ ಮಾಡಿದರು. ಎಲ್ಲರ ಕೈಗೂ ಒಂದೊಂದು ಬಾಳೆಹಣ್ಣು ಕೊಟ್ಟರು. ಯಾರು ಈ ಹಣ್ಣನ್ನು ಯಾರೂ ಇಲ್ಲದ ಸ್ಥಳದಲ್ಲಿ ತಿಂದು ಬರುವರೋ ಅವರು ಗಣ್ಯರು ಎಂದು ಹೇಳಿದರು. ನೋಡಲಿಕ್ಕೆ ಸುಲಭವಾಗಿದ್ದ ಈ ಪರೀಕ್ಷೆಯಲ್ಲಿ ಸುಲಭವಾಗಿ ತೇರ್ಗಡೆಯಾಗಬಯಸಿ ಶಿಷ್ಯರು ನಾನು ತಾನು ಎಂದುಕೊಂಡು ಬಾಳೆಹಣ್ಣು ಈಸಿಕೊಂಡು ನಿರ್ಜನ ಪ್ರದೇಶಕ್ಕೆ ಓಡಿಹೋಗಿ ಗಬಗಬ ತಿಂದು ಬಂದರು. ದಿವ್ಯಜ್ಞಾನಿಯಾದ ಕನಕನು ಬಾಳೆಹಣ್ಣನ್ನು ತೆಗೆದುಕೊಂಡು ಎಲ್ಲಿಗೆ ಹೋದರೂ ಅಲ್ಲಿ ಅವನ ಕಣ್ಣಿಗೆ ಸರ್ವವ್ಯಾಪಿಯಾದ ಭಗವಂತನು ಕಾಣಿಸಿಕೊಂಡನು. 'ಅಣೋರಣೀಯಾನ್ ಮಹತೋ ಮಹೀಯಾನ್' ಎಂಬ ಉಪನಿಷದ್ವಾಕ್ಯ ನೆನಪಾಯಿತು. ದೇವರಿಲ್ಲದ ಸ್ಥಳ ಇಲ್ಲ ಎಂದು ತಿಳಿದು ಹಣ್ಣನ್ನು ಹಿಂತಿರುಗಿ ತಂದು ಗುರುಗಳಿಗೆ ಕೊಟ್ಟನು. ವ್ಯಾಸರಾಯರು 'ಏನು ಕಾರಣ ಹಣ್ಣು ತಿನ್ನದೆ ಬಂದೆ' ಎನ್ನಲು 'ದೇವರಿಲ್ಲದ ಸ್ಥಳವಿಲ್ಲ. ಆದ್ದರಿಂದ ನಾನು ತಮ್ಮ ಅಪ್ಪಣೆ ಮೀರಿ ನಡೆಯಲಿಲ್ಲ. ತಮ್ಮ ಹಣ್ಣು ತಮಗೆ ಸಲ್ಲಲಿ'

ಎಂದನು. ಈ ದೃಶ್ಯವನ್ನು ಕಂಡ ಶಿಷ್ಯರು ತಲೆತಗ್ಗಿಸಿದರು. ಗುರುಗಳು ಕನಕನನ್ನು ಕರೆದು ತಲೆದಡವಿದರು. ಈ ಶಿಷ್ಯಕೂಟದಲ್ಲಿ ನಿಜವನ್ನು ಬಲ್ಲವನು ಕನಕನೊಬ್ಬನೇ ಎಂದರು. ಉಳಿದವರು ಅಪ್ರತಿಭರಾದರು.

೩. ಒಂದು ದಿನ ಗುರುಗಳು ಶಿಷ್ಯರಿಗೆ ಪಾಠಪ್ರವಚನ ಹೇಳುತ್ತಿದ್ದರು. ಪ್ರಸಂಗತ್ವೇನ 'ಈ ನಮ್ಮ ಕೂಟದಲ್ಲಿ ಮೋಕ್ಷಕ್ಕೆ ಹೋಗಲು ಶಕ್ತರಾರು ?' ಎಂದು ಕೇಳಿದರು. ಶಿಷ್ಯರು ಮೌನವಾಗಿದ್ದರು. ಉತ್ತರ ಸುಲಭವಾಗಿರಲಿಲ್ಲ. ಆಗ ಕನಕನೆದ್ದು "ಗುರುವರ್ಯಾ 'ನಾನು' ಹೋದರೆ ಹೋಗಬಹುದು" ಎಂದನು. ಅದರ ಅರ್ಥ ತಿಳಿಯದೆ ಶಿಷ್ಯರು ಗಡಿಬಿಡಿ ಮಾಡಿದರು. ಈ ಮಾತು ಗುರುಗಳಿಗೂ ಅಪಮಾನವೆಂದರು. ಆಗ ಗುರುಗಳು 'ಅವನ ಮಾತಿನ ಅರ್ಥವನ್ನು ತಿಳಿದು ಅನಂತರ ಮಾತಾಡಿರಿ' ಎಂದರು. ಆಗ ಕನಕನು ಗುರುಗಳ ಅಪ್ಪಣೆಯಂತೆ ಎದ್ದು ನಿಂತು "ನಾನು ಎಂಬ ಅಹಂಕಾರ ಹೋದರೆ ಯಾರು ಬೇಕಾದರೂ ಮೋಕ್ಷಕ್ಕೆ ಹೋಗಬಹುದು" ಎಂದನು. ಶಿಷ್ಯರು ಅವಾಕ್ಕಾದರು. ಗುರುಗಳು ಕನಕನ ಬೆನ್ನುತಟ್ಟಿ ಹರಸಿದರು. ದೇವನೊಲಿದಾತನೇ ಕುಲಜನು ಎಂದರು.

೪. ವ್ಯಾಸರಾಯರು ವಿಜಯನಗರದಲ್ಲಿ ಪಲ್ಲಕ್ಕಿಯಲ್ಲಿ ಕುಳಿತು ಮೆರವಣಿಗೆ ಹೋಗುತ್ತಿದ್ದರು. ದಿವ್ಯಜ್ಞಾನಿಗಳಾದ ಅವರು ಮಾನಸಿಕ ಪೂಜೆ ಮಾಡುತ್ತಿದ್ದರು. ಮನಸ್ಸಿನಲ್ಲಿ ಭಗವಂತನಿಗೆ ಹೂವಿನಮಾಲೆ ಅರ್ಪಿಸಲು ಯತ್ನಿಸಿದರು. ಕಿರೀಟ ದೊಡ್ಡದು, ಮಾಲೆ ಚಿಕದು ಆಗಿತ್ತು. ಈಗೇನು ಮಾಡಲಿ ಎಂದು ಚಿಂತಿಸುತ್ತಿದ್ದಾಗ ಕನಕದಾಸ ಮುಂದೆ ಬಂದು 'ಗುರುಗಳೇ ಅನುಮಾನವೇಕೆ ಕಿರೀಟ ತೆಗೆಯುವುದೂ ಬೇಡ, ಚಿಂತಿಸುವುದೂ ಬೇಡ, ದೇವರ ಪಾದಕ್ಕೆ ಮಾಲೆ ಒಪ್ಪಿಸಿಬಿಡಿ' ಎಂದನು. ವ್ಯಾಸರಾಯರು ಅಚ್ಚರಿಗೊಂಡರು. ಕನಕನ ದಿವ್ಯಜ್ಞಾನಕ್ಕೆ ಅವನು ಅಪರೋಕ್ಷಜ್ಞಾನಿ ಎಂದುಕೊಂಡರು.

೫. ಒಂದು ದಿನ ಕನಕನು ಸುಕ್ಷೇತ್ರವಾದ ಉಡುಪಿಗೆ ಬಂದನು. ಶ್ರೀಕೃಷ್ಣನನ್ನು ಸಂದರ್ಶಿಸಲು ಹರ್ಷಿಸಿದನು. ತಾನು ಮೋಹನತರಂಗಿಣಿಯಲ್ಲಿ ಯಾವ ದೇವರನ್ನು ಬಣ್ಣಿಸಿರುವನೋ ಆ ಕೃಷ್ಣನ ಪ್ರತ್ಯಕ್ಷದರ್ಶನವಾಗುವುದೆಂದು ಆನಂದಿಸಿದನು. ಗೀತೆಯಲ್ಲಿ ಭಗವಂತನು ಹೇಳಿರುವ "ಯೋಗಕ್ಷೇಮಂ ವಹಾಮ್ಯಹಂ" ಎಂಬ ಮಾತಿನ ಅರ್ಥವನ್ನು ಸ್ಮರಿಸಿಕೊಂಡನು. ದೇವಾಲಯದ ಬಾಗಿಲಿಗೆ ಬಂದೊಡನೆಯೇ ಕಾವಲುಗಾರರು ಇವನನ್ನು ತಡೆದರು. "ಅಯ್ಯಾ ದ್ವಿಜರಲ್ಲದವರಿಗೆ ಇಲ್ಲಿ ಪ್ರವೇಶವಿಲ್ಲ, ದೇವರ ದರ್ಶನವಿಲ್ಲ" ಎಂದರು. ಕನಕನು ಕಳವಳಗೊಂಡನು. ದೇವರ ದರ್ಶನಕ್ಕೆ ಅಡ್ಡಿಬಂದ ತನ್ನ ಕುಲದ ಅಡ್ಡಗೋಡೆಗಾಗಿ ಮರುಗಿದನು. ಭಗವದ್ಗೀತೆಯಲ್ಲಿ ಹೇಳಿದ ಮಾತು "ಪಂಡಿತಾಃ ಸಮದರ್ಶಿನಃ" ಎಂಬುದು ಕೇವಲ ಗ್ರಂಥಸ್ಥವೆಂದುಕೊಂಡನು. ದೇವರ ಮಾತು ಇಲ್ಲಿ ನಡೆಯುತ್ತಿಲ್ಲವೆಂದನು. ನಾನು ದೇವರ ದರ್ಶನ ಮಾಡಲೇಬೇಕಾಗಿದೆ,

ಏನು ಮಾಡಲಿ ಎಂದು ದೇವಾಲಯದ ವ್ಯವಸ್ಥಾಪಕರನ್ನು ಕೇಳಿದನು. ಅದಕ್ಕೆ ಅವರು ನೀನು ನಿಜವಾದ ಭಕ್ತನಾದರೆ ದೇವಾಲಯದ ಹಿಂದೆ ನಿಂತು ಭಜಿಸು, ದೇವರು ದರ್ಶನ ಕೊಟ್ಟಾನು ಎಂದರು. ಆಗ ಕನಕನು ಇವರ ಮಾತಿನಲ್ಲಿಯೂ ನಿಜವಿದೆ, ದೇವರು ನಮ್ಮವನಾದರೆ ಮುಂದೆಯೇನು, ಹಿಂದೆಯೇನು?—ಎಂದು ಗುಡಿಯ ಹಿಂಭಾಗಕ್ಕೆ ಬಂದು ಶ್ರೀಕೃಷ್ಣನನ್ನು ಕುರಿತು ಹಾಡಿದನು. ಭಕ್ತ ಪರಾಧೀನನಾದ ಶ್ರೀಕೃಷ್ಣನು ಪೂರ್ವದಿಂದ ಪಶ್ಚಿಮಕ್ಕೆ ತಿರುಗಿದನು. ಗರ್ಭಗುಡಿ ಪೌಳಿಯ ಗೋಡೆಗಳಲ್ಲಿ ರಂಧ್ರ ಬಿತ್ತು. ಸ್ವಾಮಿ ಭಕ್ತನಿಗೆ ಆ ಮೂಲಕ ಸಂದರ್ಶನ ವಿತ್ತನು. ಶ್ರೀಕೃಷ್ಣನ ದಿವ್ಯರೂಪವನ್ನು ನೋಡಿ ಕನಕನು ಕುಣಿದಾಡಿದನು, ನಾನು ಧನ್ಯನೆಂದನು.

ಈಗಲೂ ಪೂರ್ವಾಭಿಮುಖವುಳ್ಳ ಉಡುಪಿಯ ಶ್ರೀಕೃಷ್ಣ ದೇವಾಲಯ ದಲ್ಲಿ ಗುಡಿಯ ಬಾಗಿಲು ಪೂರ್ವಕ್ಕಿದೆ, ದೇವರ ಮುಖ ಪಶ್ಚಿಮಕ್ಕಿದೆ, ಅಲ್ಲೊಂದು ಕಿಂಡಿಯಿದೆ. ಅದನ್ನು ಕನಕನ ಕಿಂಡಿ ಎನ್ನುತ್ತಾರೆ. ಕನಕ ನಿಂತು ಸ್ತೋತ್ರ ಮಾಡಿದ ಸ್ಥಳದಲ್ಲಿ ಕನಕನ ಮಂಟಪ ಕಟ್ಟಿದ್ದಾರೆ. ನಾಲ್ಕು ಶತಮಾನ ಗಳಿಂದಲೂ ದೇವರನ್ನು ಪೂರ್ವಕ್ಕೆ ತಿರುಗಿಸುವ ಭಕ್ತರಾರೂ ಉಡುಪಿಗೆ ಹೋಗಿಲ್ಲ ವೆಂಬುದು ಇಲ್ಲಿ ಗಮನಾರ್ಹವಾಗಿದೆ.

ಕನಕದಾಸರು ಪಂಡಿತರೇ ಅಲ್ಲದೆ ಕವಿಗಳೂ ಆಗಿದ್ದರು. ಕೇವಲ ಕವಿಯೇ ಅಲ್ಲ ಅನುಭಾವಿಗಳೂ ಎನಿಸಿದ್ದರು. ಶಾಸ್ತ್ರವೆಂಬ ಮೊಸರನ್ನು ಕಡೆದರೆ ಬರುವುದು ಬೆಣ್ಣೆ ಮತ್ತು ಮಜ್ಜಿಗೆ. ಅನುಭಾವವೇ ಬೆಣ್ಣೆ, ಮಜ್ಜಿಗೆಯೇ ತರ್ಕವ್ಯಾಕರಣಾದಿ ಗಳು. ಯೋಗಿಗಳು ಅನುಭಾವವೆಂಬ ಬೆಣ್ಣೆ ತಿಂದು ಮೌನದಿಂದಿರುವರು. ಪಂಡಿತರು ನಿಸ್ಸಾರವಾದ ಮಜ್ಜಿಗೆಗೆ ನಾಹಂ ಕೋಹಂ ಎಂದು ಬಡಿದಾಡುವರು ಎಂದು ಸ್ವಾಮಿ ವಿವೇಕಾನಂದರು ಹೇಳಿರುವುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ಉತ್ತರ ಭಾರತದ ವೇದ, ಉಪನಿಷತ್ತು, ಪುರಾಣಾದಿಗಳು ಜ್ಞಾನಪ್ರಧಾನ ವಾಗಿವೆ. ದಕ್ಷಿಣ ಭಾರತದ ತೇವಾರಂ, ತಿರುವಾಚಕಂ, ವಾಚನಶಾಸ್ತ್ರ, ದಾಸ ವಾಙ್ಮಯ, ಸಂತರ ಅಭಂಗಗಳು ಅನುಭಾವ ಪ್ರಧಾನವಾಗಿವೆ. ಉತ್ತರದ ಪುರಾಣಗಳು ಭಾವನಾಪ್ರಧಾನವಾಗಿವೆ. ದಕ್ಷಿಣದ ಭಾಷ್ಯಗಳು ಸಿದ್ಧಾಂತ ಪ್ರಧಾನವಾಗಿವೆ. ಉತ್ತರದಿಂದ ಗಂಗೆ, ಯಮುನೆ, ಸರಸ್ವತಿ ದಕ್ಷಿಣಕ್ಕೆ ಹರಿದಿವೆ. ಆದರೆ ದಕ್ಷಿಣದಿಂದ ಭಕ್ತಿಯ ಗಂಗೆ, ಅನುಭಾವದ ಯಮುನೆ, ಸಿದ್ಧಾಂತದ ಸರಸ್ವತಿ ಉತ್ತರಕ್ಕೆ ಹರಿದು ಉಪನಿಷತ್ತಿನ ಜ್ಞಾನಸಮುದ್ರಕ್ಕೆ ಸೇರಿವೆ ಎಂಬುದು ಗಮನಾರ್ಹವಾಗಿದೆ. ಈ ವಿಷಯ ಅತೀವ ಮಹತ್ವದ್ದೂ ಸಂಶೋಧನಾತ್ಮಕವಾದುದೂ ಆಗಿದೆ.

ದಕ್ಷಿಣ ಭಾರತದ ತಿರುವಳ್ಳುವರ್, ಅಪ್ಪರ್, ಸುಂದರರ್, ಶಿವಪ್ರಕಾಶರ್, ಬಸವೇಶ್ವರ, ಚೆನ್ನಬಸವೇಶ್ವರ, ಪ್ರಭುದೇವರು, ಅಕ್ಕಮಹಾದೇವಿ, ಸರ್ವಜ್ಞ,

ವೇಮಣ್ಣ ಇವರು ಅನುಭಾವದ ನಿಧಿಗಳು. ತಮಿಳುನಾಡು ಕನ್ನಡನಾಡುಗಳಿಂದ ಹರಿದ ಭಕ್ತಿಯ ಗಂಗೆ, ಅನುಭಾವದ ಯಮುನೆ ಉತ್ತರ ಭಾರತದ ತುಕಾರಾಂ, ಜ್ಞಾನದೇವ್, ಏಕನಾಥ್, ರಾಮದಾಸ್, ಕಬೀರ್, ಮೀರಾ, ಗೌರಾಂಗ ಪ್ರಭು, ವಲ್ಲಭಾಚಾರ್ಯ, ಶಂಕರದೇವ್ ಮೊದಲಾದವರ ಮೇಲೆಲ್ಲಾ ಪರಿಣಾಮ ಮಾಡಿದೆಯೆಂದು ವಿದ್ವಾಂಸರು ತರ್ಕಿಸಿದ್ದಾರೆ. ಈ ಕಾರ್ಯದಲ್ಲಿ ಶ್ರೀ ಪುರಂದರ ದಾಸರು ಮತ್ತು ಶ್ರೀ ಕನಕದಾಸರ ಪಾತ್ರ ಕೂಡ ಗಣನಾರ್ಹವಾಗಿದೆ.

ಶ್ರೀ ಕನಕದಾಸರು ಕೇವಲ ಗ್ರಂಥಕಾರರೇ ಅಲ್ಲದೆ ಸಂಗೀತ ಕೃತಿಗಳನ್ನೂ ಕೂಡ ರಚಿಸಿ ಕರ್ಣಾಟಕ ಸಂಗೀತಕ್ಕೆ ಮಿಗಿಲಾದ ಸೇವೆ ಸಲ್ಲಿಸಿದ್ದಾರೆ.

ಈ ಲೇಖನದಲ್ಲಿ 'ಕನಕದಾಸರ ಅನುಭಾವ ದೃಷ್ಟಿ' ಹೇಳುವುದು ನಮ್ಮ ಗುರಿಯಾಗಿದೆ. ಕರ್ಣಾಟಕದಲ್ಲಿ ಅನುಭವ ಮಂಟಪ ಇದಕ್ಕೆ ಮಾತೃಸಾಧನ. ನಿಜಗುಣರ ಅನುಭವಸಾರ, ಅನುಭವಬೋಧೆ, ಕೃಷ್ಣ ಪ್ರಭುಗಳ ಅನುಭವ ರಸಾಯನ, ಮಹಲಿಂಗ ರಂಗನ ಅನುಭವಾಮೃತ ಇವು ಅನುಭವಪ್ರಧಾನ ಗ್ರಂಥ ಗಳು. ಕನಕದಾಸರ ಗ್ರಂಥಗಳಲ್ಲಿ ಹರಿಭಕ್ತಿಸಾರ ಮತ್ತು ಅವರ ಕೀರ್ತನೆಗಳು ಅನುಭವ ಪ್ರಧಾನವಾಗಿವೆ. ಅವರ ಅನುಭವ ರಹಸ್ಯಗಳನ್ನು ಆ ಗ್ರಂಥಗಳಲ್ಲಿ ನಾವು ಅರಿಯಬಹುದು. ಆ ಗ್ರಂಥದಲ್ಲಿರುವ ಸ್ವಾರಸ್ಯವಾದ ಮಾತುಗಳನ್ನು ಇಲ್ಲಿ ಕೇಳಬಹುದು. ಹರಿಭಕ್ತಿಸಾರದಲ್ಲಿ:

೧. ಸತ್ಕವಿಗಳಿವರಗ್ಗಳಿಕೆ ಎನಗಿನಿತಿಲ್ಲ, ಸನ್ಮತಿಗೆ ಮಂಗಳವಿತ್ತು ರಕ್ಷಿಸು.

೨. ನಿನ್ನ ನಾಮಾವಳಿಕೆಯ ಪೊಗಳಿಕೆ ಇತ್ತು ರಕ್ಷಿಸು.

೩. ವೇದಶಾಸ್ತ್ರ ಪುರಾಣಗಳ ಪುಣ್ಯದ ಹಾದಿಯನು ನಾನರಿಯೆ, ಹೃದಯಾಂಗ ಣದಿ ಜ್ಞಾನೋದಯವನಿತ್ತು ರಕ್ಷಿಸು.

೪. ತಾಯಿ ತನ್ನ ಶಿಶುವಿಗೆ ಹಸಿವರಿದು ಒಸೆದು ಮೊಲೆಕೊಡುವಂತೆ ನೀ ಪೋಷಿಸು, ಇನ್ನಾರು ಸಲಹುವರು ?

೫. ಬಸಿರೊಳಗೆ ಬ್ರಹ್ಮಾಂಡಕೋಟಿಯ ಪಸರಿಸಿದ ಪರಮಾತ್ಮ ನೀನೆಂದು ಉಸುರುತಿವೆ ವೇದಗಳು.

೬. ಲೋಕದಲಿ ಭಾಗವತರಾದವರ ಸಲಹುವನಾಗಿ ಸಂಚರಿಸುವುದು ನೀನು.

೭. ಶರಣಾಗತರಾದವರ ಪೊರೆವ ಪರಾತ್ಪರವಸ್ತುವಲ್ಲವೆ ನೀನು.

೮. ಕ್ರಮದಿ ವೈರವ ಮಾಡಿದವರಿಗೆ ಅಮರ ಪದವಿಯನಿತ್ತೆ ನೀನು.

೯. ಎಲ್ಲರಲಿ ನೀನಾಗಿ ಸುಮನಸರಲ್ಲಿ ಅತಿಹಿತನಾಗಿ ಯಾದವರಲ್ಲಿ ಬಾಂಧವನಾಗಿ ಬಲ್ಲಿದನು ನೀನಹುದು.

೧೦. ಹರಹರ ಪರಮ ಸಾಹೆಸಿ ನೀನು.

೧೧. ಭ್ರಮರ ಕೀಟನ್ಯಾಯದಿಂದಲಿ ನೀನೊಲಿಯೆ ತೃಣ ಪರ್ವತವು.

೧೨. ಎಷ್ಟುಮಾಡಲು ಮುನ್ನ ತಾ ಪಡೆದಷ್ಟೆಯೆಂಬುದು ಮತಿಗೆಟ್ಟ ಮಾನವರಾಡುತಿಹುದು.

೧೩. ನಿನ್ನನಾಮದೊಳೆರಡಕ್ಷರವ ಬಣ್ಣಿಸುತ ಮುನಿಕುಲದಿ ಸಂಪನ್ನನಾದನು ವಾಲ್ಮೀಕಿ.

೧೪. ಮಾರುತನ ಮಗನೇನು ಧನ್ಯನೊ ಬ್ರಹ್ಮಪಟ್ಟದಲಿ ಸೇರಿಸಿದೆ ಹನುಮನನು.

೧೫. ಇಲ್ಲಿಹನು ಅಲ್ಲಿಲ್ಲವೆಂಬೀ ಸೊಲ್ಲು ಸಲ್ಲದು, ಹೊರಗೊಳಗೆ ನೀನಿಲ್ಲದಿಲ್ಲ.

೧೬. ದೀನ ನಾನು ಸಮಸ್ತ ಲೋಕಕೆ ದಾನಿ ನೀನು.

೧೭. ಮರೆದನಭ್ಯುದಯದಲಿ ನಿನ್ನನು ಮರೆಯೆನಾಪತ್ತಿನಲಿ ಪೊರೆಯೆಂದೊರಲುವೆನು.

೧೮. ಗತಿವಿಹೀನರಿಗಾರು ಗತಿಕಣಾ ಪತಿಕರಿಸಿ ಕೊಡು ಸದ್ಗತಿಯನೆಲೆ ದೇವ.

೧೯. ಈಗಲೋ ಈ ದೇಹವಿನ್ನಾವಾಗಲೋ—ನಿನ್ನ ಸಮಾಗಮವ ಬಯಸುವೆನು.

೨೦. ನೀನಿರಲು ಕಮಲಾಸನನ ಹಂಗೇನು?

೨೧. ದೇಹದಲುಂಟೆ ಫಲಪುರುಷಾರ್ಥ?

೨೨. ಮುಕ್ತಿ ಜ್ಞಾನವಿಲ್ಲದಡಿಲ್ಲ, ಭಕ್ತಿಗೆ ನೀನೆ ಕಾರಣನಾಗಿ ರಕ್ಷಿಸು.

೨೩. ಕೋಪವೆಂಬುದು ನರಕದ ಕೂಪದಲಿ ತಳ್ಳುವುದು.

೨೪. ಖಂಡಪರಶುವು ರುದ್ರಭೂಮಿಯೊಳಾಡಲೆಂದು ತಿರುಗುವನು.

೨೫. ಮುಕ್ತಿಗೆ ಭಕ್ತಿಯೇ ಕಾರಣವು.

೨೬. ನೀರ ಮೇಲಣ ಗುಳ್ಳೆಯಂದದಿ ತೋರಿ ಅಡಗುವದೇನಿದು.

೨೭. ದರ್ಪಣದ ಮೇಲಿದ್ದುರಳಿ ಪೋಪಂತೆ ನಿಮಿಷದಿ ಬಿದ್ದುಹೋಗುವ ಕಾಯವಿದು.

೨೮. ಕೇಳುವುದು ಕಡುಕಷ್ಟ, ಕಷ್ಟದ ಬಾಳುವೆಯ ಬದುಕೇನು?

೨೯. ಗಾಳಿಗೊಡ್ಡಿದ ಸೊಡರು ಸಂಸಾರದೇಳಿಗೆಯು.

೩೦. ಯಾರು ತನಗೊಂದಿಲ್ಲ, ಹೊತ್ತ ಶರೀರಗಳ ಮಿತಿಯಿಲ್ಲ.

೩೧. ಪಾಪವ ಕಳೆದ ಬದುಕೇ ಲೇಸು.

೩೨. ಲೋಕದಿ ಬೀಜ ವೃಕ್ಷನ್ಯಾಯವಿದ ಭೇದಿಸುವರಿನ್ನಾರು?

೩೩. ಎಲ್ಲವ ಬಿಸುಟು ಹೋಗುತಿಹ ಸಮಯದಲಿ ಇವರವರಾಗಬಲ್ಲರೆ ನೀನಲ್ಲದೆ?

೩೪. ಸತ್ತವರಿಗಳಲೇಕೆ? ಮೃತ್ಯು ಬೆನ್ನಿನೊಳಿಹುದು.

೩೫. ಮಣ್ಣಿನಲಿ ಬಂಧಿಸಿದ ದೇಹವ ಮಣ್ಣುಗೂಡಿಸಬೇಡ—ಜ್ಞಾನದ ಕಣ್ಣು ದೃಷ್ಟಿಯನಿತ್ತು ರಕ್ಷಿಸು.

೩೬. ತಾಯನಗಲಿದ ಶಿಶುವಿನಂದದಿ ಬಾಯವಿಡುವಂತಾಯ್ತು.

೩೭. ಜಗದೊಳಗೆ ಮುಳುಗಿದರೆ ತೊಲಗದು ಹೊಲೆಗೆಲಸವು.

೩೮. ಕೇಳುವುದು ಹರಿಕಥೆಯು, ಕೇಳಲು ಹೇಳುವುದು ಹರಿಭಕ್ತಿ ಮನದಲಿ.

೩೯. ನೂರು ಕನ್ಯಾದಾನವನು ಭಾಗೀರಥೀ ಸ್ನಾನವನು ಮಾಡಿದ ಪುಣ್ಯ ಹರಿಭಕ್ತಿಸಾರವ ಕೇಳ್ದರಿಗೆ.

೪೦. ನೀನಿರಲು ದೇಹದೊಳು ಹೊಲೆಯುಂಟೆ?

೪೧. ಮೊದಲು ಜನನವನರಿಯೆನು ಮರಣದ ಹದನ ಕಡೆಯಲಿ ತಿಳಿಯೆನು—ಮಧ್ಯದಲಿ ನಾನಿರ್ಪೆನೆಂಬುದೆ?

೪೨. ನಿನ್ನ ದಾಸರ ಜರಿದು ವೇದಶಾಸ್ತ್ರಪುರಾಣಗಳನೋದಿ ಫಲವೇನು?

ಕನ್ನಡಿಗರ ನಾಲಿಗೆಯ ಮೇಲೆ ಸದಾ ನಲಿದಾಡುತ್ತಿರುವ ಹರಿಭಕ್ತಿಸಾರದ ಸಾರಸರ್ವಸ್ವವಾದ ಈ ವಚನಗಳು ಕನಕದಾಸರ ಅನುಭಾವದೃಷ್ಟಿಗೆ ನಿದರ್ಶನ ವಾಗಿವೆಯಲ್ಲವೆ?

ಕನಕದಾಸರ ಕೃತಿಗಳು ಕರ್ಣಾಟಕದ ತುಂಬ ಪರಿಚಿತವಾಗಿವೆ. ಭಕ್ತಿ ಜ್ಞಾನ ವೈರಾಗ್ಯಗಳ ಭಂಡಾರದಂತಿರುವ ಈ ಹಾಡುಗಳಲ್ಲಿ ಕೂಡ ಆ ಮಹಾತ್ಮರ ವಿಶಾಲವಾದ ಅನುಭವಗಳನ್ನು ನಾವು ಕಾಣಬಹುದು. ಅವುಗಳ ಸಾರ ಇಲ್ಲಿದೆ—

೧. ಕೇಶವನೊಲುಮೆಯು ಆಗುವ ತನಕ ಹರಿದಾಸರೊಳಿರು ಮನವೆ।
ಕ್ಲೇಶ ಪಾಶಂಗಳ ಹರಿದು ವಿಲಾಸದಿ ಶ್ರೀಶನ ಗುಣಗಳ ಪೊಗಳುತ ಮನದೊಳು.

೨. ಹೂವ ತರುವರ ಮನೆಗೆ ಹುಲ್ಲ ತರುವೆ।
ಆವಪರಿಯಲಿ ಸಲಹೋ ಚಿನ್ಮಯನೆ.

೩. ತನು ನಿನ್ನದು ಜೀವನ ನಿನ್ನದು।
ಅನುದಿನದೊಳು ಬಹ ಸುಖ ದುಃಖ ನಿನ್ನದಯ್ಯ.

೪. ದಾಸಾರ್ಯರ ದಾಸರ ದಾಸ ನಾನು।
ಬಿಡದೀಶ ಕಾಯ್ದುಕೊಳ್ಳೋ.

೫. ನಾರಾಯಣ ಎನ್ನಿ ನಾರದವರದನ ನಾರಾಯಣ ಎನ್ನಿರೋ।
ವೇದಪಾರಾಯಣನಾಗಿ ಕರಿಯ ಕಾಯ್ದಾತನ.

೬. ಭಜಿಸಿ ಬದುಕೆಲೋ ಮನುಜ ಮನಮುಟ್ಟಿ ಹರಿಯಾ।
ಅಜಭವೇಂದ್ರಾದಿ ವಂದಿತ ಪದಯುಗವಾ.

೭. ಅಜ್ಞಾನಿಗಳ ಕೂಡೆ ಅಧಿಕ ಸ್ನೇಹಕ್ಕಿಂತ ।
ಸುಜ್ಞಾನಿಗಳ ಕೂಡೆ ಜಗಳವೇ ಲೇಸು.

೮. ಬಲ್ಲವರೆ ಬಲ್ಲರು ಎಲ್ಲರೂ ಅರಿಯರು ।
ಫುಲ್ಲಲೋಚನ ಪರಬ್ರಹ್ಮ ನೀನೆಂದು.

೯. ಸತ್ಯವಂತರ ಸಂಗ ಇರಲು ತೀರ್ಥ ಯಾತಕೆ ।
ನಿತ್ಯ ಜ್ಞಾನಿಯಾದಮೇಲೆ ಚಿಂತೆ ಯಾತಕೆ ?

೧೦. ಸಾಕು ಸಾಕು ಮನುಜ ಸೇವೆಯು ಶ್ರೀರಂಗರಾಯ ।
ಬೇಕು ನಿನ್ನ ಪಾದಭಜನೆ ಲೋಕದೊಡೆಯ ರಂಗರಾಯ.

೧೧. ಎಲ್ಲರೂ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ.

೧೨. ದೇವರಿಲ್ಲದ ಗುಡಿಯು ಹಾಳುಬಿದ್ದಂಗಡಿಯು ಭಾವವಿಲ್ಲದ ಭಕುತಿ ಕುಹಕ ಯುಕುತಿ.

೧೩. ಈತನೀಗ ವಾಸುದೇವನು । ಲೋಕದೊಡೆಯ ಈತನೀಗ ವಾಸುದೇವನು.

೧೪. ತಲ್ಲಣಿಸದಿರು ಕಂಡ್ಯ ತಾಳು ಮನವೆ । ಸ್ವಾಮಿ ಎಲ್ಲರನು ರಕ್ಷಿಪನು ಇದಕೆ ಸಂಶಯವಿಲ್ಲ.

೧೫. ನಾರಾಯಣನೆಂಬ ನಾಮದಿ ಬೀಜವನು ನಾಲಿಗೆಯ ಕೂರಿಗೆಮಾಡಿ ಬಿತ್ತಿರಯ್ಯಾ.

೧೬. ನೀ ಮಾಯೆಯೊಳಗೋ ನಿನ್ನೊಳು ಮಾಯೆಯೋ ನೀ ದೇಹದೊಳಗೋ ನಿನ್ನೊಳು ದೇಹವೋ ?

೧೭. ಆರು ಸಂಗಡ ಬಾಹೋರಿಲ್ಲ ನಾರಾಯಣ ನಾಮವೊಂದಲ್ಲದೆ.

೧೮. ಭಜರೇ ಹನುಮಂತಂ—ಮಾನಸ—ಭಜರೇ ಹನುಮಂತಂ.

೧೯. ಪ್ರಾಚೀನ ಕರ್ಮವು ಬಿಡಲರಿಯದು, ಯೋಚನೆಯ ಮಾಡಿ ಬಳಲುವುದೇಕೆ ಮನುಜ ?

೨೦. ಸಾಧು ಸಜ್ಜನರ ಸತ್ಯಗುಣಕಿದಿರುಂಟೆ, ಆದಿಕೇಶವನ ಪೋಲುವ ದೈವವುಂಟೆ ?

೨೧. ಮಗನಿಂದ ಗತಿಯುಂಟೆ ಜಗದೊಳಗೆ ಪ್ರಪಂಚವಾಸನೆಯ ಸುಜ್ಞನರಿಗೆ ಮಗ ಇದ್ದರೇನು, ಇಲ್ಲದಿದ್ದರೇನು ?

೨೨. ಕುಲಕುಲವೆನ್ನುತಿಹರು, ಕುಲವಾವುದು ಸತ್ಯಸುಖಸಜ್ಜನರಿಗೆ ?

೨೩. ರಾಮನಾಮವ ನೆನೆಮನವೆ, ರಾಮ ಎಂದವನು ಧನ್ಯನು.

೨೪. ಎಂದಿದ್ದರೀ ಕೊಂಪೆ ಎನಗೆ ನಂಬುಗೆಯಿಲ್ಲ, ಮುಂದರಿತು ಶ್ರೀಹರಿಯ ಭಜಿಸುವುದು ಲೇಸು.

೨೫. ಬದುಕಿದೆನು ಬದುಕಿದೆನು ಭವ ಎನಗೆ ಹಿಂಗಿತು, ಪದುಮನಾಭನ ಪಾದ ದೊಲುಮೆ ಎನಗಾಯಿತು.

೨೬. ಈಶ ನಿನ್ನ ಚರಣಭಜನೆ ಆಶೆಯಿಂದ ಮಾಡುವೆನು.

೨೭. ಬಂಟನಾಗಿ ಬಾಗಿಲ ಕಾಯುವೆನು ವೈ। ಕುಂಠ ದಾಸರ ಮನೆಯ ಬಾಗಿಲ.

೨೮. ಪೂರ್ವಜನ್ಮದಿ ನಾ ಮಾಡಿದಾ ಕರ್ಮದಿಂ ಊರ್ವಿಯೊಳು ಜನಿಸಿದೆನು ಕೃಷ್ಣಾ.

೨೯. ಆಶೆ ತರವಲ್ಲ ದಾಸನಾಗೋ ಭವಪಾಶ ನೀಗೋ.

೩೦. ಶರಣು ಶರಣು ದಶರಥ ರಾಮದೂತಗೆ.

೩೧. ಜಪವ ಮಾಡಿದರೇನು ತಪವ ಮಾಡಿದರೇನು ಕಪಟಗುಣ ವಿಪರೀತ ಕಲುಷ ವಿದ್ದವರು.

೩೨. ತೊರೆದು ಜೀವಿಸಬಹುದೆ ಹರಿ ನಿನ್ನ ಚರಣವ ಬರಿದೆ ಮತ್ಯಾಕಿನ್ನು ಅರಿದು ಪೇಳುವೆ ನಾನು.

೩೩. ಸಂಸಾರವೆಂಬ ಸಾಗರವನುತ್ತರಿವರೆ ಕಂಸಾರಿ ನಾಮ ಒಂದೆ ಸಾಕು ಮನವೆ.

೩೪. ಮಾಡು ದಾನಧರ್ಮ ಪರ ಉಪಕಾರ ಮರೆಯದಿರೆಚ್ಚರಿಕೆ ಕೇಡ ನೆನೆಯಲಿ ಬೇಡ ನಂಬಿದವರ ಮೇಲೆ ಕೆಡುವೆ ನೀನೆಚ್ಚರಿಕೆ.

೩೫. ಆವ ಬಲವಿದ್ದರೇನು, ದೈವಬಲವಿಲ್ಲದವಗೆ?

೩೬. ಮಾವನ ಮನೆಯೊಳಗೆ ಇರಬಹುದೆ ಕೋವಿದರು?

೩೭. ಸಾಲದೆ ನಿನ್ನದೊಂದು ದಿವ್ಯನಾಮ ಕಾಲಮೃತ್ಯುವಿನ ಗಂಟಲು ಗಾಣ ಹರಿಯೆ.

೩೮. ಆರು ಹಿತವರು ಎಂದು ನಂಬಬ್ಯಾಡ, ಯಾರಿಗ್ಯಾರಿಲ್ಲ ಆಪತ್ತು ಬಂದೊದಗಿದಡೆ.

೩೯. ಗೋವಿಂದ ಹರಿಗೋವಿಂದ, ಪರಮಾನಂದ ಮುಕುಂದ.

೪೦. ನೋಡಿ ಮರುಳಾಗದಿರು ಪರಸತಿಯರ ನಾಡೊಳಗೆ ಕೆಟ್ಟದರ ಪರಿಯ ನೀನರಿದು.

೪೧. ತೀರ್ಥವನು ಪಿಡಿದವರು ತಿರುನಾಮಧಾರಿಗಳೆ, ಜನ್ಮಸಾರ್ಥಕವಿಲ್ಲದವರು ಭಾಗವತರೆ?

೪೨. ಕಾಡುವ ದುರಿತಗಳ ಬಿಡಿಸೆಂದು ಬೇಡಿಕೊಂಬೆನು ನಿನ್ನ.

೪೩. ಬಾಗಿಲನು ತೆಗೆದು ಸೇವೆಯನು ಮಾಡು ಹರಿಯ.

೪೪. ದುರ್ಜನ ಸಂಗವನೊಲ್ಲೆನು ಹರಿಯೇ ಸಜ್ಜನರ ಸಂಗದೊಳಿರಿಸೆನ್ನನು.

೪೫. ನಾವು ಕುರುಬರು ನಮ್ಮ ದೇವರು ಬೀರಪ್ಪ ಕಾವ ನಮ್ಮಜ್ಜ ನರ ಕುರಿ ಹಿಂಡುಗಳ.

೪೬. ಮರೆಯದಿರು ಮರೆಯದಿರು ಎಲೆ ಮಂಕುಜೀವ, ಗುರುವವೇತಕೆ ನಿನಗೆ?

೪೭. ಇವಗ್ಯಾಕೆ ಶೃಂಗಾರ, ಇವಗ್ಯಾಕೆ ಪರಿಮಳವು ನವನೀತ ಚೋರ ನಾರುವ ಗೊಲ್ಲಗೆ?

೪೮. ಎಲ್ಲಿರುವನೋ ರಂಗ ಎಂಬ ಸಂಶಯ ಬೇಡ, ಎಲ್ಲಿ ಭಕ್ತರು ಕರೆಯೆ ಅಲ್ಲಿ ಬರುವ.

೪೯. ಅರಿಗಾದರು ಪೂರ್ವಕಲ್ಪನೆಯು ಬಿಡದು ಬೇರೆ ತಾ ಬಯಸಿದರೆ ಬರಲರಿಯದು.

೫೦. ಕುಲಕುಲವೆಂದೊಡೆದಾಡದಿರಿ ನಿಮ್ಮ ಕುಲದ ನೆಲೆಯನೇನಾದರು ಬಲ್ಲಿರಾ?

೫೧. ರಂಗನೆಂಥವನೆಲೆ ತಂಗಿ—ಅವ—ನಂಗ ತಿಳಿಯದು ಬ್ರಹ್ಮಾದಿಗಳಿಗೆ.

೫೨. ನೀನುಪೇಕ್ಷೆಯ ಮಾಡೆ ಬೇರೆ ಗತಿಯಾರೆನಗೆ ನಿಗಮಗೋಚರ ಮುಕುಂದ.

ಈ ಮೇಲ್ಕಂಡ ಕನಕದಾಸರ ಉಪದೇಶಗಳು ಅವರ ಮಿಗಿಲಾದ ಲೋಕ ಪರಿಚಯಕ್ಕೂ ಅನುಭಾವದೃಷ್ಟಿಗೂ ನಿದರ್ಶನವಾಗಿಲ್ಲವೆ?

ಭಕ್ತ ಕನಕದಾಸರ ಜೀವಿತ ಸಾರ್ಥಕವಾದುದು. ಯಾವ ಕುಲದಲ್ಲಿ ಹುಟ್ಟಿದರೂ ನಿಷ್ಠೆಯಿಂದ ನಡೆದರೆ ದೇವರ ಕೃಪೆ ಪಡೆಯಬಹುದೆನ್ನುವುದಕ್ಕೆ ಇದು ನಿದರ್ಶನವಾಗಿದೆ. ದಾಸರೂ ಸಾಹಿತಿಗಳಾಗಿ, ಕವಿವರ್ಯರಾಗಿ, ಅನುಭಾವಿಗಳಾಗಿ ನಾಡಿನ ಜನತೆಗೆ ಮಾರ್ಗದರ್ಶನ ಮಾಡಿದ್ದಾರೆ. ಅವರು ಉತ್ತಮ ಕೃತಿಗಳಿಂದ ಕನ್ನಡ ಸಾಹಿತ್ಯಭಂಡಾರವನ್ನು ಅಲಂಕರಿಸಿದ್ದಾರೆ. ಇನ್ನಾರಿಂದಲೂ ಸಾಧ್ಯವಲ್ಲದ ಶ್ರೀಕೃಷ್ಣನನ್ನು ಸಾಕ್ಷಾತ್ಕಾರಮಾಡಿಕೊಂಡು ಮಹಾಮಹಿಮರೆನಿಸಿಕೊಂಡಿದ್ದಾರೆ. ಅಂತಹ ಮಹನೀಯರು ಹುಟ್ಟಿದ ದೇಶದಲ್ಲಿ ನಾವೂ ಹುಟ್ಟಿರುವೆವೆಂಬುದು ನಮಗೆ ಹೆಮ್ಮೆಯ ಮಾತಾಗಿದೆ.

ಕನಕದಾಸರ ೪೦೧ ವರ್ಷಗಳ ಪುಣ್ಯಾರಾಧನೆಯನ್ನು ಆಚರಿಸುವ ಕಾಲದಲ್ಲಿ ನಾವು ಬದುಕಿದ್ದೇವೆ ಎಂಬುದು ಭಾಗ್ಯದ ವಿಷಯವೇ ಸರಿ. ಅವರ ಅನುಭವಾಮೃತವನ್ನು ಕೇಳುವ ಭಾಗ್ಯ ಪಡೆದ ಕನ್ನಡಿಗರು ಧನ್ಯರೇ ಸರಿ.

# ಕನಕದಾಸರ ಜಾಣನುಡಿಗಳು

ಡಾ॥ ಕೆ. ಎಂ. ಕೃಷ್ಣರಾವ್, ಎಂ.ಎ., ಪಿಎಚ್.ಡಿ., ಬೆಂಗಳೂರು

ಜಾಣನುಡಿ (ಜಾಣ್ನುಡಿ) ಎಂದರೆ ಬುದ್ಧಿವಂತಿಕೆಯ ಮಾತು—ಬುದ್ಧಿವಂತರು, ಜಾಣರು ಆಡಿದ ಮಾತು. ಬುದ್ಧಿವಂತರು-ಜಾಣರು-ವಿದ್ವಾಂಸರು-ಕವಿಗಳು ಆಡುವ ಮಾತಿಗೂ ಜನಸಾಮಾನ್ಯರು-ದಡ್ಡರು-ಮೂರ್ಖರು ಆಡುವ ಮಾತಿಗೂ ಅಂತರವುಂಟು. ಆಡುವ ಮಾತು ಗಂಭೀರವಾಗಿದ್ದು, ತಾವು ಹೇಳ ಬಯಸುವ ಅಭಿಪ್ರಾಯ ನೇರವಾಗಿ ಕೇಳುವವರ ಹೃದಯಕ್ಕೆ ಹೊಗುವಂತೆ ಇರುವುದು ಬುದ್ಧಿವಂತಿಕೆಯ-ಜಾಣ್ಮೆಯ ಲಕ್ಷಣ. ಅಂತಹ ಮಾತು ಕೇಳಿದವರ ಮನವನ್ನು ಸೂರೆಗೊಳ್ಳುವುದು; ಅವರಿಗೆ ಆನಂದವನ್ನುಂಟು ಮಾಡುವುದು.

ರಸಿಕನಾಡಿದ ಮಾತು ಶಶಿಯುದಿಸಿಬಂದಂತೆ!
ರಸಿಕನಲ್ಲದನ ಪಿಸುಮಾತು—ಪಿಸುಮಾತು ಕಿವಿಯೊಳು
ಕೂರಸಿಯ ತಿವಿದಂತೆ ಸರ್ವಜ್ಞ!

ಜಾಣರ ಮಾತು ಕೇಳಿದ ಕೂಡಲೇ ಅರ್ಥಮಾಡಿಕೊಂಡಾಕ್ಷಣ ಅದರ ಪ್ರಯೋಜನ ಮುಗಿದುಹೋಗುವುದಲ್ಲ, ಕೇಳಿದವರ ಮನಸ್ಸಿನ ಮೇಲೆ ವಿಶೇಷವಾದ ಪ್ರಭಾವವನ್ನು ಬೀರಿ, ಆ ಮಾತನ್ನು ಅವರು ಪದೇ ಪದೇ ಸ್ಮರಿಸಿ ಮೆಲುಕು ಹಾಕುವಂತೆ ಮಾಡುತ್ತದೆ; ತಮ್ಮದನ್ನಾಗಿಯೇ ಮಾಡಿಕೊಂಡು ಅವರೂ ಮುಂದೆ ತಮ್ಮ ಮಾತಿನಲ್ಲಿ ಬಳಸುವಂತಾಗುತ್ತದೆ. ಕಾಲಕ್ರಮದಲ್ಲಿ ಹಲವರ ನಾಲಿಗೆಯ ಮೇಲೆ ನಲಿದಾಡಿದ ಅಂತಹ ಜಾಣನುಡಿ–ನಾಡನುಡಿ–ನಾಣ್ನುಡಿ–ಗಾದೆ ಎನ್ನಿಸಿಕೊಳ್ಳುವುದು.

"ಗಾದೆಗಳು ವೇದಕ್ಕೆ ಸಮಾನ" ಎಂಬುವುದುಂಟು. ಸಾಹಿತ್ಯ-ಸಂಸ್ಕೃತಿ ಭರಿತವಾದ ಪ್ರತಿಯೊಂದು ನಾಗರಿಕ ಭಾಷೆಯಲ್ಲೂ ಇಂತಹ ಗಾದೆಗಳು_ಜಾಣನುಡಿಗಳು ಹೇರಳವಾಗಿ ದೊರೆಯುತ್ತವೆ. ಇವುಗಳನ್ನು "ಸುಭಾಷಿತ" ಎಂದೂ ಕರೆಯಬಹುದು.

ಜಾಣನುಡಿಗಳಲ್ಲಿ ಮುಖ್ಯವಾಗಿ ನಾವು ನೋಡುವುದು–ನೋಡಬೇಕಾದುದು ಲೋಕಾನುಭವ. ಜನಾಂಗದ ಜ್ಞಾನಭಂಡಾರದ ನಾಣ್ಯಗಳಾಗಿ ಇವು ಚಿರಂಜೀವಿಯಾಗಿ ಮೆರೆಯುತ್ತವೆ. ಇವು ಅನೇಕವೇಳೆ ಸಮಾಜದ ಚಿತ್ರವನ್ನು ನಮ್ಮೆದುರಿಗೆ ತಂದು ನಿಲ್ಲಿಸುತ್ತವೆ; ನೀತಿಯನ್ನು ಬೋಧಿಸುತ್ತವೆ; ಹಾಸ್ಯದ ಚಟಾಕಿಯನ್ನು ಹಾರಿಸುತ್ತವೆ; ಬೇಕು–ಬೇಡಗಳನ್ನು ಸೂಚಿಸುತ್ತವೆ. ಪ್ರತಿಭಾಶಾಲಿಯಾದವನು

ಮಾರ್ಮಿಕವಾಗಿ ಜಾಣ್ಮೆಯಿಂದ ಆಡಿದ ಮಾತು ಅನುಭವಸಂಪತ್ತಿನಿಂದ ತುಂಬಿರುತ್ತದೆ.

ಜಾಣನುಡಿ–ಗಾದೆ ಎಂಬುದು ಕಲ್ಲುಸಕ್ಕರೆಯ ತುಂಡಿನಂತೆ; ಪೆಪ್ಪರಮೆಂಟಿನಂತೆ! ಬಾಯಿಯಲ್ಲಿಟ್ಟುಕೊಂಡು ಚಪ್ಪರಿಸಿ ಅದರ ರುಚಿ–ರಸಗಳನ್ನು ಹೀರುವಂತೆ ಜಾಣ್ಮೆಯಿಂದಾಡಿದ ಮಾತಿನ ಅರ್ಥವನ್ನು ಆಲೋಚಿಸಿ ಅನುಭವಿಸಬೇಕು. ತಕ್ಷಣವೇ ಅರ್ಥಮಾಡಿಕೊಂಡು ಮರೆತುಬಿಡುವಂತಹುದಲ್ಲ ಅದು. ಉದಾತ್ತ ಭಾವನೆ, ನೀತಿಬೋಧೆ, ವಿಡಂಬನೆ, ಎಚ್ಚರಿಕೆ ಮೊದಲಾದುವು ಅವುಗಳಲ್ಲಿ ಅಡಗಿ ಕುಳಿತಿರುತ್ತವೆ. ಆಲೋಡನೆಯಿಂದ ಅವು ಹೊರಬರುತ್ತವೆ; ಜನತೆಗೆ ದಾರಿ ದೀಪವಾಗುತ್ತವೆ.

ಜಾಣನುಡಿಗಳ ಪ್ರಯೋಗದಿಂದ ಲೇಖಕರ ಶೈಲಿಗೆ ಒಂದು ಶಕ್ತಿ–ಬೆಡಗು ಬರುತ್ತದೆ; ಶೈಲಿಯೂ ಕುದುರುತ್ತದೆ. ಅಲಂಕಾರ ಶಾಸ್ತ್ರದಲ್ಲಿ ಇದಕ್ಕೆ ಅರ್ಥಾಂತರನ್ಯಾಸ ಎಂದು ಸಾಮಾನ್ಯವಾಗಿ ಹೆಸರು.

ಒಂದು ಭಾಷೆಯಲ್ಲಿರುವ ಸಾವಿರಾರು ಜಾಣನುಡಿಗಳನ್ನು ಒಟ್ಟಿಗೇ ಸೇರಿಸಿ ಪರಿಶೀಲಿಸಿದರೆ, ಆ ಭಾಷೆಯು, ಅದನ್ನಾಡುವ ಜನಾಂಗದ–ದೇಶದ ಸಂಸ್ಕೃತಿಗೆ ದರ್ಪಣವಾಗುತ್ತದೆ. ಕನ್ನಡ ನುಡಿಭಂಡಾರದಲ್ಲಿ ಗಾದೆಗಳ–ಜಾಣನುಡಿಗಳ ನಾಣ್ಯಗಳು ಹೇರಳವಾಗಿವೆ. ಅದು ಕನ್ನಡಿಗರ ಸಾಹಿತ್ಯ–ಸಂಸ್ಕೃತಿಗಳ ಪ್ರಗತಿಯ ಲಕ್ಷಣ.

ಸಮಕಾಲೀನರ ಸಂಭಾಷಣೆಯಲ್ಲಿ ಪರಂಪರೆಯಾಗಿ ಬಂದ ಗಾದೆಗಳು–ಜಾಣನುಡಿಗಳು ಕೇಳಸಿಗುತ್ತವೆ. ಅಲ್ಲದೆ ಹೊಸಹೊಸದಾಗಿಯೂ ಅಲ್ಲೇ ಅವು ಸೃಷ್ಟಿಯಾಗುವುದುಂಟು; ಜಾಣ ಕವಿಗಳ ಕೃತಿಗಳಲ್ಲಿಯೂ ಇವು ಸೇರಿಕೊಂಡಿರುತ್ತವೆ. ಆಯಾ ಕವಿಗಳ ಶಕ್ತಿಗನುಗುಣವಾಗಿ ಹೊಸ ಹೊಸ ಜಾಣನುಡಿಯ ನಾಣ್ಯಗಳು ಕವಿಗಳ ಕೃತಿ ಟಂಕಶಾಲೆಗಳಲ್ಲಿ ಮುದ್ರಿತವಾಗಿ ಹೊರಬೀಳುತ್ತವೆ! ಅನೇಕ ಪ್ರತಿಭಾನ್ವಿತ ಕವಿಗಳ ಕಾವ್ಯಗಳು ಹೀಗೆ ಜಾಣನುಡಿಗಳ ಟಂಕಸಾಲೆಗಳಾಗಿವೆ; ಭಂಡಾರಗಳಾಗಿವೆ.

ಪ್ರಕೃತ ಲೇಖನದಲ್ಲಿ ಕನ್ನಡ ವಾಙ್ಮಯದಲ್ಲಿ ಪ್ರಸಿದ್ಧ ಕವಿ, ಭಕ್ತ, ಹರಿದಾಸರೆಂದು ಹೆಸರಾಂತ ಕಾಗಿನೆಲೆಯ ಕನಕದಾಸರ ಜಾಣನುಡಿಭಂಡಾರವನ್ನು ವಿವೇಚಿಸುವ ಪ್ರಯತ್ನ ಮಾಡಲಾಗಿದೆ.

ಕನಕದಾಸರ ಶಬ್ದಸಂಪತ್ತು ಅಪಾರವಾಗಿದ್ದು, ಅವರಲ್ಲಿ ಕತೆಗಾರಿಕೆಯ ಕಲೆ ಯಥೇಷ್ಟವಾಗಿದೆ. ಅವರ ಶೈಲಿ ಲಲಿತವಾಗಿ ಹರಿಯುತ್ತದೆ.

ಇದಕ್ಕೆ ನಳಚರಿತ್ರೆ ಒಳ್ಳೆಯ ಉದಾಹರಣೆ. ಕನಕದಾಸರ ನುಡಿ ಬತ್ತಳಿಕೆಯಿಂದ ಶಬ್ದ ಶಿಲೀಮುಖಗಳು ಪುಂಖಾನುಪುಂಖವಾಗಿ ಹೊರಬಂದು ತಮ್ಮ ಗುರಿಯನ್ನು ಮುಟ್ಟುತ್ತವೆ. ಅವರ (ಶಬ್ದ) ಪ್ರಯೋಗ ಅಷ್ಟು ಅಮೋಘ;

ಶಬ್ದ ಜೋಡಣೆಯೂ ಅಷ್ಟೇ ಸುಂದರ. ಭಕ್ತಿಯ ರಸದಲ್ಲಿ ಅವು ಮಿಂದು ಸ್ವಚ್ಛವಾಗಿ ಹೊರಬರುವುದರಿಂದ ಅವುಗಳಿಗೆ ಒಂದು ವಿಶೇಷ ಸೊಂಪು ಬರುತ್ತದೆ. ಅರ್ಥಭಾವಗಳಿಗೆ ಅನುಗುಣವಾದ ಶಬ್ದ ಜೋಡಣೆಯಲ್ಲಿ ಕನಕದಾಸರ ನೈಪುಣ್ಯ–ಕನ್ನಡಿಗತನ ತುಂಬಾ ಮೆಚ್ಚಿಕೊಳ್ಳುವಂತಹವು. ಗಾದೆಗಳನ್ನು–ಜಾಣನುಡಿಗಳನ್ನು ಆಯಾ ಸಂದರ್ಭಗಳಿಗೆ ಚೆನ್ನಾಗಿ ಹೊಂದಿಕೊಳ್ಳುವಂತೆ ದಾಸರು ಪೋಣಿಸಿರುವುದೂ ಕಂಡುಬರುತ್ತದೆ.

ಕನಕದಾಸರು ತಮ್ಮ ಮೋಹನತರಂಗಿಣಿಯನ್ನು ತಮ್ಮ ಪ್ರೇಯಸಿಗೆ "ಮದ್ವಲ್ಲಭೆ" ಗೆ ಹೇಳಿರುವುದಾಗಿ ಬರೆದಿದ್ದಾರೆ.

"ಕೃತಿವೇಳ್ದ ಕನಕದಾಸೋತ್ತಮ, ಕೇಳ್ದವಳತಿ ಸುಜ್ಞಾನಿ ವಧೂಟಿ"! ಧರ್ಮಪತ್ನಿಯ ಬಿನ್ನಹದಂತೆ ಕನಕದಾಸರು ಆಕೆಗೆ ಮೋಹನತರಂಗಿಣಿ ಕಾವ್ಯವನ್ನು ಸುರಸವಾಗಿ ಸರಸವಾಗಿ ರಚಿಸಿ ಹೇಳಿದರು. ಈ ಕಾವ್ಯದ ಪ್ರತಿ ಸಂಧಿಯಲ್ಲೂ ಆವರೆಗೆ ತಾನು ಆನಂದದಿಂದ ಕೇಳಿದ ಕಾವ್ಯ ಕಥೆಯ ಸ್ವಾರಸ್ಯವನ್ನು ಸಾರವನ್ನು ಹೇಳಿ, ಮುಂದುವರಿಸುವಂತೆ ಕವಿಗೆ ಸೂಚಿಸುತ್ತಾಳೆ. ಅಲ್ಲದೆ ಕಾವ್ಯ ಎಂತಹುದು ಎಂಬ ವಿಚಾರವಾಗಿ ಆ ದಂಪತಿಗಳಲ್ಲಿ ಸಂಭಾಷಣೆ ಹೀಗೆ ನಡೆಯುತ್ತದೆ.

ಗುಟ್ಟುಡರದೆ ಕಾದ ಚಿಲಿಪಾಲು ಮಕ್ಷಿಕೋ
ಚ್ಛಿಷ್ಟವಿಲ್ಲದ ಜೇನುತುಪ್ಪ
ಕಟ್ಟುಬೀಳದ ಸಕ್ಕರೆಯಿಂದೆ ಸವಿವಾತ
ನೆಟ್ಟಗೆ ಪೇಳ್ವುದೆನ್ನೊಡನೆ
ವಾಣಿಯಧವನೆಂಬ ವ್ಯವಹಾರಿ ಪಟ್ಟಿಯ
ಗೋಣಿಯೊಳ್ತುಂಬಿದ ರತ್ನ
ಓಣಿಯೊಳ್ಚೆಲ್ಲಿದಂತಿದೆ ನಿನ್ನ ಕೃತಿಯೆಂಬ
ಮಾಣಿಕ ಮನ್ಮನೋನಾಥ !

ಎಂದು ಪತ್ನಿ ಹೇಳಿದರೆ

ತಾಟಂಕ ಸೂಡಿದ ತವ ಕಿವಿಗೊಳನ
ಕೋಡಿ ಬೀಳ್ವಂತೆ ತುಂಬಿಸುವೆನು
ಕಡುರುಚಿಮಾಡಿ ಮೋಹನತರಂಗಿಣಿಯ
ನಾಡೊಳಗುಳ್ಳ ಜಾಣರು ಜಾಣೆಯರೊಡ
ನಾಡುವ ಸವಿವಾತುಗಳ
ಪಾಡುಗಬ್ಬವ ಪ
ರುಠವಿಸಿದ ಬಗೆಯ ನೀ
ನೋಡು ಮಾನಿನಿ ಮುಂದೆ ಮುಂದೆ

ಎಂದು ಕವಿಪತಿ ಕನಕದಾಸರು ಹೇಳುತ್ತಾರೆ !

ಕಾವ್ಯ ಹೇಳುವ ಕವಿಯ ಈ ರಸಿಕ ಕ್ರಮ ನಮ್ಮಲ್ಲಿ ಅಲ್ಲಲ್ಲಿ ಕೆಲವರು ಅನುಸರಿಸಿದ್ದರೂ, ಅಪೂರ್ವವೇ. ಮುದ್ದಣ ಕವಿ ಈ ಬಗೆಯಲ್ಲಿ ಪ್ರಸಿದ್ಧನಾಗಿದ್ದಾನೆ. ಕಸರತ್ತಿನೋಜ ಕನ್ನಡ ಪಂಡಿತ ಕವಿ ಮುದ್ದಣನಿಗೆ ಮೇಲ್ಪಂಕ್ತಿ ವೈರಾಗ್ಯ ಶಿಖಾಮಣಿಯೂ ಹರಿದಾಸ ಪುಂಗವರೂ ಆದ ಕನಕದಾಸರು ಎಂದರೆ ಅಚ್ಚರಿಯಾಗಬಹುದು.

ಕಲಕಂಠ ನಿನ್ನಯ ಸವಿವಾತು····ಪ
ರಲೋಕ ನಂಟರು ಕೇಳುವಂತುಸಿರು····

ಜಾಣರ ಜ್ಞಾನ ಲೋಚನಕೆ
ಕಾಣಬರ್ಪಂತೆ ಕನ್ನಡ ವಾಕ್ಯದೆ ನೆರೆ
ಜಾಣ ಸತ್ಕೃತಿಯ ವಿಸ್ತರಿಸು

ಎನ್ನುತ್ತಾಳೆ ಕವಿಸತಿ. ಅದಕ್ಕೆ ಉತ್ತರವಾಗಿ ಕವಿ ಕನಕದಾಸರು

ಕಡುಜಾಣವೆಣ್ಣುಗಳಧಿದೇವಿ–ಕೆಳದಿ ಕೇಳು
ಗಿಣ್ಣುಗೊಳ್ಳದ ಬೆಳ್ಗಬ್ಬಿನ ರಸದಂತೆ
ಬಣ್ಣಿಸುವೆನು ಕಥಾಮೃತವ····

ಎಂದು ಪ್ರತಿಜ್ಞೆ ಮಾಡುತ್ತಾರೆ.

ಇಂತಹ ಪ್ರತಿಜ್ಞೆಯಿಂದ ಹೊರಟ ಮೋಹನತರಂಗಿಣಿ ಸತಿಪತಿಗಳ ಸರಸ ಸಲಾಪದಿಂದ ಮುಂದುವರಿಯುತ್ತಾ ಒಳ್ಳೆಯ ಶೃಂಗಾರಕಾವ್ಯವೆಂಬಂತೆ ರಚಿತವಾಗಿದ್ದರೂ, ಮೋಹನತರಂಗಿಣಿಯಲ್ಲಿ ವೀರರಸ ಭಕ್ತಿರಸಗಳಿಗೇನೂ ಕೊರತೆಯಿಲ್ಲ. ಅಲ್ಲಿಯ ಮುಖ್ಯ ರಸಗಳೇ ಅವು. ಹರಿದಾಸ ಪರಂಪರೆಗೆ–ಲಕ್ಷಣಕ್ಕೆ ಅನುಗುಣವಾದ ಹರಿಭಕ್ತಿರಸ ಯಥೇಷ್ಟವಾಗಿ ಇಲ್ಲಿ ದೊರೆಯುತ್ತದೆ.

ವಿಜಯನಗರದ ಐಶ್ವರ್ಯ-ವೈಭವಗಳನ್ನು ಇತಿಹಾಸಕಾರರು ಬಾಯಿತುಂಬ ಬಣ್ಣಿಸಿದ್ದಾರೆ. ವಿಜಯನಗರದ ವೈಭವಕಾಲದಲ್ಲೇ, ಕೆಲಕಾಲ ರಾಜಧಾನಿ ವಿಜಯನಗರದಲ್ಲೇ ಇದ್ದ ಕನಕದಾಸರು ಮೋಹನತರಂಗಿಣಿಯಲ್ಲಿ ಕೃಷ್ಣದೇವರಾಯನನ್ನೂ–ರಾಜಧಾನಿಯ ವೈಭವವನ್ನೂ ದ್ವಾರಾವತಿಯ ನೆವದಲ್ಲಿ ವರ್ಣಿಸಿದ್ದಾರೆ.

ಹಡಗಿನ ವ್ಯವಹಾರದಿ
ಹಣವ ಭಾರಸಂಖ್ಯೆಯಲಿ ತೂಗುವರು
ಬೇಡಿದರೆ ಕುಬೇರಂಗೆ ಕಡವ ಕುಡುವರು

ಎಂಬ ಈ ಮಾತು ವಿಜಯನಗರವನ್ನೇ ಕುರಿತು ಆಡಿದ ಮೆಚ್ಚಿಕೆಯ ಮಾತು ಎಂಬುದರಲ್ಲಿ ಸಂದೇಹವಿಲ್ಲ. ಕುಬೇರನಿಗೂ ಬೇಕಾದರೆ–ಕೇಳಿದರೆ (ಬೇಡಿದರೆ)

ಸಾಲ ಕೊಡುವಷ್ಟು ಸಂಪತ್ತು ವಿಜಯನಗರದಲ್ಲಿತ್ತು, ಎಂಬುದು ಕೇವಲ ಉತ್ಪ್ರೇಕ್ಷೆಯಾಗದೆ ಸತ್ಯವಾದ ಜಾಣನುಡಿಯೂ ಆಗಿದೆ.

ಮೋಹನತರಂಗಿಣಿಯನ್ನು "ಮದನಾಗಮದ ಶ್ರೀಕಾರದಂತಿರ್ಪ ಸದತಿಗೆ" ಚಿತ್ರಿಸಿದರಂತೆ! "ಕೇಳ್ವರಿಗದು ತನಿಬೆಲ್ಲದಚ್ಚಂತೆ!"

ಹೀಗೆ ಮೋಹನತರಂಗಿಣಿ ಭಕ್ತಕವಿಯಿಂದ ರಚಿತವಾಗಿದ್ದರೂ, ಶೃಂಗಾರ ವರ್ಣನೆಯ ಜಾಣ್ಮೆಯಿಂದೊಡಗೂಡಿದೆ. ಹರಿಭಕ್ತಿಸಾರ ಮತ್ತು ಅವರ ಅನೇಕ "ದೇವರನಾಮ"ಗಳಲ್ಲಿ ಕನಕದಾಸರ ಜ್ಞಾನ ಭಕ್ತಿ ವೈರಾಗ್ಯಗಳನ್ನೂ, ಅವರ ಸಮಾಜದರ್ಶನವನ್ನೂ, ಹಾಸ್ಯ ವಿಡಂಬನೆಗಳನ್ನೂ, ಸಮಾಜ ಸುಧಾರಕ ಲಕ್ಷಣಗಳನ್ನೂ ಚೆನ್ನಾಗಿ ಕಾಣಬಹುದು.

ಕನಕದಾಸರ ಹರಿಭಕ್ತಿಸಾರವಂತೂ ಅವರ ಪರಿಪಕ್ವ ಹೃದಯದ್ಯೋತಕವಾಗಿದೆ. "ರಕ್ಷಿಸು ನಮ್ಮನನವರತ" ಎಂದು ಪ್ರತಿ ಪದ್ಯದ ಕೊನೆಯಲ್ಲೂ ಬರುವ ಈ ನೂರೆಂಟು ಷಟ್ಪದಿಗಳ ಝೇಂಕಾರ ಕನ್ನಡಿಗರ ಕಿವಿಯಲ್ಲಿ ಚಿರಕಾಲ ಉಳಿಯುವಂತಹುದು. ಆ ನಾದಮಾಧುರ್ಯವನ್ನು ಸವಿಯುವ ಭಾಗ್ಯವನ್ನು ಕನಕದಾಸರು ತಮ್ಮ ತಾಯ್ನುಡಿಯ ಬಳಗದವರಿಗೆ ಒದಗಿಸಿ ಮಹೋಪಕಾರ ಮಾಡಿದ್ದಾರೆ.

ಎಂಜಲನ್ನು ಕುರಿತ ಅವರ ವ್ಯಾಖ್ಯಾನ ತುಂಬ ಸ್ವಾರಸ್ಯವಾಗಿದೆ.

ಎಂಜಲೆಂಜಲು ಎಂಬರಾ ನುಡಿ
ಎಂಜಲಲ್ಲವೆ ವಾರಿಜಲಚರ
ದೆಂಜಲಲ್ಲವೆ ಹಾಲು ಕರುವಿನ ಎಂಜಲೆನ್ನಿಸದೆ?
ಎಂಜಲೆಲ್ಲಿಯದೆಲ್ಲಿಯುಂ ಪರ
ರೆಂಜಲಲ್ಲದೆ ಬೇರೆ ಭಾವಿಸ
ಲೆಂಜಲುಂಟೇ ದೇವ ರಕ್ಷಿಸು ನಮ್ಮನನವರತ

ಮಾನವನಿಗೆ ಪೂರ್ಣಾಯಸ್ಸು ಎಂದರೆ ನೂರು ವರ್ಷ ಎಂದು ಹೇಳುವ ವಾಡಿಕೆಯುಂಟು. ಪೂರ್ಣವಾಗಿ ನೂರು ವರ್ಷ ಬದುಕುವವರೂ ಅಪೂರ್ವವೇ ತಾನೆ? ಆ ನೂರು ವರ್ಷದಲ್ಲಿ ಆಧ್ಯಾತ್ಮಿಕ ಸಾಧನೆಗೆ ದೊರೆಯುವುದು ಎಷ್ಟು ಕಾಲ ಎಂಬುದನ್ನು ಕನಕದಾಸರು ಲೆಕ್ಕಮಾಡಿ ಹೇಳುತ್ತಾರೆ.

ವರುಷ ನೂರಾಯುಷ್ಯವದರೊಳ
ಗಿರುಳು ಕಳೆದೈವತ್ತನೈವ
ತ್ತರಲಿ ವಾರ್ಧಿಕ ಬಾಲ್ಯ ಕೌಮಾರದಲಿ ಮೂವತ್ತು
ಇರದೆ ಸಂದುದು ಬಳಿಕ ಇಪ್ಪ
ತ್ತೊರುಷವದರೊಳಗಾದುದುದಂತಃ
ಕರಣ ನಿನ್ನೊಳು ತೋರಿ ರಕ್ಷಿಸು ನಮ್ಮನನವರತ

ದೇಹ ನಶ್ವರ ಅಶಾಶ್ವತ. ಆದರಲ್ಲಿ ಪರಮಾತ್ಮನ ಸಾನ್ನಿಧ್ಯವಿರುವವರೆಗೆ ಮಾತ್ರ ಅದು ದೇಹ. ಇಲ್ಲದಿದ್ದರೆ ಅದು ಹೆಣ ಎನ್ನಿಸಿಕೊಳ್ಳುವುದು ಎಂಬುದನ್ನು, ಮಾನವದೇಹದ ರಚನೆಯನ್ನು, ಕನಕದಾಸರು ತಮ್ಮ ಹರಿಭಕ್ತಿಸಾರದ ಒಂದು ಷಟ್ಪದಿಯಲ್ಲಿ ಸೊಗಸಾಗಿ ಬಣ್ಣಿಸಿದ್ದಾರೆ.

ಎಂಟು ಗೇಣಿನ ದೇಹ ರೋಮಗ
ಳೆಂಟು ಕೋಟಿಯು ಕೀಲ್ಗಳರವ
ತ್ತೆಂಟು ಮಾಂಸಗಳಿಂದ ಮಾಡಿದ ಮನೆಯ ಮನವೊಲಿದು
ನೆಂಟ ನೀನಿರ್ದಗಲಿದೊಡೆ ಒಣ
ಹೆಂಟೆಯಲಿ ಮುಚ್ಚುವರು ದೇಹದ
ಲುಂಟೆ ಫಲಪುರುಷಾರ್ಥ ರಕ್ಷಿಸು ನಮ್ಮನನವರತ

ದೇಹ ಶವವಾಗದಂತೆ ಅಲ್ಲಿದ್ದು ರಕ್ಷಿಸುವ ಪರಮಾತ್ಮನಿಗೂ ಜೀವಾತ್ಮನಿಗೂ ಇರುವ ವ್ಯತ್ಯಾಸ ಅಗಾಧವಾದುದು.

ದೀನ ನಾನು ಸಮಸ್ತಲೋಕಕೆ
ದಾನಿ ನೀನು ವಿಚಾರಿಸಲು ಮತಿ
ಹೀನ ನಾನು ಮಹಾಮಹಿಮ ಕೈವಲ್ಯಪತಿ ನೀನು
ಏನ ಬಲ್ಲೆನು ನಾನು ನೆರೆ ಸು
ಜ್ಞಾನ ಮೂರುತಿ ನೀನು ನಿನ್ನ ಸ
ಮಾನರುಂಟೇ ದೇವ ರಕ್ಷಿಸು ನಮ್ಮನನವರತ

ಈ ತರತಮ ಭಾವವನ್ನು ಇನ್ನೂ ವಿಸ್ತರಿಸಿ ಕನಕದಾಸರು ಭಕ್ತಿರಸ ಭರಿತವಾದ ಯುಕ್ತಿಯುಕ್ತವಾದ ಒಂದು ಸೊಗಸಾದ ದೇವರನಾಮವನ್ನು ರಚಿಸಿದ್ದಾರೆ.

ಏನೆಂದು ಕೊಂಡಾಡಿ ತುತಿಸಲೋ ದೇವ
ನಾನೇನು ಬಲ್ಲೆನೊ ನಿಮ್ಮಯ ಮಹಿಮೆ ಘನವ

ಹರಿಮುಕುಂದನು ನೀನು। ನರಜನ್ಮಹುಳ ನಾನು
ಪರಮಾತ್ಮನು ನೀನು। ಪಾಮರನು ನಾನು
ಗರುಡಗಮನನು ನೀನು। ಮರುಳು ಪಾಪಿಯು ನಾನು
ಪರಂಜ್ಯೋತಿಯು ನೀನು। ತಿರುಕನೋ ನಾನು

ವಾರಿಧಿಶಯನನಾದ ಕಾರುಣ್ಯ ಮೂರುತಿ ನೀನು
ಘೋರದಿಂದಿಹ ಕಾಮಕ್ರೋಧಿ ನಾನು
ಈರೇಳು ಭುವನದೊಳು ಇರುವ ಮೂರುತಿ ನೀನು
ದೂರಿ ನಿಮ್ಮನು ಬೈವ ದುಷ್ಟ ನಾನು

ಅಣುರೇಣು ತೃಣಗಳಲಿ ಪರಿಪೂರ್ಣನು ನೀನು
ಕ್ಷಣಕ್ಷಣಕೆ ಅವಗುಣ ಕುಕರ್ಮಿ ನಾನು
ವಾಣಿಯರಸನ ಪೆತ್ತ ವೈಕುಂಠಪತಿ ನೀನು
ತನುನಿತ್ಯವಲ್ಲದ ಗೊಂಬೆ ನಾನು

ಕಂಬದಿಂದಲಿ ಬಂದ ಆನಂದ ಮೂರುತಿ ನೀನು
ನಂಬಿಕಿಲ್ಲದ ಪ್ರಪಂಚಿಗನು ನಾನು
ಅಂಬರೀಷಗೆ ಒಲಿದ ಅಕ್ರೂರಸಖ ನೀನು
ಡಂಭ ಕರ್ಮಿಯು ನಾನು ನಿರ್ಜಿತನು ನೀನು

ತಿರುಪತಿಯು ವಾಸ ಶ್ರೀವೆಂಕಟೇಶನು ನೀನು
ಸ್ಮರಿಸಿ ನಿನ್ನಯ ನಾಮ ಬದುಕುವವ ನಾನು
ಬಿರುದುಳ್ಳವನು ನೀನು ಮೊರೆಹೊಕ್ಕವನು ನಾನು
ಸಿರಿಕಾಗಿನೆಲೆಯಾದಿಕೇಶವನು ನೀನು

ಕನಕದಾಸರು ಬಹು ಚಮತ್ಕಾರವಾಗಿ ಮಾತನಾಡುತ್ತಿದ್ದರು ಎಂದು ಪ್ರತೀತಿ. ಆ ಚಮತ್ಕಾರದೊಂದಿಗೆ ಅವರ ಮಾತುಗಳು ತುಂಬ ಅರ್ಥಗರ್ಭಿತ ವಾಗಿರುತ್ತಿದ್ದುವು.

ಒಮ್ಮೆ ಮೋಕ್ಷಕ್ಕೆ ಹೋಗುವವರು ಯಾರು ಎಂಬ ಪ್ರಶ್ನೆ ಸಭೆಯೊಂದರಲ್ಲಿ ಬಂದಾಗ ಹಲವರು ಹಲವು ರೀತಿಯಲ್ಲಿ ವ್ಯಾಖ್ಯಾನಮಾಡಿದರು. ಕನಕದಾಸರು ತುಂಬ ಜಾಣ್ಮೆಯ ಮಾತನ್ನಾಡಿದರು.

"ನಾನು ಹೋದರೆ ಹೋದೇನು"

ಹೊರನೋಟಕ್ಕೆ ತಮ್ಮನ್ನೇ ಕುರಿತು ಅವರು ಹೇಳಿದರು ಎಂದು ಇದರಿಂದ ತೋರುವುದಾದರೂ, ಇದರ ಒಳ ಅರ್ಥ ತುಂಬ ಆಳ-ಮಾರ್ಮಿಕ, ಆದರೆ ಶಾಸ್ತ್ರ ಸಮ್ಮತ. "ನಾನು" ಎಂಬ ಅಹಂಕಾರ ಭಾವನೆ ಯಾರಲ್ಲಿರುವುದಿಲ್ಲವೋ, ಯಾರಿಂದ ದೂರ ಹೋಗಿರುತ್ತದೋ ಅವರು ಮೋಕ್ಷಕ್ಕೆ ಹೋಗಲು ಅರ್ಹರು ಎಂಬ ಅರ್ಥ ಅದರಿಂದ ಹೊರಡುತ್ತದೆ. ಭವಬಂಧನಕ್ಕೆ ಮುಖ್ಯಕಾರಣ ಅಹಂಕಾರ-ಮಮಕಾರಗಳು ತಾನೆ? ಅವುಗಳನ್ನು ಪೂರ್ಣವಾಗಿ ಬಿಟ್ಟರೆ ಸಾತ್ವಿಕರಾಗುತ್ತಾರೆ. ಮೋಕ್ಷಕ್ಕೂ ಅರ್ಹರಾಗುತ್ತಾರೆ.

ಕನಕದಾಸರು ಒಮ್ಮೆ ತಿರುಪತಿಯ ಬೆಟ್ಟವನ್ನು ಗೋವಿಂದ ನಾಮಸ್ಮರಣೆ ಯೊಂದಿಗೆ ಭಕ್ತಿಭರಿತರಾಗಿ ಹತ್ತುತ್ತಿದ್ದಾಗ, ಅವರನ್ನು ಎದುರುಗೊಳ್ಳಲು ಬಂದ ದೇವಸ್ಥಾನದ ಅಧಿಕಾರಿಯೊಬ್ಬ ದಾಸರ ಪರಿಚಯವಿಲ್ಲದ ಕಾರಣ ಹುಡುಕುತ್ತಾ ಬಂದು, ಆಕಸ್ಮಿಕವಾಗಿ ಅವರನ್ನೇ ಕೇಳಿದನಂತೆ—ಕನಕದಾಸರನ್ನು ಕಂಡೆಯಾ ಎಂದು. ಆತ ಯೋಚಿಸಿದ್ದ ಕನಕದಾಸರ ಚಿತ್ರವೇ ಬೇರೆಯಾಗಿದ್ದಿರಬೇಕು.

ಆತನ ಕಾಲ್ಪನಿಕ ಕನಕದಾಸರ ಮುಂದೆ ನಿಜವಾದ ಕನಕದಾಸರೇ ಸುಳ್ಳಾಗಿ ಕಂಡರು! ಒಂದು ಕ್ಷಣ ಆತನ ಮುಖವನ್ನು ನೋಡಿ ಕನಕದಾಸರು ಮುಗುಳು ನಗೆಯಿಂದ

"ಮುಂದೆ ಬರುವರ ಹಿಂದೆ; ಹಿಂದೆ ಬರುವರ ಮುಂದೆ"

ಎಂದು ನುಡಿದವರೇ ತಂಬೂರಿಯನ್ನು ಝೇಂಕರಿಸುತ್ತ ತಲೆತಗ್ಗಿಸಿಕೊಂಡು ವೆಂಕಟೇಶನನ್ನು ಸ್ತುತಿಸುತ್ತ ಮುಂದೆ ನಡೆದೇಬಿಟ್ಟರು. ಪರೋಕ್ಷವಾಗಿ ಕನಕದಾಸರು ತಾವೇ ಎಂದು ಸೂಚಿಸಿದರೂ, ಅದು ಆ ಅಧಿಕಾರಿಗೆ ಅರ್ಥವಾಗದೆ ದಾಸರಿಗೆ ಮರ್ಯಾದೆ ಮಾಡಿ ಕರೆದುಕೊಂಡು ಹೋಗುವ ಪುಣ್ಯ-ಯೋಗ ಲಭ್ಯವಾಗಲಿಲ್ಲ!

"ಯಾರೂ ಇಲ್ಲದೆಡೆ ಬಾಳೇಹಣ್ಣನ್ನು ತಿಂದು ಬನ್ನಿ" ಎಂದು ಗುರು ಶ್ರೀವ್ಯಾಸರಾಜರು ಅಪ್ಪಣೆ ಮಾಡಿದಾಗ ಕನಕದಾಸರು ಪರಮಾತ್ಮನ ಪರಿವಾರ-ತತ್ತ್ವಾಭಿಮಾನಿ ದೇವತೆಗಳು ಇಲ್ಲದಿರುವ ಸ್ಥಳವೇ ಯಾವುದೂ ಇಲ್ಲ ಎಂಬ ತತ್ತ್ವಜ್ಞಾನವನ್ನು ಅನುಷ್ಠಾನಕ್ಕೆ ತಂದುಕೊಂಡು ಬಾಳೇಹಣ್ಣನ್ನು ತಿನ್ನದೆಯೇ ಗುರುಗಳ ಮುಂದಿಟ್ಟರು. ಇತರ ಬುದ್ಧಿವಂತರನೇಕರು ಅದನ್ನು ಮರೆತು ಎಲ್ಲೆಲ್ಲೋ ಏಕಾಂತಸ್ಥಳ ಹುಡುಕಿ ಹಣ್ಣನ್ನು ಬೇಗ ಬೇಗ ಗಬಗಬನೆ ನುಂಗಿ ಬಂದರು! ಕನಕದಾಸರ ತತ್ತ್ವಜ್ಞಾನದ ಅರಿವು ಮತ್ತು ಅದರ ಅನುಷ್ಠಾನ ಮತ್ತು ಜಾಣ್ಮೆಗಳಿಗೆ ಇದಕ್ಕಿಂತ ಉತ್ತಮ ಉದಾಹರಣೆ ಬೇಕೆ?

ಕನಕದಾಸರ ಅನೇಕ ಕೃತಿಗಳ ಪಲ್ಲವಿಗಳೇ ಬಹು ಅರ್ಥಗರ್ಭಿತವೂ, ಮನೋಹ್ಲಾದಕರವೂ ಆದ ಜಾಣನುಡಿಗಳಾಗಿವೆ.

ನೀ ಮಾಯೆಯೊಳಗೊ ನಿನ್ನೊಳು ಮಾಯೆಯೊ?
ಎಲ್ಲಾರು ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ!
ತಲ್ಲಣಿಸದಿರು ಕಂಡ್ಯ ತಾಳು ಮನವೆ!
ಆರಿಗಾರಿಲ್ಲ ಆಪತ್ಕಾಲದೊಳಗೆ!
ಕೇಶವನೊಲುಮೆಯು ಆಗುವತನಕ ಹರಿದಾಸರೊಳಿರುತಿರು.
ನರಕವಿಗಳ ಮುಂದೆ ನರಕವಿಗಳ ವಿದ್ಯೆ ತೋರಬಾರದು.
ತನು ನಿನ್ನದು ಜೀವ ನಿನ್ನದು.
ದಾಸನಾಗೋ ಭವಪಾಶ ನೀಗೊ.
ಯಾರಿಗಾರೂ ಬರರು ಸಂಗಡ.
ಸಾಕು ಸಾಕು ಮನುಜ ಸೇವೆಯು.
ಅಜ್ಞಾನಿಗಳ ಕೂಡೆ ಅಧಿಕ ಸ್ನೇಹಕ್ಕಿಂತ ಸುಜ್ಞಾನಿಗಳ ಕೂಡೆ ಜಗಳವೇ ಲೇಸು.

ಆರಿಗಾದರೂ ಪೂರ್ವಕರ್ಮ ಬಿಡದು.
ಸತ್ಯವಂತರ ಸಂಗವಿರಲು ತೀರ್ಥವೇತಕೆ?

ಈ ಸುಂದರವೂ ಸ್ವಾರಸ್ಯವೂ ಆದ ಪಲ್ಲವಿಗಳನ್ನನುಸರಿಸಿ ಅವುಗಳನ್ನು ವಿಸ್ತರಿಸುವ ಸಮರ್ಥಿಸುವ ಹಲವು ನುಡಿಗಳಲ್ಲಿಯೂ ದಾಸರ ಜಾಣ್ಮೆಯನ್ನು ಗುರುತಿಸ ಬಹುದು. ಇತರ ನೂರಾರು ದೇವರನಾಮಗಳಿಂದಲೂ, ನಳಚರಿತ್ರೆ, ಮೋಹನ ತರಂಗಿಣಿ, ರಾಮಧಾನ್ಯಚರಿತೆ, ಹರಿಭಕ್ತಿಸಾರ ಎಂಬ ಕೃತಿಗಳಿಂದಲೂ ಅನೇಕ ಜಾಣನುಡಿಗಳೆಂಬ ಆಣಿಮುತ್ತುಗಳನ್ನು ಆರಿಸಬಹುದು. ಕೆಲವನ್ನು ಮಾತ್ರ ಇಲ್ಲಿ ಸೂಚಿಸಲಾಗಿದೆ.

ಭಕ್ತರಿಗುಂಟೆ ಭಯ?
(ಪರಮಾತ್ಮ) ಇಲ್ಲಿಹನು ಅಲ್ಲಿಲ್ಲವೆಂಬೀ ಸೊಲ್ಲು ಸಲ್ಲದು
ಗಾಳಿಗೊಡ್ಡಿದ ಸೊಡರು ಈ ಸಂಸಾರ

ವಾಲಾಖ್ಯನಿಂದ ದಮಯಂತಿಯ ವರ್ಣನೆಯನ್ನು ಕೇಳಿ ಬಾಹುಕನ ವೇಷದಲ್ಲಿದ್ದ ನಳ ತನ್ನ ಸ್ಥಿತಿಯನ್ನು ನೆನೆದು ಹಲುಬುವನು. ಅದನ್ನು ಕಂಡು ಅಪಾರ್ಥ ಮಾಡಿಕೊಂಡ ವಾಲಾಖ್ಯ "ಮಕರ ಕೇತನ ಮರುಳ" ಎನ್ನುತ್ತಾನೆ! ಎಲ್ಲೋ ರಾಜಸೇವಕನಾದ ಈ ಕುರೂಪಿ ಬಾಹುಕ ಮತ್ತೆಲ್ಲೋ ಇರುವ ರಾಜಕುಮಾರಿ ದಮಯಂತಿಯ ತ್ರಿಲೋಕಸೌಂದರ್ಯವನ್ನು ಕೇಳಿ ಹಲುಬುವನಲ್ಲ. ಆಕೆಯೆಲ್ಲಿ, ಈ ಕುರೂಪಿಯೆಲ್ಲಿ? ಆಕೆಯ ಮೇಲೆ ಇವನ ಮನಸ್ಸು ಹೋಯಿತೆ? ಅಯ್ಯೋ ಮನ್ಮಥ ಎಷ್ಟು ಮೂರ್ಖ ಹುಚ್ಚ ಎಂದು ಠೀವಿಯಿಂದ ನಗುತ್ತಾನೆ, ಕನಕದಾಸರ ವಾಲಾಖ್ಯ ನಳಚರಿತ್ರೆಯಲ್ಲಿ! ನಳಚರಿತ್ರೆಯಿಂದ ಆಯ್ದ ಇನ್ನೂ ಕೆಲವು ಜಾಣ ನುಡಿಗಳು ಹೀಗಿವೆ:

ಕರಿಗಳನು ಮುರಿದಿಡುವ ಸಿಂಹಕೆ ನರಿಗಳಿದಿರೆ?
ಕುಲಗಿರಿಗೆ ನೊರಜಂತರವಲ್ಲ ವಾದಕರಿಗೆ ನೊರಜಂತರವೆ?
ಕಂತೆಗೆ ತಕ್ಕ ಬೊಂತೆ!
ನಿನ್ನಡಿ ನೆಳಲಿನಲ್ಲಿರೆ ಹಳುವವೇ ಸಾಮ್ರಾಜ್ಯ.
ನೀನಿಲ್ಲದ ನಿಲಯವೇ ನನಗಡವಿ.
ಮಾಣಿಕವೆಂದು ಪಿಡಿದರೆ ಭೂರಿ ಕೆಂಡವಿದಾಯ್ತು.
ಬಡವಗೌತಣವಿಕ್ಕುವೆಡೆಯೊಕ್ಕುಡಿತೆ ಹಾಲೆ?
ಮಂಜು ಸುರಿಯಲಿ ಕೆರೆ ತುಂಬುವುದೆ?
ಮುಂಗೈ ಕಂಕಣಕೆ ಕನ್ನಡಿಯೇಕೆ?



ಶ್ರೀಕನಕದಾಸರು ಉಪಯೋಗಿಸುತ್ತಿದ್ದ ವಸ್ತುಗಳು :
(1) ಬೆತ್ತದ ಕಡ್ಡಿ, (2) ಊಟಮಾಡುತ್ತಿದ್ದ ಮರದ ತಳಿಗೆ, (3) ಶಂಖ ಮತ್ತು (4) [illegible]

ಮೋಹನ ತರಂಗಿಣಿಯಿಂದ:

ಒಗೆತನ ಬಿಟ್ಟು ಹೋಹಾಗ ಹಾಲಿಗೆ ಹೆಪ್ಪನೊಗದಿಕ್ಕಿದವರಾರುಂಟು?
ಹರಿಯ ಕೀರ್ತನೆಗೈಯದ ಜಿಹ್ವೆ ಕಡಲನಾಲಗೆ
ಕನಸಿನ ಬತ್ತಕೆ ಗೋಣಿಯನಾಂತರು!
ಕರಗಸವೆತ್ತ ಕಂದಳಿಯೆತ್ತ!
ಗಜವೆತ್ತ ಕಂಠೀರವವೆತ್ತ?
ಭುಜಗಭೂಷಣನೆತ್ತ ಸ್ಮರನೆತ್ತ?
ವಜ್ರವೆತ್ತ ಆಲಿಕಲ್ಲೆತ್ತ?
ತಲೆ ಬಲ್ಲಿತೆಂದು ಕಲ್ಲನೆ ಹಾಯಬೇಡ
ಭುಜಗ ಸಮೂಹವ ಖಗರಾಜ ಹೊಕ್ಕಂತೆ
ಮಕ್ಕಳ ಪಡೆಯದ ಮಡದಿಯ ಸಂಸಾರ ದುಃಖದ ಮಡುವಿನಂತೆ!
ವಿಷಯಾತುರಗೆ ವಿವೇಕವಿಲ್ಲ.
ಸೊಕ್ಕಾನೆ ಸಿಂಗದೋಳ್ ಕದನವ ಕಟ್ಟಿಕೊಂಡಂತೆ.
ಹುತವಹನೆಡೆಯೊಳು ಹುದುಗಿರ್ದ ಚಿನ್ನಕ್ಕೆ ಹಿತವಾಗಿ ಬಣ್ಣ ಬಂದಂತೆ.

ಕೀರ್ತನೆಗಳಿಂದ:

ಪಾಪಿಗಳಿದ್ದಲ್ಲಿ ರೂಪುಳ್ಳ ವಸ್ತು ತೋರಬಾರದು.
ಬಡತನ ಬಂದಾಗ ನೆಂಟರ ಬಾಗಿಲ ಸೇರಬಾರದು.
ಪುತ್ಥಳಿ ಬೊಂಬೆಯ ಚಿತ್ರದಿ ಬರೆದು ಮುತ್ತನು ಕೊಟ್ಟರೆ ನುಡಿದೀತೆ?
ನ್ಯಾಯವ ಬಿಟ್ಟನ್ಯಾಯವ ಪೇಳುವ ನಾಯಿಗೆ ನರಕವು ತಪ್ಪೀತೆ?
ಹಸಿದು ಬಂದವರಿಂಗೆ ಅಶನವೀಯಲು ಬೇಕು.
ಸಿರಿಬಂದ ಕಾಲಕ್ಕೆ ಮೆರೆಯಬೇಡ.
ಸರಸವಿಲ್ಲದ ಸತಿಯ ಭೋಗ ತನುರೋಗ!
ದಂತಿಯಿಲ್ಲದ ಅರಸು ಮುರಿದ ಕಾಲಿನ ಗೊರಸು!
ಭೋಗಿಸದೆ ಇಹಪರಕೆ ಗಳಿಸಿದರ್ಥ ಅಪಾರ್ಥ!
ಭೀಮನೆಂಬುವರಿಗೆ ಯಾತರ ಭಯವಿಲ್ಲ!
ದೇವರಿಲ್ಲದ ಗುಡಿಯು ಹಾಳುಬಿದ್ದಂಗಡಿಯು.
ಮರ್ಮವಿಲ್ಲದ ಮಾತು ಒಡಕುಮಡಕೆಯ ತೂತು!
ಮಕ್ಕಳಿಲ್ಲದ ಸಿರಿಯು ಕೊಳೆತ ತೆಂಗಿನ ತುರಿಯು!
ಉಂಡು ನಗದಿಹ ಮೋರೆ ಅದು ಕಹಿಯ ಸೋರೆ.
ತಾಯಿ ತೀರಿದ ಮೇಲೆ ತೌರಾಸೆಯೆ?
ಸತಿಯಿಲ್ಲದವಗೆ ಸಂಪದವೆಂಬುದುಂಟೆ?

ಆವ ಬಲವಿದ್ದರೇನು ದೈವಬಲವಿಲ್ಲದವಗೆ?
ನಿಂದಕರ ಸಂಗ ಬಹು ಭಂಗ.
ಕೊಟ್ಟವರಿಗುಂಟು ಕೊಡದವರಿಗಿಲ್ಲ.
ಎಷ್ಟು ಮಾಡಲು ಮುನ್ನ ತಾ ಪಡೆದಷ್ಟೆ!
ಈಗಲೋ ಈ ದೇಹ ಇನ್ನಾವಾಗಲೋ.
ಮುಕ್ತಿಗೆ ಭಕ್ತಿಯೇ ಕಾರಣ.
ನೀರಮೇಲಣ ಗುಳ್ಳೆಯಂದದಿ ತೋರಿಯಡಗುವ ದೇಹ.
ಬೀಜ ವೃಕ್ಷದೊಳಾಯ್ತು ವೃಕ್ಷಕೆ ಬೀಜವಾರಿಂದಾಯ್ತು?

ಹೀಗೆಯೇ ಈ ಪಟ್ಟಿಯನ್ನು ಇನ್ನೂ ಬೆಳೆಸಬಹುದು. ಈ ಮಾತುಗಳಲ್ಲಿ ಅನುಭವಸಂಪತ್ತು, ವಿವೇಕ, ಕಲ್ಪನೆ, ಚಮತ್ಕಾರ, ನೀತಿ, ಎಚ್ಚರಿಕೆ, ವೈರಾಗ್ಯ, ಮರುಕ ಮೊದಲಾದ ಭಾವಗಳಿದ್ದು ಅವುಗಳನ್ನು ಕೇಳಿದ ಕೂಡಲೇ ಅರಿವಿನ ಬೆಳಕು ಚೆಲ್ಲಿದಂತಾಗುತ್ತದೆ. ಅವು ಮನಸ್ಸನ್ನು ಆಕರ್ಷಿಸಿ ಆನಂದವನ್ನೀಯು ವುದೇ ಅಲ್ಲದೆ, ಅವುಗಳ ಅರ್ಥದ ಬೆಳಕಿನಲ್ಲಿ ನಾವು ನಡೆಯಬೇಕೆಂಬ ಮನ ಸ್ಸಾಗುತ್ತದೆ.

ಕನಕದಾಸರ ಈ ಜಾಣನುಡಿಗಳಿಗೆ ಕೇಳಿದವರ ಹೃದಯ ಮಾರುಹೋಗದೆ ಇರದು. ರಾಗ, ತಾಳ, ಲಯಬದ್ಧವಾಗಿ ಇವುಗಳನ್ನು (ಆಯಾ ಕೃತಿಗಳಲ್ಲಿ) ಹಾಡಿದರಂತೂ ಅವುಗಳಿಂದ ಒಸರುವ ರಸ-ಆನಂದ, ಆಗುವ ಪ್ರಭಾವ ಅಪಾರ.

ಹಲವು ಶತಮಾನಗಳಿಂದ ಕನ್ನಡ ನಾಡು ಈ ಜಾಣನುಡಿಭಂಡಾರವನ್ನು ಕಾಯ್ದುಕೊಂಡು ಬಂದಿದೆ. ಕಳೆದುಳಿದ ಈ ಖಜಾನೆಯನ್ನು ಜತನವಾಗಿಟ್ಟು ಕೊಳ್ಳುವುದರೊಂದಿಗೆ ಸಂಶೋಧನೆಮಾಡಿ ಮತ್ತಷ್ಟು ಅದಕ್ಕೆ ಸೇರಿಸಿ ಮುಂದಿನ ಪೀಳಿಗೆಗೆ ಆಸ್ತಿಯಾಗಿಡಬೇಕಾಗಿದೆ.

ಕಾಗಿನೆಲೆಯ ಕನಕನ ಮಾತು ಕನಕವೇ ಆಗಿದೆ.

# ಕರ್ಣಾಟಕ ಸಂಗೀತಕ್ಕೆ "ಶ್ರೀ ಕನಕದಾಸರ" ಕಾಣಿಕೆ

**ವಿದ್ವಾನ್ ಹೆಚ್. ಕೆ. ಅಶ್ವತ್ಥನಾರಾಯಣ ಶಾಸ್ತ್ರಿ, ಬೆಂಗಳೂರು–19**

ಹರಿದಾಸರೆಂದು ಪ್ರಸಿದ್ಧರಾದ ಅನೇಕ ಮಹನೀಯರು ವೈದಿಕಧರ್ಮ ಪ್ರತಿಪಾದನೆ, ಕರ್ಮ, ಇಹಪರಗಳ ಸುಖಸಾಧನೆ, ಸರ್ವೋತ್ತಮನಾದ ಹರಿಯ ಬಗ್ಗೆ ತಿಳುವಳಿಕೆ, ಭಕ್ತಿ, ವೈರಾಗ್ಯ, ಸಮಾಜದಲ್ಲಿನ ಲೋಪದೋಷಗಳನ್ನು ಕುರಿತು ಅವಹೇಳನ, ಸಚ್ಛಾಸ್ತ್ರನೀತಿ ಇವೇ ಮೊದಲಾದ ಹಲವಾರು ಬಗೆಯ ಉಪದೇಶಗಳನ್ನು, ಕೀರ್ತನೆ, ಸುಳಾದಿ, ಉಗಾಭೋಗಗಳ ರೂಪವಾಗಿ ಅಸಂಖ್ಯಾತ ಕವನಗಳನ್ನು ರಚಿಸಿದ್ದಾರೆ. ಅಂಥಾ ಮಹನೀಯರುಗಳಲ್ಲಿ ಅತಿ ಹೆಚ್ಚು ಪ್ರಸಿದ್ಧರೆಂದು ಹೆಸರು ಗಳಿಸಿದವರು ಪುರಂದರದಾಸರು ಹಾಗೂ ಕನಕದಾಸರು. ಈ ಈರ್ವರೂ ಸಾಮಾನ್ಯ ಜನತೆಯ ಒಕ್ಕೂಟಕ್ಕೆ ಶ್ರಮಿಸಿದವರು.

ಕನಕದಾಸರ ಕಾವ್ಯಸಂಪತ್ತು ಕನ್ನಡ ಸಾಹಿತ್ಯಕ್ಕೇ ಮೀಸಲಾಗಿರದೆ ಸಂಗೀತಕ್ಕೆ ಅವರು ನೀಡಿರುವ ಕಾಣಿಕೆ ಬಹು ಅಮೋಘವಾದುದು. ಶ್ರೀ ಕೇಶವನೇ ಪ್ರತ್ಯಕ್ಷವಾಗಿ ಆಶೀರ್ವದಿಸಿ ದಾಸರನ್ನಾಗಿ ಮಾಡಿದಮೇಲೆ ಇನ್ನೇನು? ಅವರ ಮುಖದಿಂದ ಹೊರಟದ್ದೆಲ್ಲವೂ ದೈವವಾಣಿ, ಭಗವತ್ಪ್ರೇರಣೆಯಿಂದ ಸೃಷ್ಟಿಯಾದದ್ದು. ಹೀಗೆ ಹೊರಬಂದ ಸಾಹಿತ್ಯವೆಲ್ಲ ಸಂಗೀತಮಯ, ತಾಳಬದ್ಧವಾಗಿ, ವಿವಿಧ ರಾಗಗಳಲ್ಲಿ ಹಾಡಲು ಅನುಕೂಲವಾಗಿವೆ. ಗೂಢಾರ್ಥಗಳಿಂದ ಕೂಡಿದ ಅವರ ಕೀರ್ತನೆಗಳು ಬಹಳ ಅರ್ಥವತ್ತಾಗಿವೆ. ಇವರ ನುಡಿಯು ಬಹು ಸ್ಪಷ್ಟ. ಭಾವದಿಂದ ಕೂಡಿ ಅಚ್ಚುಕಟ್ಟಾದ ಗಂಡು ಭಾಷೆಯಲ್ಲಿದೆ. ಪೂರ್ಣಾನುಭವದಿಂದ ಹೊರಹೊಮ್ಮಿ ವೈವಿಧ್ಯತೆಯಿಂದ ಕೂಡಿದೆ. ಇವರ ಕೃತಿಗಳಲ್ಲಿ ಕಾಣಬರುವುದು ಉತ್ತಮ ಕಾವ್ಯದ ಲಕ್ಷಣ. ಅವರ ಶಬ್ದರಚನೆ ಕಿವಿಗಿಂಪಾಗಿ ಮೋಹಕವಾಗಿದೆ. ಕೀರ್ತನೆಗಳೆಲ್ಲವೂ ಸಂಗೀತದಿಂದ ಕೂಡಿರುವುದರಿಂದ ಕರ್ಣಾಟಕ ಸಂಗೀತಕ್ಕೆ ಒಂದು ಬಗೆಯ ಪ್ರಾಶಸ್ತ್ಯ ಮತ್ತು ಪ್ರೋತ್ಸಾಹ ದೊರೆಯಿತು.

ಶುದ್ಧ ಬಗೆಯ ಭಾವ, ಶಬ್ದಜೋಡಣೆ, ಅರ್ಥ ಮತ್ತು ಸ್ವರ ಈ ನಾಲ್ಕೂ ಸರಿಯಾಗಿ ಮಿಲನವಾದರೆ ಶುದ್ಧ ಶಾಸ್ತ್ರೀಯ ಸಂಗೀತವಾಗುತ್ತದೆ; ಸರ್ವಾಂಗ ಸುಂದರವಾಗುತ್ತದೆ. ಈ ಸಂಗೀತವನ್ನು ದಾಸಸಾಹಿತ್ಯವು ಕರುಣಿಸುತ್ತದೆ.

ಕನ್ನಡವು ಪ್ರಾಕೃತ ಭಾಷೆ ಎಂದು ಪ್ರಾಚೀನರು ಮೂದಲಿಸುತ್ತಿದ್ದಾಗ ಶ್ರೀದಾಸರ ಅಮಿತ ಸಂಖ್ಯೆಯ ಕೀರ್ತನೆಗಳು, ಸುಳಾದಿಗಳು, ಉಗಾಭೋಗಗಳು, ತತ್ವಸುವ್ವಾಲಿ ಇವೇ ಮೊದಲಾದ ರೂಪಗಳಲ್ಲಿ ಹೊರಹೊಮ್ಮಿದ ತಿಳಿಗನ್ನಡದ ಸಾಹಿತ್ಯವು ವಿಶಿಷ್ಟತೆಯಿಂದ ಅಭಿವೃದ್ಧಿ ಹೊಂದಿತು. ಸಾಧಾರಣವಾಗಿ ಕನ್ನಡ

ದೇಶದಲ್ಲೇ ಆಗಲಿ ಅನ್ಯಭಾಷೆಯ ದೇಶಗಳಲ್ಲೇ ಆಗಲಿ ಸಂಗೀತ ಸಭೆಗಳಲ್ಲಿ ದಾಸರ ಕೀರ್ತನೆಗಳನ್ನು ಹಾಡುವ ಸಂಪ್ರದಾಯವಿದೆ. ದಾಸರ ಕೀರ್ತನೆಗಳನ್ನು ಹಾಡಿದ ನಂತರ ಜಾವಳಿ, ತಿಲ್ಲಾನ ಇವುಗಳನ್ನು ಹಾಡಿ ಮಂಗಳದಿಂದ ಸಭೆಯು ಪೂರ್ಣಗೊಳ್ಳುತ್ತದೆ. ದಾಸರ ಪದಗಳನ್ನು ಹಾಡದಿದ್ದರೆ ಸಭೆ ಪೂರ್ಣ ಗೊಂಡಂತೆ ಆಗುವುದಿಲ್ಲ. ಈ ಎಲ್ಲವನ್ನೂ ಕೂಡಿದ ಸಭೆ ಪ್ರೇಕ್ಷಕರಿಗೆ ತೃಪ್ತಿ ತರುತ್ತದೆ.

ಭಜನೆ ಕೀರ್ತನೆಗಳನ್ನು ಮಾಡುತ್ತ ಊರೂರು ತಿರುಗಿ ಕ್ಷೇತ್ರಗಳನ್ನು ಸಂದರ್ಶಿಸಿ ಅಲ್ಲಲ್ಲಿ ನೆಲೆಸಿರುವ ದೇವನನ್ನು ಭಕ್ತಿಭಾವಗಳಿಂದ ಸ್ತುತಿಸಿದ್ದಾರೆ, ಕನಕದಾಸರು. ಕಾವೇರಿ, ಕಪಿನಿ ತೀರದಲ್ಲಿನ ನರಸೀಪುರದಲ್ಲಿ ಶ್ರೀ ನೃಸಿಂಹನನ್ನು ಅನನ್ಯ ಭಕ್ತಿಯಿಂದ ಸೇವಿಸಲು ಶ್ರೀ ಕೇಶವನು ದಾಸಯ್ಯನೊಬ್ಬನ ವೇಷದಿಂದ ಪ್ರಸನ್ನನಾಗಿ ಶ್ರೀದಾಸರ ನಾಲಗೆಯ ಮೇಲೆ ಬೀಜಾಕ್ಷರವನ್ನು ಅನುಗ್ರಹಿಸಿದ ನೆಂದು ಒಂದು ಐತಿಹ್ಯವಿದೆ. ಹೀಗೆ ಅನುಗ್ರಹೀತರಾದ ಮೇಲೆ ಉಬ್ಬಿದೆದೆಯಿಂದ ಶಾರದಾ ದೇವಿಯನ್ನು ನೆನೆಸಿ ಗಣಪತಿಯನ್ನು ಸ್ತುತಿಸಿದ್ದಾರೆ. ಇದು ಸರಸ್ವತೀ ರಾಗದಲ್ಲಿ ಹಾಡಬಹುದಾದ ಸೊಗಸಾದ ಕೀರ್ತನೆ.

ನಮ್ಮಮ್ಮ ಶಾರದೆ ಉಮಾಮಹೇಶ್ವರಿ ನಿಮ್ಮೊಳಗಿಹನ್ಯಾರಮ್ಮ ॥ ಪ ॥
ಕಮ್ಮಗೋಲನಾ ವೈರಿಸುತನಾದ ಸೊಂಡಿಲ ಹೆಮ್ಮೆಯ ಗಣನಾಥನೆ ॥ ಅ.ಪ ॥

ಮೋರೆಕಪ್ಪಿನ ಭಾವ ಮೊರೆದಗಲ ಕಿವಿ ಕೋರೆದಾಡೆಯನ್ಯಾರಮ್ಮ
ಮೂರು ಕಣ್ಣಿನ ಸುತ ಮುರದಿಟ್ಟ ಚಂದ್ರನ ಧೀರ ತಾ ಗಣನಾಥನೆ ॥ ೧ ॥

ಉಟ್ಟ ಪಟ್ಟೆಯ ದಟ್ಟಿ ಬಿಗಿದುಟ್ಟ ಚಲ್ಲಣ ದಿಟ್ಟ ತಾನಿವನ್ಯಾರಮ್ಮ
ಪಟ್ಟದರಸಿ ಹರಗೆ ಪಾರ್ವತಿಯ ಕುಮಾರ ಹೊಟ್ಟೆಯ ಗಣನಾಥನೆ ॥ ೨ ॥

ರಾಶಿ ವಿದ್ಯೆಯ ಬಲ್ಲ ರಮಣಿಹಂಬಲನೊಲ್ಲ ಭಾಷಿಗನಿವನ್ಯಾರಮ್ಮ
ಲೇಸಾಗಿ ಸುರಜನರ ಸಲಹುವ ನೆಲೆಯಾದಿಕೇಶವ ದಾಸ ಕಾಣೆ ಅಮ್ಮಯ್ಯ ॥ ೩ ॥

ಶ್ರೀ ದಾಸರು ಚಂಪಕಾರಣ್ಯ ಎಂದು ಪ್ರಸಿದ್ಧವಾಗಿದ್ದ ಈಗಿನ ಬನ್ನೇರುಘಟ್ಟಕ್ಕೆ ಬಂದು ಅಲ್ಲಿ ನೆಲಸಿರುವ ಶ್ರೀ ಸಂಪಂಗಿರಾಮಸ್ವಾಮಿಯನ್ನು ಸಂದರ್ಶಿಸಿ ಭಕ್ತಿ ಪರವಶರಾಗಿ ಕೇದಾರಗೌಳರಾಗದಲ್ಲಿ ಕೇಶವನನ್ನು ಕುರಿತು:

"ಶ್ರೀರಾಮ ಎನ್ನಿರೋ ಮೂಜಗದವರೆಲ್ಲ ಈರೇಳು
ಭುವನವನ್ನುದರದೊಳಿಟ್ಟಾನಾ ॥"
"ಮಂದರಧರಪಾದ ಇಂದಿರಾರಮಣಾನ ಗೋವಿಂದ ಎನ್ನಿರೋ ॥"
"ವನಜಮುಖಿಯ ಮನದಿಷ್ಟಾರ್ಥವನೀವನ ಶ್ರೀಕೃಷ್ಣ ಎನ್ನಿರೋ ॥"
"ಕೇಶವ ಎನ್ನು ಕ್ಲೇಶವನಾಶನಾ । ಕೇಶವ ಎನ್ನಿರೋ ॥"
"ನಾರಾಯಣ ಎನ್ನಿ ನಾರದವರದನಾ ನಾರಾಯಣ ಎನ್ನಿರೋ ॥"

ಎಂದು ಸೊಗಸಾದ ಸಾಹಿತ್ಯದಿಂದ ಕೂಡಿರುವ ಪಂಚರತ್ನ ಕೀರ್ತನೆಗಳನ್ನು ರಚಿಸಿದ್ದಾರೆ.

ಕನಕದಾಸರ ಕೀರ್ತನೆಗಳಲ್ಲಿ ಗೂಢಾರ್ಥ, ಶ್ಲೇಷಾರ್ಥ, ವ್ಯಂಗ್ಯಾರ್ಥ ಇವುಗಳು ವಿಶೇಷವಾಗಿವೆ. ಸಮಾಜದ ಕುಹಕ ನಡೆವಳಿಕೆ, ಢಂಬಾಚಾರ ಇವುಗಳನ್ನು ಕಂಡರೆ ಇವರಿಗೆ ಆಗುತ್ತಿರಲಿಲ್ಲ. ದಾಕ್ಷಿಣ್ಯಪರರಾಗದೆ ಉಗ್ರವಾಗಿ ಖಂಡಿಸಿದ್ದಾರೆ. ಹೀಗೆ ಖಂಡಿಸಿರುವುದೂ ಕೀರ್ತನರೂಪದಲ್ಲಿಯೇ. ಒಮ್ಮೆ ಪಂಪಾಕ್ಷೇತ್ರದಲ್ಲಿ ತುಂಗಭದ್ರೆಯ ತೀರದಲ್ಲಿ ಹಸ್ತದಲ್ಲಿ ಶಿವಲಿಂಗವನ್ನಿಟ್ಟು ಪೂಜಿಸುತ್ತಿದ್ದ ಲಿಂಗವಂತರನ್ನು ಕುರಿತು,

"ಕೇಳಿರೈ ಶಿವಶರಣರು ಹೇಳಲಂಜಿಕೆಯಾಗುತಿದೆ । ಮೂರು ಲಿಂಗವು ತನ್ನೊಳು ಮುಖ್ಯವಾಗಿರಲೀಕೆ ಬೇರೊಂದು ಲಿಂಗವ ಬೆಲೆಮಾಡಿ ತಂದು ತೋರುವ ಅಂಗೈಯಳಿಟ್ಟು ತೋಯಪುಷ್ಪವ ನೀಡಿ ತಮ್ಮಮನ ಕೊಪ್ಪಿಸುವರು ಶೀಲವಂತರು" -

ಇದು ಏಕೆ ಎಂದು ಪ್ರಶ್ನಿಸಿದ್ದಾರೆ, ಕನಕದಾಸರು.

ಕನಕದಾಸರು ಉಡುಪಿಗೆ ಶ್ರೀಕೃಷ್ಣನ ದರ್ಶನಾರ್ಥವಾಗಿ ದೇವಾಲಯಕ್ಕೆ ಬಂದಾಗ ಅಲ್ಲಿನ ಅರ್ಚಕರು ಇವರನ್ನು ಅಡ್ಡಿಪಡಿಸಲು ಬಹು ಆರ್ತದಿಂದ ಭಗವಂತನ ಸೇವೆ ಮಾಡದೆ ಅನ್ನಾಹಾರಗಳಿಂದ ದೇಹಪೋಷಣೆ ಮಾಡಿಕೊಳ್ಳುವುದು ವ್ಯರ್ಥ ಎಂದು ಭಾವಪೂರ್ವಕವಾಗಿ,

"ತೊರೆದು ಜೀವಿಸಬಹುದೇ ಹರಿ ನಿಮ್ಮ ಚರಣಗಳ ॥ ಪ ॥
ಬರಿಯ ಮಾತೇಕಿನ್ನು ಅರಿತು ಪೇಳುವೆನಯ್ಯ ॥ ಅ. ಪ ॥

ತಾಯಿ ತಂದೆಯ ಬಿಟ್ಟು ತಪವ ಮಾಡಲು ಬಹುದು ।
ದಾಯಾದಿ ಬಂಧುಗಳ ಬಿಡಲು ಬಹುದು ।
ರಾಯ ಮುನಿದರೆ ಮತ್ತೆ ರಾಜ್ಯಗಳ ಬಿಡಬಹುದು ।
ರಾಯುಜಪಿತ ನಿಮ್ಮಡಿಯ ಆರಘಳಿಗೆ ಬಿಡಲಾಗದು ॥ ೧ ॥

ಒಡಲು ಹಸಿದರೆ ಅನ್ನವಿಲ್ಲದೆ ಇರಬಹುದು ।
ಪಡೆದ ಕ್ಷೇತ್ರವ ಬಿಟ್ಟು । ಪೋಗಬಹುದು ।
ಮಡದಿ ಮಕ್ಕಳ ಕಡೆಗೆ । ತೊಲಗಿಸಿಬಿಡಬಹುದು ।
ಕಡಲೊಡೆಯ ನಿನ್ನಡಿಯ । ನರಘಳಿಗೆ ಬಿಡಲಾಗದು ।
ಕೊನೆಗೆ ಪ್ರಾಣವನು ಪರರು ಬೇಡಿದರೆತ್ತಿ ಕೊಡಬಹುದು ।
ಮಾನದಲ್ಲಿ ಮನವ ತಗ್ಗಿಸಬಹುದು"

ಆದರೆ 'ಪ್ರಾಣನಾಯಕನಾದ ಆದಿಕೇಶವರಾಯ ಜಾಣ ಶ್ರೀಕೃಷ್ಣ ನಿನ್ನಡಿಯನ್ನು ಮಾತ್ರ ಬಿಡಲಾಗದು' ಎಂದು ಅರ್ಥವತ್ತಾಗಿ ಹಾಡಿದ್ದಾರೆ. ಇನ್ನೂ ದರ್ಶನ

ವಾಗದಿರಲು ಅಲ್ಲಿಂದ ದೇವಾಲಯದ ಪಶ್ಚಿಮದ ಕಡೆಗೆ ಹೋಗಿ ಮತ್ತೊಂದು ಕೀರ್ತನೆಯಿಂದ ಒಂದು ಸಾರಿಯಾದರೂ ಶ್ರೀಕೃಷ್ಣನ ದರ್ಶನವಾಗಲೆಂದು,

ಪೂರ್ವ ಜನ್ಮದಿ ನಾನು ಮಾಡಿದ ಕರ್ಮದಿಂ ।
ದುರ್ವಿಯೊಳಗೀ ಜನ್ಮ ತಾಳಿದೆನೋ ಕೃಷ್ಣ ॥ ಪ ॥
ಕಾರುಣ್ಯನಿಧಿ ಎನ್ನ ಕಾಯಬೇಕಯ್ಯ ಹರೇ ।
ವಾರಿಜನಾಭನೆ ಮುದ್ದು ಉಡುಪಿಯ ಕೃಷ್ಣ ॥ ಅ.ಪ ॥

ಪುಟ್ಟಿಬಂದ ಮೇಲೆ ಸುಖವ ಕಾಣದೆ ಬಲು ।
ಕಷ್ಟಪಡುತಿಹೆನೊ ಕೃಷ್ಣಾ ।
ತೊಟ್ಟಿಲ ಶಿಶುವು ಬಾಯ್ಬಿಟ್ಟು ಒರಲುವ ತೆರದಿ ಕಂ ।
ಗೆಟ್ಟು ಬಾಯ್ಬಿಡುತಲಿಹೆನೋ ।

ಮುಟ್ಟದಿರು ನಡೆಯೆಂದು ಜನರೆಲ್ಲರೂ ಎನ್ನ ।
ಅಟ್ಟಿ ಬಡಿಯುತ್ತಲಿಹರೋ ಕೃಷ್ಣಾ
ಇಷ್ಟು ಕೋಟಲೆಗಳನು ಬಿಡಿಸದಿದ್ದರೆ ಯಾರು ।
ಸೃಷ್ಟಿಯೊಳು ಕರಪಿಡಿವರೋ ಕೃಷ್ಣಾ

ಎಂದು ಬೇಡಿದರು. ಅರ್ಚಕರು ಇವರು ಯಾವ ಕುಲದವರು ಎಂದು ಸಂಶಯ ದಿಂದ ಪ್ರಶ್ನಿಸಲಾಗಿ,

ಕುಲ ಕುಲವೆನ್ನುತಿಹರೆ—ಕುಲ ಯಾವುದು ನೋಡಿ ಸತ್ಯಸಜ್ಜನರೇ ॥ ಪ ॥

ಕೆಸರೊಳು ತಾವರೆ ಪುಟ್ಟಲು ಅದ ತಂದು
ಬಿಸಜನಾಭನಿಗೆ ಅರ್ಪಿಸಲಿಲ್ಲವೇ ?
ಹಸುವಿನ ಮಾಂಸದೊಳುದಿಸಿದ ಕ್ಷೀರವ
ವಸುಧೆಯೊಳಗೆ ಭೂಸುರರುಣಲಿಲ್ಲವೆ ?

ಮೃಗಗಳ ಮೈಯಲ್ಲಿ ಪುಟ್ಟಿದ ಕಸ್ತೂರಿ
ತೆಗೆದು ಪೂಸುವರು ವಿಬುಧರೆಲ್ಲಾ
ಬಗೆದರೆ ನಾರಾಯಣನ್ಯಾವ ಕುಲದವ
ಅಗಜೆಯೊಲ್ಲಭ ಯಾತರ ಕುಲದವನು

ಆತ್ಮ ಯಾವ ಕುಲ, ಜೀವ ಯಾವ ಕುಲ
ತತ್ವ ಪಂಚೇಂದ್ರಿಯ ಕುಲವ್ಯಾವುದು
ಆತ್ಮಾಂತರಾತ್ಮ ನೆಲೆಯಾದಿಕೇಶವ
ಪ್ರೀತನಾದ ಮೇಲೆ ಯಾತರ ಕುಲವೋ

ಎಂದು ಹಾಡಿ ಉದ್ಗಾರ ತಳೆದು ಅವರಿಗೆ ಮರು ಪ್ರಶ್ನೆಗಳ ಸುರಿಮಳೆಯನ್ನು ಸುರಿಸಿದ್ದಾರೆ. ಇವರ ಈ ವಾದಕ್ಕೆ ಕಿವಿಗೊಡದೆ ಅರ್ಚಕರು ಪ್ರವೇಶಕ್ಕೆ ಆಸ್ಪದ

ಕೊಡದೆ ದೇವಾಲಯದ ದ್ವಾರವನ್ನು ಮುಚ್ಚಿ ಬೀಗಮುದ್ರೆ ಹಾಕಿ ಹೊರಟು ಹೋದ ಮೇಲೂ ಬಿಡಲಿಲ್ಲ ಶ್ರೀ ದಾಸರು. ಆಗ ಬಲು ದೈನ್ಯದಿಂದ "ಬಾಗಿಲನು ತೆಗೆಸಿ ಸೇವೆಯನು ಕೊಡು ಹರಿಯೇ ಕೂಗಿದರೂ ಧ್ವನಿ ಕೇಳಲೊಲ್ಲದೇ ಶ್ರೀ ಹರಿಯೆ" ಎಂದು ಮೂರು ಚರಣಗಳುಳ್ಳ ಒಂದು ಸೊಗಸಾದ ಕೀರ್ತನೆಯನ್ನು ಹಾಡಿದ ಮೇಲೆ ಒಂದು ಪವಾಡವೇ ನಡೆಯಿತು. ದೇವಾಲಯದ ಪಶ್ಚಿಮ ಭಾಗದ ಗೋಡೆಯಲ್ಲಿ ಬಿರುಕು ಕಾಣಿಸಿ ಮೂರ್ತಿಯೇ ಆ ದಿಕ್ಕಿಗೆ ತಿರುಗಿ ಗೋಡೆಯ ಬಿರುಕಿನಲ್ಲಿ ಉಂಟಾದ ಕಿಂಡಿಯಲ್ಲಿ ದರ್ಶನವಿತ್ತಾಗ ಆನಂದದಿಂದ ಕುಣಿದಾಡುತ್ತ ಹಲವಾರು ಕೀರ್ತನೆಗಳನ್ನು ರಚಿಸಿ ಕೃತಜ್ಞತೆಯನ್ನು ಅರ್ಪಿಸಿದ್ದಾರೆ.

ಶ್ರೀ ದಾಸರು ಪೂರ್ಣಾನುಭವಿಗಳು. ತಮ್ಮ ಈ ಅನುಭವದಿಂದ ಬಂದ ಭಕ್ತಿಯ ಭಾವವನ್ನು ವಿವಿಧ ರೂಪಗಳಲ್ಲಿ ಮನೋಹರವಾಗಿ ತಮ್ಮ ಕೀರ್ತನೆಗಳಲ್ಲಿ ಚಿತ್ರಿಸಿದ್ದಾರೆ. ಹಾಗೆಯೇ ದುಃಖದಿಂದ ಕೂಡಿದಾಗ ಆರ್ತತೆಯಿಂದ ದೇವರನ್ನು ಮರೆಹೊಕ್ಕಿದ್ದಾರೆ. ಉದಾಹರಣೆಗೆ ಕೇದಾರಗೌಳದಲ್ಲಿ ಹಾಡ ಬಹುದಾದ ಮೂರು ಚರಣಗಳುಳ್ಳ ಕೀರ್ತನೆ:

ನೀನುಪೇಕ್ಷೆಯ ಮಾಡೆ ಬೇರೆ ಗತಿಯಾರೆನಗೆ
ನಿಗಮಗೋಚರ ಮುಕುಂದ ॥ ಪ ॥

ಗಾನರಸಲೋಲ ಆಗಮಶೀಲ ಭಕ್ತಪರಿ
ಪಾಲ ಗೋಪಾಲಬಾಲ ॥ ಅ.ಪ ॥

ಜಪತಪಾನುಷ್ಠಾನ ಜಪಿತನೆಂದೆನಿಸುವೆನೆ
ಜಾಣತನವೆನ್ನೊಳಿಲ್ಲ
ಅಪರಿಮಿತ ಕರ್ಮವನು ಅನುಸರಿಸಿ ನಡೆಯುವೆನೆ
ನಿಪುಣತ್ವ ಮೊದಲೆ ಇಲ್ಲ
ಗುಪಿತದಿಂ ದಾನಧರ್ಮವನು ನಾ ಮಾಡುವೆನೆ
ಅಪರಿಮಿತ ಧನವು ಇಲ್ಲ
ರಪಣನಿಪುಣತ್ವವೊಂದಿಲ್ಲದಾ ಕೃಪಣನಿಗೆ
ಸುಪವಿತ್ರ ನೀನೆ ಅಲ್ಲದಿಲ್ಲ ॥ ೧ ॥

ಆನೆ ಮೊಸಳೆಗೆ ಸಿಲುಕಿ ಅರೆಬಾಯಿ ಬಿಡುತಿರಲು
ಮೌನದಿಂ ಬಂದು ಕಾಯ್ದೆ
ಏ ನಾರಗಾ ಎಂದಡಜಮಿಳಗೆ ಮುಕ್ತಿಯನು
ನೀನೊಲಿದು ಕೃಪೆಮಾಡಿದೆ
ಹಾನಿಯಿಲ್ಲದ ಪದವಿ ನೀನಿತ್ತು ಧ್ರುವನಿಗೆ ಕಡು
ದೀನತ್ವವನು ಬಿಡಿಸಿದೆ
ದಾನವಾಂತಕ ಸಕಲ ದಿವಿಜಮುನಿ ವಂದ್ಯ ಅಭಿ
ಮಾನಿ ಎನ್ನನು ಸಲಹದೇ ಬರಿದೆ ॥ ೨ ॥

ಈಷಣತ್ರಯದ ಬಯಲಾಸೆಯಲಿ ಭ್ರಮೆಗೊಂಡು
ಬೇಸರದಿ ಮನದಿ ನೊಂದು
ಹೇಸಿಕೆಯ ಸಂಸಾರಸಾಗರದಿ ಮುಳುಗಿ ಬಹು
ಘಾಸಿ ಪಡಲಾರೆನೆಂದು
ಮೋಸವಿಲ್ಲದೆ ಯಮನ ಪಾಶವನು ಪರಿವುದಕೆ
ಕೌಶಲವು ತೋರಿ ಇಂದು
ದಾಸನೆಂದೆನಿಸಿ ಡಂಗುರವ ಹೊಯಿಸಿದೆಯೊ ನೆಲೆ
ಯಾದಿಕೇಶವನೆ ಹರಿಯೆ ಧೊರೆಯೇ ॥ ೩ ॥

ಒಮ್ಮೊಮ್ಮೆ ತಾವು ಎಸಗಿದ ಪಾಪಕರ್ಮಗಳನ್ನು ನೆನೆದು ತುಂಬಿಬಂದ ತುದ್ಧ ಕಂಠದಿಂದ ಭಗವಂತನಲ್ಲಿ ಕ್ಷಮೆ ಬೇಡಿದ್ದಾರೆ:

ಎಳ್ಳು ಕಾಳಿನಷ್ಟು ಭಕ್ತಿಯೆನ್ನೊಳಗಿಲ್ಲ ॥ ಪ ॥
ಕಳ್ಳರಿಗೆ ಕಳ್ಳನಂತೆ–ಬೆಳ್ಳಕ್ಕಿಯಂದದಿ ಡಂಭ ॥ ಅ.ಪ ॥

ಗಾಣದೆತ್ತಿನಂತೆ ಕಣ್ಣಮುಚ್ಚಿ ಪ್ರದಕ್ಷಿಣೆಯ ಮಾಡಿ
ಕಾಣದೆ ತಿರುಗುವೆನೆರಡು ಕಣ್ಣಿದ್ದು ನಾನು
ಮಾಣಿಕ್ಯದ ರಾಶಿಯಲ್ಲಿ ಅಂಧಕರ್ಮವರು ಕೂಡಿ
ಆಣಿ ಮುತ್ತು ಹಿಡಿದು ಹಿಡಿದು ಬಿಡುವಂತೆ ಭ್ರಮಿತನಯ್ಯ ॥ ೧ ॥

ಗುಂಡು ಮುಳುಕನ್ಹಕ್ಕಿಯಂತೆ ಕಂಡ ಕಂಡ ನೀರ ಮುಳುಗಿ
ಮಂಡೆತೂಲೆ ಬಾಹೋದಲ್ತೆ ಗತಿಯ ಕಾಣೆನೊ
ಮಂಡೂಕನಂದದಿ ನೀರ ತಡಿಯಲ್ಲಿ ಕುಳಿತು ಹಾಗೆ
ಮುಂಡಮುಸಗನಿಕ್ಕೆ ಮೂಗಹಿಡಿದುಬಿಡುವೆ ಭ್ರಮಿತನಯ್ಯ ॥ ೨ ॥

ಇಕ್ಕಳದ ಕೈಲಿ ಪಿಡಿದ ಕಾದ ಕಬ್ಬಿಣದಂತೆ
ಸಿಕ್ಕಿ ಸಿಡಿಮಿಡಿಗೊಂಬೆ ಗತಿಯ ಕಾಣದೆ
ಹೊಕ್ಕಳ್ಹೂವಿನ ಕನಕನೊಡೆಯುನಾದಿಕೇಶವ–ಮರೆ
ಹೊಕ್ಕೆ ಎನ್ನ ಮನ್ನಿಸೋ ನೀ ದೇವ ದೇವೋತ್ತಮ ॥ ೩ ॥

ಶಾಂತತೆಯಿಂದ ಕೂಡಿದಾಗ ಭಗವಂತನ ಅಪಾರ ಮಹಿಮೆಯನ್ನು ಕುರಿತು ಮುಕ್ತ ಕಂಠದಿಂದ ಹಾಡಿದ್ದಾರೆ:

ರಾಗ: ಮುಖಾರಿ—ತಾಳ: ಝಂಪೆ

ಜಗದಂತರ್ಯಾಮಿಯೆಂದೆಂದು ನಿಮ್ಮ ।
ನಿಗಮ ಸಾರುವ ಮಾತು ಪುಸಿಯೆ ರಂಗ ॥ ಪ ॥

ಭೇದವಿಲ್ಲದೆ ಸಕಲ ಜೀವರನು ಪೊತ್ತಿಹಳು ।
ಭೂದೇವಿಯೆಂಬಾಕೆ ನಿಮ್ಮ ಅರ್ಧಾಂಗಿಯು ।
ಸಾಧನವು ಸಿರಿಯು ಸಂಪತ್ತು ಭಾಗ್ಯವನೀವ ।
ಆ ದಯಾನಿಧಿ ಲಕ್ಷ್ಮಿ ನಿಮ್ಮ ಸತಿ ದೇವ ೧ ॥

ಎಂಬತ್ತುನಾಲ್ಕು ಲಕ್ಷ ಜೀವರಾಶಿಗಳನ್ನು ।
ಬೊಂಬೆಗಳ ಮಾಡಿ ಈ ಭವದಿಂದಲಿ ।
ತುಂಬಿ ಕಲೆಗಳನೊತ್ತಿ ನೊಸಲ ಬರೆಹವ ಬರೆವ ।
ಅಂಬುಜೋದ್ಭವ ನಿಮ್ಮ ಹೆಮ್ಮಗನು ದೇವ ॥ ೨ ॥

ಸಕಲ ಜೀವರಾಶಿಗಳ ಕಲ್ಪಿಸುವ ಬೀಜ ।
ಸುಖದಿಂದ ಮಾಯಾಂಗನೆಯರೊಡಲೊಳು ।
ಅಕ್ಕರದಿ ಪಿಂಡಾಂಡಗಳ ಕಟ್ಟಿ ಬಲಿಸುವ ।
ಮಕರಾಂಕನೆಂಬುವನು ನಿಮ್ಮ ಕಿರಿನುಗ ದೇವ ॥ ೩ ॥

ಜಂಗಮಸ್ಥಾವರಕ್ಕಾಧಾರವಾಗಿಹಳು ।
ಭಂಗಪಡುವ ಜನರ ಕರ್ಮವ ಕಳೆವಳು ।
ಹಿಂಗದೆ ಜಗವ ಪಾವನ ಮಾಡುವ ಪುಣ್ಯ ।
ಗಂಗೆಯೆಂಬುವಳು ನಿಮ್ಮ ಮಗಳು ದೇವ ॥ ೪ ॥

ಇಂತು ಅಣುರೇಣು ತೃಣಕಾಷ್ಠದೊಳಗೆಲ್ಲ ।
ಸಂತೋಷವಾಗಿಹುದು ನಿಮ್ಮ ಸ್ಫುರಣೆ ।
ಯಂತ್ರವಾಹಕನೆಂಬ ಬಿರುದು ಸಲ್ವುದು ನಿಮಗೆ ।
ಚಿಂತಾನಾಯಕನೆ ಕಾಗಿನೆಲೆಯಾದಿಕೇಶವನೆ ॥ ೫ ॥

ಸನ್ಮಿತ್ರನಂತೆ ಭಾವಿಸಿ ಅವನೊಡನೆ ಸಂಭಾಷಿಸಿ ಭಗವಂತನೊಡನೆ ನಲಿದಾಡಿದ್ದಾರೆ.

### ರಾಗ: ಕಲ್ಯಾಣಿ—ತಾಳ: ಝಂಪೆ

ಏನೆಂದು ಕೊಂಡಾಡಿ ಸ್ತುತಿಸಲೊ ದೇವಾ ।
ನಾನೇನು ಬಲ್ಲೆ ನಿಮ್ಮ ಮಹಿಮೆಗಳ ಮಾಧವಾ ॥ ಪ ॥

ಹರಿ ಮುಕುಂದನು ನೀನು ನರಜನ್ಮ ಹುಳ ನಾನು ।
ಪರಮಾತ್ಮ ನೀನು ಪಾಮರನು ನಾನೂ ।
ಗರುಡಗಮನನು ನೀನು ಮರುಳ ಪಾಪಿಯು ನಾನು ।
ಪರಂಜ್ಯೋತಿಯು ನೀನು ತಿರುಕನು ನಾನೂ ॥ ೧ ॥

ವಾರಿಧಿಶಯನನಾದ ಕಾರುಣ್ಯಪತಿ ನೀನು ।
ಘೋರದಿಂದಿಹ ಕಾಮಿ ಕ್ರೋಧಿ ನಾನೂ ।
ಈರೇಳು ಭುವನದೊಳು ಇರುವ ಮೂರುತಿ ನೀನು ।
ದೂರಿ ನಿಮ್ಮನು ಬೈವ ದುಷ್ಟ ನಾನೂ ॥ ೨ ॥

ಅಣುರೇಣು ತೃಣಗಳಲಿ ಪರಿಪೂರ್ಣನು ನೀನು ।
ಕ್ಷಣಕ್ಷಣಕೆ ಅವಗುಣದ ಕರ್ಮಿ ನಾನೂ ।
ವಾಣಿಯರಸನ ಪೆತ್ತ ವೈಕುಂಠಪತಿ ನೀನು ।
ತನು ನಿತ್ಯವಲ್ಲದ ಗೊಂಬೆ ನಾನೂ ॥ ೩ ॥

ಕಂಬದಲ್ಲಿ ಬಂದ ಆನಂದಮೂರುತಿ ನೀನು ।
ನಂಬಿಕಿಲ್ಲದ ಪ್ರಪಂಚಿಗನು ನಾನೂ ।
ಅಂಬರೀಷಗೆ ಒಲಿದ ಅಕ್ರೂರ ಸಖ ನೀನು ।
ಡಂಭಕರ್ಮಿಯು ನಾನು ನಿರ್ಜಿತನು ನೀನೂ ॥ ೪ ॥

ತಿರುಪತಿಯವಾಸ ಶ್ರೀವೆಂಕಟೇಶನು ನೀನು ।
ಸ್ಮರಿಸಿ ನಿನ್ನಯ ನಾಮ ಬದುಕುವವ ನಾನೂ ।
ಬಿರುದುಳ್ಳವನು ನೀನು । ಮರೆಹೊಕ್ಕವನು ನಾನು ।
ಸಿರಿಕಾಗಿನೆಲೆಯಾದಿಕೇಶವನೆ ನೀನೂ

ತಾವು ಎಷ್ಟು ದೈನ್ಯದಿಂದ ಪ್ರಾರ್ಥಿಸಿದರೂ ಭಗವಂತನು ಭಕ್ತನ ಪ್ರಾರ್ಥನೆಗೆ ಕಿವಿಗೊಡದಾಗ ಭಕ್ತರನ್ನು ಸಲಹುವುದು ಅವನ ಕರ್ತವ್ಯವೆಂದು ಉಪದೇಶ ಮಾಡಲೂ ಹೊರಟಿದ್ದಾರೆ ಶ್ರೀ ದಾಸರು.

ರಾಗ: ಭೈರವಿ—ತಾಳ: ಛಾಪು

ನನ್ನಿಂದ ನಾನೇ ಜನಿಸಿ ಬಂದೆನೆ ದೇವಾ ॥ ಪ ॥

ನಿನ್ನ ಪ್ರೇರಣೆಯಿಂದ ನಡೆದು ನೋಡಿದ ಮೇಲೆ ।
ನಿನ್ನದೆ ತಪ್ಪೋ ಎನ್ನದು ತಪ್ಪೋ ಗೋವಿಂದಾ ॥ ಅ.ಪ ॥

ಜನನಿಯ ಜಠರದಿ ನವಮಾಸವು ।
ಘನವಾಗಿ ನೀ ಪೋಷಿಸುತಲಿರೆನ್ನ ।
ಜನಿಸಲಾರೆನೆ ಜನಿಸೆಂದಿಕ್ಕಳದಿಂದ ।
ವನಜಾಕ್ಷ ನೂಕಿದವನು ನೀನಲ್ಲವೇ ಕೃಷ್ಣಾ ॥ ೧ ॥

ಎಲವುಗಳೆಲ್ಲವು ಜತೆಗೂಡಿ ನರಗಳ ।
ಬಲಿದು ಚರ್ಮವ ಪೊದಿಸಿ ದೇಹದೊಳ್ ।
ಮಲಮೂತ್ರದೊಳು ನೆಲೆಗೊಳಿಸಿ ಹೃದಯ ।
ಸ್ಥಳದೊಳು ನಿಂದು ಚೈತನ್ಯ ಪೊರೆವರು ಯಾರೋ ॥ ೨ ॥

ಜನಿಸಿದಾರಭ್ಯ ಇಂದಿನ ಪರಿಯಂತರ ।
ಘನದಿ ನೀ ಪಾಲಿಸುತಿರೆ ಎನ್ನನು ।
ಅನುಮಾನಕ್ಕೆ ಬೋಧಿಸುತಿರೆ ನಾನು ।
ಅನುಭವಿಸಿದೆನೊ ಜೀವನು ನಿನ್ನನು ಬಿಡೆ ॥ ೩ ॥

ಅಂಧನ ಕೈಯಲ್ಲಿ ಕೋಲಿತ್ತು ಕರೆದೊಯ್ದು ।
ಮುಂದಾಳು ತೆಗ್ಗಿನಲಿ ಕೆಡಹಲು ।
ಅಂಧನ ತಪ್ಪೊ ಮುಂದಾಳಿನ ತಪ್ಪೊ ।
ಹಿಂದಾಡಬೇಡ ಎನ್ನಲಿ ತಪ್ಪಿಲ್ಲವೊ ರಂಗಾ ॥ ೪ ॥

ಕಂದನ ತಾಯಿಯು ಆಡಿಸುತಿರುವಾಗ ।
ಕಂದ ಬಾವಿಯೋಳ್ ಅಂದಿ ನೋಡಲು ।
ಬಂದು ಬೇಗದಿಂದ ಎತ್ತದಿದ್ದಮ್ಯಾಲೆ ।
ಕಂದನ ತಪ್ಪೊ ತಾಯಿಯ ತಪ್ಪೊ ಗೋವಿಂದಾ ॥ ೫ ॥

ಭಾರ ನಿನ್ನದೋ ದೂರು ನಿನ್ನದೊ ರಂಗಾ ।
। ನಾರಿ ಮಕ್ಕಳು ಮನೆ ನಿನ್ನದಯ್ಯ ।
ಕ್ಷೀರದೊಳಗೆ ಅದ್ದು ನೀರಿನೊಳಗೆ ಅದ್ದು ।
ಹೇರನೊಪ್ಪಿಸಿದ ಮೇಲೆ ಸುಂಕವೇ ಪರಮಾತ್ಮಾ ॥ ೬ ॥

ನ್ಯಾಯವಾದರೂ ದುಡುಕು ನಿನ್ನದೊ ರಂಗ ಅ ।
ನ್ಯಾಯವಾದರೆ ಯಾರು ಪೇಳುವರೊ ।
ಕಾಯಜಜನಕ ಕನಕಾದಿಕೇಶವರಾಯ ನೀ ।
ಕಾಯಯ್ಯ ತಪ್ಪುಗಳನೆಣಿಸದೆ ದೇವಾ ॥ ೭ ॥

ಭಗವಂತನನ್ನು ತನ್ನ ಬಂಧುವಿನಂತೆ ಅಂದರೆ ತಾಯಿ, ತಂದೆ, ಮಗ, ಭೃತ್ಯ ಎಂದು ಭಾವಿಸಿ ನಡೆದುಕೊಂಡ ನಿದರ್ಶನಗಳಲ್ಲಿ ಅನೇಕ ಕೀರ್ತನೆಗಳನ್ನು ಮಾಡಿದ್ದಾರೆ. ಕೆಲವು ವೇಳೆ ಮೂದಲಿಸಿ, ಸರಸವಾಡಿ ರೇಗಿಸಿಯೂ ಇದ್ದಾರೆ. ಈಶ್ವರಾನುಸಂದರ್ಶನದಿಂದ ತೃಪ್ತರಾಗಿ ಧನ್ಯವಾದಗಳನ್ನು ಅರ್ಪಿಸಿದ್ದಾರೆ. ಹೀಗೆ ದಾಸರ ಕಾಣಿಕೆ ಕರ್ನಾಟಕ ಸಂಗೀತಕ್ಕೆ ಬಹುಮುಖವಾದುದು.

# ಕನಕದಾಸರ ವಿಶಿಷ್ಟತೆ

ಶ್ರೀ ಜಿ. ಎಸ್. ಶಿವರುದ್ರಪ್ಪ

ಕನಕದಾಸರು ದಾಸರಲ್ಲಿ ಕವಿಗಳು; ಅದೇ ಅವರ ವೈಶಿಷ್ಟ್ಯ. ಕನಕದಾಸರನ್ನು ಬಿಟ್ಟರೆ ದಾಸ ಪರಂಪರೆಯ ಉಳಿದೆಲ್ಲರೂ ಪ್ರಧಾನವಾಗಿ ಕೀರ್ತನಕಾರರು; ಕವಿಗಳಲ್ಲ. ಎಂದರೆ ಅವರ ಕೀರ್ತನೆಗಳಲ್ಲಿ ಕಾವ್ಯತ್ವವಿಲ್ಲವೆಂದು ಅರ್ಥವಲ್ಲ; ಅವರಲ್ಲಿ ಕವಿಮನೋಧರ್ಮವಿಲ್ಲವೆಂದೂ ಅರ್ಥವಲ್ಲ. ಆದರೆ ಅವರಲ್ಲಿ ಕನಕದಾಸರಲ್ಲಿಯಂತೆ ಸ್ಥಾಯಿಯಾದ ಕಾವ್ಯಪ್ರಜ್ಞೆ ಇಲ್ಲ ಎಂದು ಮಾತ್ರ ಅರ್ಥ. ಕನಕದಾಸರಲ್ಲಿಯಾದರೋ ಅವರು ಒಂದು ವೇಳೆ ದಾಸಕೂಟಕ್ಕೆ ಸೇರಿ ಕೀರ್ತನೆಗಳನ್ನು ರಚಿಸಬೇಕಾದಂಥ ಪ್ರಸಂಗಕ್ಕೆ, ಪರಂಪರೆಗೆ ಒಳಗಾಗದೆ ಹೋಗಿದ್ದರೂ, ಅವರಲ್ಲಿನ ಕವಿಪ್ರಜ್ಞೆ ಕಾವ್ಯರೂಪದಲ್ಲಿ ತನ್ನ ಅಭಿವ್ಯಕ್ತಿಯನ್ನು ಕಂಡುಕೊಳ್ಳದೆ ಇರುತ್ತಿರಲಿಲ್ಲ. ಹೀಗಾಗಿ ಕನಕದಾಸರ ವ್ಯಕ್ತಿತ್ವ ದಾಸಪರಂಪರೆಯ 'ಭಕ್ತಿಪ್ರಜ್ಞೆ'ಗೆ ಒಳಗಾದರೂ, ಅವರ ಭಕ್ತಿಭಾವ ಕಾವ್ಯಪ್ರಜ್ಞೆಗೆ ಮೂಲಭಿತ್ತಿಯಾಗಿ ಪರಿಣಮಿಸಿತು. ಆದಕಾರಣವೇ ಅವರು ಕೇವಲ ಕೀರ್ತನಕಾರರಾಗಿ ಮಾತ್ರವಲ್ಲದೆ ಕನ್ನಡದ ಕವಿಗಳ ಸಾಲಿನಲ್ಲಿಯೂ ನಿಲ್ಲಬಲ್ಲವರಾಗಿದ್ದಾರೆ.

ಕನಕದಾಸರಲ್ಲಿ ಉಳಿದ ದಾಸರಿಂದ ಭಿನ್ನವಾದ ಕಾವ್ಯಪ್ರಜ್ಞೆ ಇದೆ ಎಂಬ ಸಂಗತಿ ಅವರ ಕೃತಿಗಳನ್ನು ಪರಿಶೀಲಿಸಿದರೆ ಸ್ಪಷ್ಟವಾಗುತ್ತದೆ. ಅವರ 'ಸಾಹಿತ್ಯ ಕೃತಿ'ಗಳೊಂದಿಗೆ ಹೋಲಿಸಿದರೆ ಅವರ 'ಕೀರ್ತನೆ'ಗಳು ಸಂಖ್ಯೆಯಲ್ಲಿ ತೀರಾ ಕಿರಿದಾಗಿಯೇ ಗೋಚರಿಸುತ್ತವೆ. ಅವರ ಕೀರ್ತನೆಗಳನ್ನೂ ಮತ್ತು ಹರಿಭಕ್ತಿಸಾರವನ್ನೂ ಒಂದು ಮುಖವಾಗಿ ಇರಿಸಿಕೊಂಡರೆ, ಅವರ ನಳಚರಿತ್ರೆ, ಮೋಹನತರಂಗಿಣಿ, ರಾಮಧಾನ್ಯಚರಿತೆ ಇವುಗಳನ್ನೇ ಬೇರೊಂದು ಮುಖವಾಗಿ ಇರಿಸಬಹುದು. ಈ ಎರಡು ಮುಖಗಳಲ್ಲಿ, ಒಂದು ಸಂಪೂರ್ಣ ಭಕ್ತಿ ಸಾಹಿತ್ಯ, ಇನ್ನೊಂದು ಭಕ್ತನೂ ಆದ ಕವಿಯಿಂದ ನಿರ್ಮಿತವಾದ ಸಾಹಿತ್ಯ. ಒಂದು ವ್ಯಕ್ತಿನಿಷ್ಠ, ಇನ್ನೊಂದು ವಸ್ತುನಿಷ್ಠ. ಹೀಗೆ ಕನಕದಾಸರು ದಾಸಪರಂಪರೆಯೊಳಗೆ ನಿಂತು, ಅದಕ್ಕೆ ವ್ಯಕ್ತಿನಿಷ್ಠ ಕೀರ್ತನೆಗಳ ಮೂಲಕ ಗೌರವವನ್ನು ಸಲ್ಲಿಸಿದ್ದಲ್ಲದೆ, ವಸ್ತುನಿಷ್ಠ ಕೃತಿಗಳನ್ನೂ ರಚಿಸುವುದರ ಮೂಲಕ ಕವಿಗಳ ಸಾಲಿಗೂ ಸೇರಿದ್ದಾರೆ. ಒಟ್ಟಿನಲ್ಲಿ ಕನಕದಾಸರ ವ್ಯಕ್ತಿತ್ವ ವ್ಯಕ್ತಿನಿಷ್ಠ ಹಾಗೂ ವಸ್ತುನಿಷ್ಠ ಮುಖಗಳಲ್ಲಿ ಅಭಿವ್ಯಕ್ತಿಯನ್ನು ಪಡೆದದ್ದು ಒಂದು ವಿಶೇಷತೆಯಾಗಿ ತೋರುತ್ತದೆ.

ಪುರಂದರದಾಸರ ಕೀರ್ತನೆಗಳ ಸಂಖ್ಯೆಗೆ ಹೋಲಿಸಿದರೆ ಕನಕದಾಸರ ಕೀರ್ತನೆಗಳು ಅತ್ಯಲ್ಪವಾಗಿ ಕಾಣುತ್ತವೆ; ಆದರೆ ಕನಕದಾಸರ ಕೀರ್ತನೆಗಳ

ಸತ್ವವನ್ನು ಗಮನಿಸಿದರೆ, ಅವು ಪುರಂದರದಾಸರ ಕೀರ್ತನೆಗಳ ಸತ್ವದೊಂದಿಗೆ ಸಮಸ್ಪರ್ಧಿಯಾಗಬಲ್ಲವು. ಹಾಗೆ ನೋಡಿದರೆ ಪುರಂದರದಾಸರ ಕೀರ್ತನೆಗಳಿಗಿಂತ ಕನಕದಾಸರ ಕೀರ್ತನೆಗಳಲ್ಲಿ ಕಾವ್ಯಗುಣ ಒಂದು ಕೈ ಮಿಗಿಲಾಗಿಯೇ ಇರುವಂತೆ ತೋರುತ್ತದೆ; ಅದಕ್ಕೆ ಕಾರಣ ಕನಕದಾಸರು ಪ್ರಧಾನತಃ ಕವಿಗಳು ಎನ್ನುವುದೇ ಆಗಿದೆ. ಪುರಂದರದಾಸರ ಕೀರ್ತನೆಗಳಲ್ಲಿಯಂತೆ ಮುಖ್ಯವಾದ ಕಾವ್ಯಗುಣ ಕೇವಲ ಪಲ್ಲವಿಯಲ್ಲಿ ಮಡುಗಟ್ಟಿ, ಉಳಿದ ಚರಣಗಳಲ್ಲಿ ಅದರ ಸಮರ್ಥನೆಯ ತರ್ಕವಾಗಿಯೋ, ಅಥವಾ ಪಲ್ಲವಿಯಲ್ಲಿನ ಧ್ವನಿಯನ್ನು ವಾಚ್ಯವಾಗಿ ವಿವರಿಸುವ ಪದ್ಧತಿಯಲ್ಲಿಯೋ ಪರ್ಯವಸಾನವಾಗುವುದು ಕನಕದಾಸರಲ್ಲಿ ಕಡಿಮೆಯೆಂದೇ ಹೇಳಬಹುದು. ಕನಕದಾಸರಲ್ಲಿ ಕಂಡುಬರುವ ಆಶ್ಚರ್ಯ, ಜಿಜ್ಞಾಸೆ, ಕಲ್ಪಕತೆಗಳು ಬೇರೆಯವರಲ್ಲಿ ವಿರಳವೆಂದೇ ಹೇಳಬಹುದು. 'ನೀ ಮಾಯೆಯೊಳಗೋ ನಿನ್ನೊಳು ಮಾಯೆಯೋ' ಎನ್ನುವ ಅವರ ಕೀರ್ತನೆಯುಲ್ಲಿ ಹೆಜ್ಜೆ ಹೆಜ್ಜೆಗೂ ವಿಸ್ತರಿಸುತ್ತಾ ಹೋಗುವ ಆಶ್ಚರ್ಯಮೂಲವಾದ ಜಿಜ್ಞಾಸೆ ತನ್ನ ವಿಚಾರದ ವಿಲಾಸದಿಂದ, ತಾತ್ವಿಕ ಜಿಜ್ಞಾಸೆಯಲ್ಲದೆ ಸೌಂದರ್ಯದ ಜಿಜ್ಞಾಸೆಯೂ ಆಗಿ ಕಡೆಗೆ ಈ ಲೋಕದ ಮೂಲಭೂತ ವಿಸ್ಮಯದ ಹೊಳಹಿನಲ್ಲಿ ನಿಲುಗಡೆಯನ್ನು ಕಂಡುಕೊಳ್ಳುವ ರೀತಿ ಅಪೂರ್ವವಾಗಿದೆ. 'ಯಾಕೆ ನೀನಿಲ್ಲಿ ಪವಡಿಸಿದೆ ಹರಿಯೆ'—ಎಂದು ಪಶ್ಚಿಮರಂಗನಾಥನನ್ನು ಕುರಿತು ಕಟ್ಟಿದ ಕೀರ್ತನೆಯೊಳಗಣ ಕಲ್ಪಕತೆ ಮೆಚ್ಚತಕ್ಕದ್ದಾಗಿದೆ. ರಂಗನಾಥನನ್ನು ಕುರಿತು ಅವರು ಹಾಕಿದ ಪ್ರಶ್ನೆಗೆ ಅವರು ಪುರಾಣ ಪ್ರಪಂಚದಿಂದ ಎತ್ತಿಕೊಂಡ ಉತ್ತರ ಮಾಲಿಕೆ ಪುರಂದರದಾಸರನ್ನು ಅನುಕರಿಸಿದರೂ, 'ಇನ್ನೆಷ್ಟು ಕಾಲ ನೀನಿಲ್ಲಿ ಮಲಗಿದ್ದರೂ ನಿನ್ನ ಎಬ್ಬಿಸುವರೊಬ್ಬರನು ಕಾಣೆ'—ಎನ್ನುವ ವಿಷಾದಪೂರ್ಣವಾದ ಮುಕ್ತಾಯ ಅಭೂತಪೂರ್ವವಾಗಿದೆ; ಕನಕದಾಸರು ದಾಸರಲ್ಲಿ ಕವಿಗಳು ಎನ್ನುವ ಮಾತಿಗೆ ಜೀವಂತಸಾಕ್ಷಿಯಾಗಿದೆ. 'ತಲ್ಲಣಿಸದಿರು ಕಂಡ್ಯ ತಾಳು ಮನವೇ'—ಎಂಬ ಕೀರ್ತನೆಯಲ್ಲಿನ ನಿಸ್ಸಂಶಯ ಶ್ರದ್ಧೆ, ಅದು ತಾರ್ಕಿಕವಾಗಿ ಸಮರ್ಥಿತವಾಗಿರುವ ರೀತಿ ಪರಿಣಾಮಕಾರಿಯಾಗಿದೆ. ಅವರ ಗುಣ ವಿಶಿಷ್ಟವಾದ ಕೆಲವೇ ಕೀರ್ತನೆಗಳನ್ನು ಬಿಟ್ಟರೆ, ಅವರನ್ನು ಹರಿದಾಸ ಪರಂಪರೆಯೊಳಗೆ ನಿಲಿಸುವಂಥ ಇನ್ನೊಂದು ಕೃತಿ 'ಹರಿಭಕ್ತಿಸಾರ'. ನೂರ ಹತ್ತು ಪದ್ಯಗಳ ಈ ಕೃತಿ ಭಾವಗೀತಾತ್ಮಕವಾದ ಖಂಡಕಾವ್ಯದಂತಿದೆ. ವಾಸ್ತವವಾಗಿ ಇದು ಷಟ್ಪದೀ ರೂಪದ ಶತಕವಲ್ಲದೆ ಬೇರೆ ಅಲ್ಲ. 'ದೇವ ರಕ್ಷಿಸು ನಮ್ಮನನವರತ' ಎಂದು ಕಡೆಯಾಗುವ ಒಂದೊಂದು ಪದ್ಯದಲ್ಲೂ ಕನಕದಾಸರ ಭಕ್ತಹೃದಯದ ಮೊರೆ ಅತ್ಯಂತ ಸಹಜವಾಗಿ, ಕರುಣಾಪೂರ್ಣವಾಗಿ ಕಿವಿಗೆ ಬೀಳುತ್ತದೆ. ಅದು ತನ್ನ ಕಳಕಳಿಯಿಂದ ಹರಿಹರನ ಪಂಪಾಶತಕ ರಕ್ಷಾಶತಕಗಳ ನೆನಪನ್ನು ತರುತ್ತದೆ. ಹರಿಭಕ್ತಿಸಾರದ ನಿರರ್ಗಳವಾದ ಓಟ, ಅದರಲ್ಲಿ ವ್ಯಕ್ತವಾಗಿರುವ

ಜೀವದ ಅಸಿತ್ಯತಾ ಭಾವ, ಅನನ್ಯ ಶರಣಾಗತಿ ಅತ್ಯಂತ ಹೃದಯಸ್ಪರ್ಶಿಯಾಗಿದೆ. ಇದುವರೆಗೂ ವೃತ್ತರೂಪದಲ್ಲಿ ಪರಿಚಿತವಾದ ಶತಕ, ಕನಕದಾಸರಲ್ಲಿ ಷಟ್ಪದೀ ರೂಪಧಾರಣೆಮಾಡಿದ್ದು ಒಂದು ವಿಶೇಷದ ಸಂಗತಿಯಾಗಿ ತೋರುತ್ತದೆ.

ಕನಕದಾಸ ಸಾಹಿತ್ಯದ ಇನ್ನೊಂದು ಮುಖ ಅವರ ನಳಚರಿತ್ರೆ, ಮೋಹನ ತರಂಗಿಣಿ ಹಾಗೂ ರಾಮಧಾನ್ಯಚರಿತೆ. ಇವು ಮೂರೂ ವಸ್ತುನಿಷ್ಠ ಕೃತಿಗಳು. ಇವು ಭಕ್ತಿಸಾಹಿತ್ಯವಲ್ಲ, ಅವರ ಕೀರ್ತನೆಗಳಂತೆ; ಇವು ಭಕ್ತಪರಂಪರೆಗೆ ಸೇರಿದ ಕವಿನಿರ್ಮಿತ ಕೃತಿಗಳು. ಇವುಗಳಲ್ಲಿ ನಳಚರಿತ್ರೆ ಮತ್ತು ಮೋಹನ ತರಂಗಿಣಿಗಳ ವಸ್ತು ಪುರಾಣೇತಿಹಾಸದಿಂದ ಎತ್ತಿಕೊಂಡುದಾದರೆ, ಅವರ ರಾಮಧಾನ್ಯಚರಿತೆ ಸ್ವತಂತ್ರವಾದ, ಕವಿಕಲ್ಪನಾಸಿದ್ಧವಾದ ಕೃತಿ. ಹೀಗೆ ವಸ್ತುವೈವಿಧ್ಯದ ದೃಷ್ಟಿಯಿಂದಲೂ ಕನಕದಾಸರ ವಿಶಿಷ್ಟತೆ ಎದ್ದುಕಾಣುವಂಥಾದ್ದು.

ನಳಚರಿತ್ರೆ, ಮೋಹನತರಂಗಿಣಿಗಳು ಕನಕದಾಸರು ಭಕ್ತಿಯ ಪ್ರತಿಪಾದನೆಗೆ ಖಂಡಿತ ಬರೆದವಲ್ಲ; ಹುಡುಕಿನೋಡಿದವರಿಗೆ ಕೃಷ್ಣಭಕ್ತಿ ಅವುಗಳಲ್ಲಿ ಕಾಣಿಸಿದರೂ ಅದು ಕೇವಲ ನಿಮಿತ್ತಮಾತ್ರ. ಮುಖ್ಯವಾಗಿ ಅವು ಪ್ರೇಮದ ಕಥೆಗಳು. ನಳಚರಿತ್ರೆಯಲ್ಲಿ ನಳದಮಯಂತಿಯರ ಪ್ರೇಮ; ಮೋಹನ ತರಂಗಿಣಿಯಲ್ಲಿ ಕೃಷ್ಣ–ರುಕ್ಮಿಣಿಯರ, ರತಿ-ಮನ್ಮಥರ, ಉಷಾ–ಅನಿರುದ್ಧರ ಶೃಂಗಾರ. ನಳಚರಿತ್ರೆ ಪ್ರಥಮತಃ ಪ್ರೇಮದ ಕಥೆ. ನಳದಮಯಂತಿಯರ ನಡುವೆ ಇದ್ದ ಗಾಢವಾದ ಪ್ರೇಮವನ್ನೂ, ಅದರ ಮೇಲೆ ಬಿದ್ದ ಕಲಿಪುರುಷನ ಅಥವಾ ವಿಧಿಯ ಕರಾಳ ಛಾಯೆಯನ್ನೂ, ಆದರೂ ಆ ಕತ್ತಲಿನಲ್ಲಿ ನಿಶ್ಚಲವಾದ ದೀಪ್ತಿಯಿಂದ ವರ್ಧಿಸಿದ ಆ ಪ್ರೀತಿಯ ಮಹೋನ್ನತಿಯನ್ನೂ ಕನಕದಾಸರು ಚಿತ್ರಿಸಿದ್ದಾರೆ. ನಳನ ಪಾತ್ರದಲ್ಲಿ ದಮಯಂತಿಯ ಬಗ್ಗೆ ಗಾಢವಾದ ಪ್ರೀತಿ ಇದೆ; ಆದರೆ ಆ ಪ್ರೀತಿಯಲ್ಲಿ ಸ್ವಾರ್ಥದ ಕಲುಷವಿಲ್ಲ. ತನಗಿಂತ ಅಧಿಕರಾದ ಇಂದ್ರಾದಿಗಳೂ ಅವಳನ್ನು ಬಯಸಿದಾಗ, ದಮಯಂತಿಯ ಬಗೆಗೆ ತನಗಿದ್ದ ಪ್ರೀತಿಯನ್ನೂ ಅವರಿಗಾಗಿ ಬದಿಗೊತ್ತಿ, ಅವರ ಪರವಾಗಿ ಪ್ರಣಯದೌತ್ಯವನ್ನು ವಹಿಸುವಂಥ ಮನಃಸ್ಥೈರ್ಯ ಅವನಲ್ಲಿದೆ. ಇದು ಅತ್ಯಂತ ಪ್ರಶಂಸನೀಯವಾಗಿದೆ. ಎರಡನೆಯ ಸಲ ದಮಯಂತಿಗೆ ಸ್ವಯಂವರವಾಗಲಿದೆ ಎಂದು ಕೇಳಿದಾಗಲೂ ಅಷ್ಟೆ. ಹೃದಯಕ್ಕೆ ಹೃದಯವಾಗಿ ಬೆಸೆದುಕೊಂಡ ತನ್ನಾಕೆಯನ್ನು, ಅವಳಿಗೆ ಅದರಿಂದ ಸುಖವಾಗುವುದಾದರೆ, ಕುರೂಪಿಯಾಗಿ ಬಾಹುಕನ ವೇಷದಲ್ಲಿರುವ ತನ್ನನ್ನು ಬಿಟ್ಟು ಬೇರೆಯವರನ್ನು ವರಿಸಲಿ ಎಂದು ಸಾರಥ್ಯ ವಹಿಸಿ ದಮಯಂತೀ ಸ್ವಯಂವರಕ್ಕೆ ಋತುಪರ್ಣರಾಜನನ್ನು ಒಯ್ಯುತ್ತಾನೆ. ತಾನು ಜೂಜಿನಲ್ಲಿ ಸೋತು ರಾಜ್ಯಭ್ರಷ್ಟನಾಗಿ ಕಾಡಿನಲ್ಲಿರುವಾಗಲೂ ಸುಕುಮಾರಿಯಾದ

ದಮಯಂತಿ ತನ್ನ ಜೊತೆಗಿದ್ದು ಕಷ್ಟಪಡುವುದು ಬೇಡವೆಂದೂ, ತಾನು ಬಿಟ್ಟರೆ ಅವಳು ತವರುಮನೆಗಾದರೂ ಹೋಗಿ ಸುಖವಾಗಿರಲಿ ಎಂದೂ ನಡುಗಾಡಿನಲ್ಲಿ ಅವಳನ್ನು ತೊರೆದು ಹೋಗುತ್ತಾನೆ. ಹೀಗೆ ನಳನ ಪಾತ್ರದಲ್ಲಿ ತ್ಯಾಗಮೂಲವಾದ ಪ್ರೀತಿ ಒಂದು ವಿಶಿಷ್ಟಲಕ್ಷಣವಾಗಿ ತೋರುತ್ತದೆ. ಈ ಒಂದು ಅಂಶವೆ ಕನಕದಾಸರ ಮನಸ್ಸನ್ನು ತಟ್ಟಿರಬೇಕು. ಕನಕದಾಸರು ಈ ತ್ಯಾಗಮೂಲವಾದ ಪ್ರೇಮದ ಪ್ರತಿಪಾದನೆಗೆ ನಳಚರಿತ್ರೆಯನ್ನು ಬರೆದಹಾಗೆ ತೋರುವುದೇ ಹೊರತು ಭಕ್ತಿಪ್ರತಿಪಾದನೆಗೆ ಅಲ್ಲ—ಆ ಬಗ್ಗೆ ಒಂದೇ ಒಂದು ಪವಾಡಸದೃಶವಾದ ಪ್ರಸಂಗವಿದ್ದರೂ* ಪ್ರೀತಿ, ಅದರ ಗಾಢತೆ, ಒಲಿದವರ ನಡುವೆ ಬಂದ ವಿಧಿಯ ಕರಾಳ ಛಾಯೆ, ಅದರಲ್ಲಿಯೂ ಎದ್ದುತೋರುವ ದಮಯಂತಿಯ ಪ್ರೇಮನಿಷ್ಠೆ, ನಳನ ತ್ಯಾಗಮೂಲವಾದ ಪ್ರೇಮ—ಇದೇ ಕಾವ್ಯದ ತಿರುಳು. ಪ್ರೀತಿಯಲ್ಲಿ ಕಂಡುಬರುವ ದೈವಿಕತೆಯೆ ಕವಿಗೆ ಪ್ರಧಾನವಾದ ವಿಷಯ. ಇದು ತ್ಯಾಗಮೂಲವಾದ ಶೃಂಗಾರ.

ನಳಚರಿತ್ರೆ ತ್ಯಾಗಮೂಲವಾದ ಶೃಂಗಾರದ ಕಥೆಯಾದರೆ, ಮೋಹನತರಂಗಿಣಿ ಭೋಗಮೂಲವಾದ ಶೃಂಗಾರದ ಕಥೆ. ಒಂದರಲ್ಲಿ ಮಾನವ ಪಾತ್ರಗಳ ತ್ಯಾಗಮೂಲವಾದ ಶೃಂಗಾರವಿದ್ದರೆ, ಇನ್ನೊಂದರಲ್ಲಿ ದೈವೀ ಪಾತ್ರಗಳ ಭೋಗಮೂಲವಾದ ಶೃಂಗಾರವಿದೆ. ಆದರೆ ಈ ದೈವೀ ಪಾತ್ರಗಳ ಹಿನ್ನೆಲೆ ಮಾತ್ರ ಸಮಕಾಲೀನ ವಾಸ್ತವವಾಗಿರುವುದೇ ಮೋಹನತರಂಗಿಣಿಯ ವೈಶಿಷ್ಟ್ಯವಾಗಿದೆ. ನಳಚರಿತ್ರೆಯಲ್ಲಿ ಹಿನ್ನೆಲೆ ಪೌರಾಣಿಕವಾಗಿದೆ, ಪಾತ್ರಗಳು ಮಾನವೀಯುವಾಗಿವೆ; ಮೋಹನತರಂಗಿಣಿಯಲ್ಲಿ ಪಾತ್ರಗಳು ಪೌರಾಣಿಕವಾಗಿವೆ, ಹಿನ್ನೆಲೆ ಸಮಕಾಲೀನವಾಗಿದೆ. ಒಂದರಲ್ಲಿ ಮಾನವರು ಪ್ರೇಮದಿಂದ ದೈವಿಕವಾಗಿ ತೋರುತ್ತಾರೆ, ಇನ್ನೊಂದರಲ್ಲಿ ದೇವತೆಗಳು ಭೋಗದಿಂದ ಮಾನವರಾಗಿ ತೋರುತ್ತಾರೆ.

ನಳಚರಿತ್ರೆಯನ್ನು ಬರೆಯುವಲ್ಲಿ ಕನಕದಾಸರಲ್ಲಿ ಕಂಡುಬಂದ ಆ ಅಶೃಂಖಲ ಸಹಜತೆ ಮೋಹನತರಂಗಿಣಿಯನ್ನು ಬರೆಯುವಲ್ಲಿ ಕಾಣದಂತಾಗಿದೆ. ಮೋಹನತರಂಗಿಣಿಯಲ್ಲಿ ಮಹಾಕಾವ್ಯದ ಸಮಸ್ತ ಸಂಪ್ರದಾಯಗಳನ್ನೂ ತುರುಕುವ ರಭಸವಿದೆ. ಇದನ್ನು ಬರೆಯುವಾಗ ಕನಕದಾಸರೊಳಗಿನ 'ಕವಿ' ಬಹುಮಟ್ಟಿಗೆ ಪ್ರಜ್ಞಾಪೂರ್ವಕವಾಗಿದ್ದಾನೆ. ಹೀಗಾಗಿ ಮೋಹನತರಂಗಿಣಿ ಕಾವ್ಯವಾಗಿ ಅಂಥ ಅಖಂಡತೆಯನ್ನು ಪಡೆದಿಲ್ಲ; ಬಹುಮಟ್ಟಿಗೆ

---

* ಕಾಡಿನಲ್ಲಿ ನಳನು ಬಿಟ್ಟುಹೋದ ನಂತರ ದಮಯಂತಿ ಕೆಲವು ವರ್ತಕರ ಜೊತೆ ಸೇರಿ ಪ್ರಯಾಣವನ್ನು ಮುಂದುವರಿಸುತ್ತಾಳೆ; ಒಮ್ಮೆ ಕಾಡಿನಲ್ಲಿ ಬೀಡಾರಬಿಟ್ಟಿರುವಾಗ ರಾತ್ರಿ ಕಾಡಾನೆಗಳು ನುಗ್ಗಿ ಧಾಳಿಮಾಡುತ್ತವೆ. ಆಗ ದಮಯಂತಿ 'ವನಜನಾಭ ಮುಕುಂದ' ಎಂದು ಪ್ರಾರ್ಥಿಸುತ್ತಾಳೆ. ಆನೆಗಳು ಚದುರಿಹೋಗುತ್ತವೆ. 'ದೈವವ ನೆನೆವ ಭಕ್ತರಿಗುಂಟೆ ಭಯ' ಎನ್ನುತ್ತಾನೆ ಕವಿ: ನಳಚರಿತ್ರೆ: ೫–೫೦.

ಅಷ್ಟಾದಶವರ್ಣನೆಗಳ ಮಗ್ಗದಲ್ಲಿ ನೇಯ್ದ ಪುರಾಣ ಸಾಮಗ್ರಿಗಳ ಒಂದು ತೇಪೆಯಾಗಿದೆ. ಇದರ ವಿಶಿಷ್ಟತೆಯೇನಿದ್ದರೂ, ಅದರ ಹಿನ್ನೆಲೆಯಾಗಿ ಬಂದಿರುವ ವಿಜಯನಗರ ಕಾಲದ ಸಮಕಾಲೀನ ಜೀವನದ ವಾಸ್ತವ ಚಿತ್ರವಷ್ಟೇ. ಅದೂ ಸಹ ಅಷ್ಟಾದಶವರ್ಣನೆಯ ರಥವನ್ನೇರಿದೆ. ಆದರೆ ನಳಚರಿತ್ರೆಗಿರುವಂಥ ಸಂಕ್ಷೇಪತೆ, ಮಾರ್ದವತೆ, ಸರಳತೆ ಇದಕ್ಕಿಲ್ಲವಾಗಿದೆ. ನಳಚರಿತ್ರೆ ಮಾತ್ರ ಹೃದಯಸ್ಪರ್ಶಿಯಾದ ಒಂದು ಖಂಡಕಾವ್ಯದ ಸೊಗಸನ್ನು ತುಂಬಿಕೊಂಡು ನಿಂತಿದೆ.

ನಳಚರಿತ್ರೆಯ ಮತ್ತು ಮೋಹನತರಂಗಿಣಿಯ ಪ್ರಧಾನ ವಸ್ತು ಶೃಂಗಾರ ವಾದರೆ, ರಾಮಧಾನ್ಯಚರಿತೆಯ ವಸ್ತು ಕೇವಲ ಚಮತ್ಕಾರ. ಈ ಕೃತಿಯ ವಸ್ತು ಕವಿಕಲ್ಪನಾಸಿದ್ಧವಾದದ್ದು; ಅದಷ್ಟೇ ಅದರ ವೈಶಿಷ್ಟ್ಯ. ರಾಗಿ ಎಂಬ ಶಬ್ದಕ್ಕೆ ರಾಘವ ಎಂಬುದು ಮೂಲವಿರಬಹುದೆಂಬಂತೆ ಭಾವಿಸಿದ ಅಪನಿಷ್ಪತ್ತಿಯ ನಲೆಗಟ್ಟಿನ ಮೇಲೆ ಕಟ್ಟಿದ ಸ್ವಚ್ಛಂದ ಕಲ್ಪನೆ ಇದರ ವಸ್ತು. ರಾಗಿಯ ಮಹಾತ್ಮೆ ಯನ್ನು ಎತ್ತಿಹಿಡಿಯಲು ಉದ್ದೇಶಪೂರ್ವಕವಾಗಿ ಹೆಣೆದ ಕತೆ ಇದು. ರಾಗಿ ಭತ್ತಗಳಲ್ಲಿ ರಾಗಿಯ ಶ್ರೇಷ್ಠತೆಯನ್ನು ವಿಸ್ತರಿಸಲು ಕನಕದಾಸರು ನಿರ್ಮಿಸಿದ ಮಹಾಭಾರತ ರಾಮಾಯಣಗಳ ಹಿನ್ನೆಲೆಯಿಂದ ವಸ್ತುವಿಗೆ ಗಾಂಭೀರ್ಯವೇನೂ ಬಂದಿಲ್ಲ; ಕೇವಲ ಗಾಂಭೀರ್ಯದ ಸೋಗು ಬಂದಿದೆ. ಬೇರೊಂದು ನಿಲುವಿನಿಂದ ನೋಡುವುದಾದರೆ ಇದು ಪರಂಪರಾಗತವಾದ ಪುರಾಣಕಥಾ ನಿರೂಪಣೆಗಳ ವಿಡಂಬನೆಯಾಗುತ್ತದೆ. ಆದರೆ ಅದು ಕನಕದಾಸರ ಪ್ರಕೃತವಾದ ಉದ್ದೇಶವಲ್ಲ ಎನ್ನುವುದು ಸ್ಪಷ್ಟವಾಗಿಯೇ ಇದೆ. ರಾಗಿ ಭತ್ತಗಳಂಥ ಧಾನ್ಯಗಳಲ್ಲಿ ರಾಗಿಯೇ ಶ್ರೇಷ್ಠ ಎನ್ನುವುದನ್ನು ಎತ್ತಿಹಿಡಿಯಲು ಅವರು ಸಾಮಾನ್ಯ ಜಾನಪದ ಕಥಾ ವೃತ್ತಾಂತವೊಂದನ್ನು ಹಿನ್ನೆಲೆಯನ್ನಾಗಿ ಮಾಡಿಕೊಂಡಿದ್ದರೆ ಕವಿಯ ಉದ್ದೇಶ ಇನ್ನೂ ಹೆಚ್ಚು ಸಮರ್ಪಕವಾಗಿ ನೆರವೇರುತಿತ್ತೆಂದು ತೋರುತ್ತದೆ. ಆದರೆ ಈ ಕೃತಿಯ ಮೂಲಕ ಕನಕದಾಸರು, ಬಡವರು ತಿನ್ನುವ ರಾಗಿಯ ಶ್ರೇಷ್ಠತೆಗೆ ಮೆಚ್ಚಿ ರಾಮನು ತನ್ನ ಹೆಸರನ್ನೇ (ರಾಘವ) ರಾಗಿಗೆ ಕೊಟ್ಟನೆಂದು ಹೇಳುವುದರ ಮೂಲಕ ದೇವರೂ ಸಹ ಬಡವರ ಬಂಧು, ಎಂದು ತತ್ವವನ್ನು ಪ್ರಕಟಿಸಿದ್ದಾರೆ. ಇದರಲ್ಲಿ ಕನಕದಾಸರು 'ಭಾಗವತ ಮನೋಭಾವವನ್ನೂ ಜನತಾದೃಷ್ಟಿ' ಯನ್ನೂ ಪ್ರದರ್ಶಿಸಿದಾರೆ—ಎಂದು ಕೆಲವರು ಅಭಿಪ್ರಾಯಪಡುತ್ತಾರೆ. ಆದರೆ ಈ ತತ್ವ ವಾಗಲಿ, ಅದನ್ನು ಪ್ರತಿಪಾದಿಸಿರುವ ರೀತಿಯಾಗಲಿ, ಅವರ ಬೇರೆಯ ಕೃತಿಗಳಿಗೆ ಹೋಲಿಸಿದರೆ ಅಂಥ ಯಾವ ಘನತೆಯನ್ನೂ ಪಡೆದಿಲ್ಲವೆಂದೇ ಹೇಳಬೇಕು. ಇದರ ವಸ್ತು ಸ್ವಕಲ್ಪಿತವಾದದ್ದೆಂಬಷ್ಟರಿಂದಲೇ ಅದಕ್ಕೆ ಮಹತ್ವ ಪ್ರಾಪ್ತವಾಗುವು ದಿಲ್ಲ; ಎತ್ತಿಕೊಂಡ ವಸ್ತುವಿನ ಸಮರ್ಪಕವಾದ, ಸಂಭಾವ್ಯವೆನ್ನಿಸುವ ನಿರ್ವಹಣೆ ಯಿಂದ ಬೆಲೆ ಬರುತ್ತದೆ. ಆದರೆ ಈ ಕೃತಿಯಲ್ಲಿ ಆ ಒಂದು ಕಲೆಗಾರಿಕೆ ಕಾಣ

ದಾಗಿದೆ. ರಾಗಿ ಭತ್ತಗಳ ವ್ಯಕ್ತೀಕರಣವೂ ಮೈತುಂಬಿಕೊಂಡು ಜೀವಂತವಾಗಿ ನಿಮ್ಮೆದುರು ನಿಲ್ಲುವುದಿಲ್ಲ; ಉದ್ದಕ್ಕೂ ರಾಗಿಯನ್ನು 'ನರೆದಲಗ' ನೆಂದೂ, ಭತ್ತವನ್ನು 'ವ್ರೀಹಿ' ಎಂದೂ, ಪ್ರೌಢತೆಗೋಸ್ಕರ ಕರೆದಿರುವುದು ಅಷ್ಟೇನೂ ಹಿತವಾಗಿಲ್ಲ. ವನವಾಸಕಾಲದಲ್ಲಿ ಧರ್ಮರಾಯನಿಗೆ ಶಾಂಡಿಲ್ಯ ಮಹರ್ಷಿಗಳು ಇದನ್ನು ಹೇಳಿದರೆಂಬ ನಿಷ್ಕಾರಣವಾದ ಹಿನ್ನೆಲೆಯನ್ನು ಕಲ್ಪಿಸಿಕೊಂಡು,* ಶ್ರೀರಾಮನು ರಾಗಿ ಭತ್ತಗಳ ವಿವಾದದಲ್ಲಿ ದೇವಾಧಿದೇವತೆಗಳ ಹಾಗೂ ಋಷಿ–ಮುನಿಗಳ ಸಹಾಯದಿಂದ ಅವುಗಳ ಗುಣಾವಗುಣಗಳನ್ನು ಪರೀಕ್ಷಿಸಿ, ರಾಗಿಯೇ ಶ್ರೇಷ್ಠವೆಂದು ತೀರ್ಮಾನಿಸಿ ಅದಕ್ಕೆ ತನ್ನ ಹೆಸರನ್ನೇ (ರಾಘವ) ಕೊಟ್ಟನೆಂದೂ, ಅದು ಹರಿಹರ ಬ್ರಹ್ಮಾದಿಗಳು ಭಾಗವಹಿಸುವಂಥ ಲೋಕೋತ್ತರ ಘಟನೆಯಾಯಿತೆಂದೂ ವಿಸ್ತರಿಸಿರುವ ಈ ಕಥಾನಿರ್ಮಿತಿ, ವಸ್ತುವಿನ ಹಾಗೂ ಹಿನ್ನೆಲೆಯ ಸಮತೂಕವಿಲ್ಲದೆ ತತ್ತರಿಸುತ್ತದೆ. ಸಾಮಾನ್ಯ ಜಾನಪದ ಕಥೆಯ ಹಿನ್ನೆಲೆಯಿಂದ, ಸಾಂಗತ್ಯದಲ್ಲೋ ಅಥವಾ ಕೀರ್ತನೆಯ ಧಾಟಿಯಲ್ಲೋ ಬರೆದು ಇನ್ನೂ ಜನಪ್ರಿಯವನ್ನಾಗಿ ಮಾಡಬಹುದಾಗಿದ್ದ ಈ ವಸ್ತುವನ್ನು ಕನಕದಾಸರು ಯಾಕೆ ಇಂಥ ಪೌರಾಣಿಕ ಗಡಿಬಿಡಿಯ ಹಿನ್ನೆಲೆಯಲ್ಲಿ, ಅದೂ ಷಟ್ಪದಿಯಲ್ಲಿ ಬರೆದರು ಎನ್ನುವ ಪ್ರಶ್ನೆಯೇ ಇದರ ವಿಶಿಷ್ಟತೆಯಾಗಿ ಕಾಡುತ್ತದೆ.

ಕನಕದಾಸರ ಕೃತಿಗಳ ನಿಜವಾದ ವಿಶೇಷತೆ ಇರುವುದು ಅವುಗಳು ಪ್ರಕಟಿಸುವ ಸಮಕಾಲೀನ ಜೀವನದ ಚಿತ್ರಣದಲ್ಲಿ. ಸಾಮಾಜಿಕ ಪ್ರಜ್ಞೆ ಎಂದರೆ ಕೇವಲ ರಾಜಮಹಾರಾಜರ ಭೋಗ–ವೈಭವ ಜೀವನ ಪ್ರಜ್ಞೆ ಎನ್ನುವ ಭ್ರಮೆಯ ಗರಬಡಿದ ಎಷ್ಟೋ ಕವಿಗಳ ರಚನೆಯಿಂದ ಬೇಸತ್ತವರಿಗೆ, ಕನಕದಾಸರ ಕೃತಿಗಳಲ್ಲಿ ಸಮಕಾಲೀನ ಜೀವನದ ಯಥಾವತ್ತಾದ ಸಹಜ ವರ್ಣನೆಗಳನ್ನು ಕಂಡು ನಿಜಕ್ಕೂ ಸಂತೋಷವಾಗುತ್ತದೆ. ಅವರ ಕೀರ್ತನೆಗಳಲ್ಲಿ ತಕ್ಕಮಟ್ಟಿಗೆ, 'ಮೋಹನತರಂಗಿಣಿ' ಯಲ್ಲಿ ವಿಶೇಷವಾಗಿ ಇದು ಕಾಣಿಸುತ್ತದೆ. 'ಮೋಹನತರಂಗಿಣಿಯ'

---

* ಜೂಜಿನಲ್ಲಿ ಸೋತು, ಸತಿ ಮತ್ತು ಸಹೋದರರೊಂದಿಗೆ ವನವಾಸದಲ್ಲಿದ್ದ ಧರ್ಮರಾಜ, ಧೌಮ್ಯ ಋಷಿಗಳ ಎದುರು ತನ್ನ ಪಾಡನ್ನು ಹಳಿದುಕೊಂಡಾಗ, ಅವರು ಅವನನ್ನು ಸಂತೈಸಲು, ಹಿಂದೆ ನಳಮಹಾರಾಜ ಸತಿಯನ್ನಗಲಿ ಕಟ್ಟಡವಿಯಲ್ಲಿ ಪಾಡು ಪಟ್ಟನೆನ್ನುವ ಕಥಾವೃತ್ತಾಂತವನ್ನು ಹೇಳಿದಂತೆ ಕನಕದಾಸರು ನಿರೂಪಿಸಿದ್ದಾರೆ, ನಳಚರಿತ್ರೆಯಲ್ಲಿ. ಅಲ್ಲಿ ಆ ಋಷಿಗಳು ಆ ಕಥೆಯನ್ನು ಧರ್ಮರಾಯನಿಗೆ ಹೇಳಲು ತಕ್ಕ ಕಾರಣವಿದೆ. ಆದರೆ ರಾಮಧಾನ್ಯಚರಿತೆಯಲ್ಲಿ ಶಾಂಡಿಲ್ಯ ಮಹರ್ಷಿಗಳು ಅಂಥ ಯಾವ ಕಾರಣವೂ ಕೋರಿಕೆಯೂ ಇಲ್ಲದೆ 'ರಘುನಂದನನ ಚರಿತೆ' ಯನ್ನರುಹಲು ಹೊರಟು ರಾಮಧಾನ್ಯ ಅಥವಾ ರಾಗಿಯ ಚರಿತ್ರೆಯನ್ನೇ ಹೇಳುತ್ತಾರೆ. 'ಮನದೊಳಗೆ ನಸುನಗುತ ಶಾಂಡಿಲ್ಯನು ಯುಧಿಷ್ಠಿರಗೆ' (ಪದ್ಯ ೮) ಹೇಳಿದನಂತೆ. ಈ 'ನಸುನಗೆ' ಯಲ್ಲಿ ಈ ಕಥಾವಸ್ತುವನ್ನು ಕುರಿತು ಕನಕದಾಸರ ಭಾವನೆಯೇ ವ್ಯಕ್ತವಾಗಿದೆಯೋ ಏನೋ!

ರಚನೆ ಅಷ್ಟಾದಶವರ್ಣನೆಯ ಇಕ್ಕಟ್ಟಿನಲ್ಲಿ ಸಿಕ್ಕಿಕೊಂಡರೂ, ಅದರಲ್ಲಿ ಹಿನ್ನೆಲೆಯಾಗಿ ಕಂಡುಬರುವ ಜನಜೀವನದ ಚಿತ್ರ, ಕನಕದಾಸರ ಸಮಕಾಲೀನವಾದ ವಿಜಯನಗರದ. ಜನಜೀವನದ ಚಿತ್ರವೇ ಆಗಿದೆ. ನಿದರ್ಶನಕ್ಕೆ ಪುರವರ್ಣನೆ ಹಾಗೂ ವನವಿಹಾರವರ್ಣನೆ ಇವೆರಡನ್ನು ನೋಡಿದರೆ ಸಾಕು: ಪುರವರ್ಣನೆಯ ನೆಪದಲ್ಲಿ ಕನಕದಾಸರು ಮೋಹನತರಂಗಿಣಿಯ ಮೂರು-ನಾಲ್ಕನೆಯ ಸಂಧಿಯಲ್ಲಿ ತಮ್ಮ ಕಾಲದ ಊರಿನ ಒಂದು ಭಾಗದ ಚಿತ್ರವನ್ನೇ ತೆರೆದಿದ್ದಾರೆ; ಗೋಧಿ ಕಡಲೆ ರಾಸಿಯನ್ನು ಹಾಕಿಕೊಂಡ ಅಂಗಡಿಗಳು; ಚಿಪ್ಪಿಗರ ಅಂಗಡಿಗಳು; ಕಂಚುಗಾರರ ಅಂಗಡಿಗಳು; ಬಳೆದೊಡಿಸುವ ಬಳೆಗಾರರ ಅಂಗಡಿಗಳು; ರತ್ನಾಭರಣದ ಅಂಗಡಿಗಳು; ಹಣದ ರಾಸಿಯನ್ನು ಮುಂದೆ ಸುರಿದುಕೊಂಡು ಕೂತ ವರ್ತಕರು; ಹಡಗಿನ ವ್ಯವಹಾರದಲ್ಲಿ ಗಳಿಸಿದ ಹಣವನ್ನು ತೂಕಮಾಡುವ ವಣಿಜರು—ಇದು ಒಂದು ದೃಶ್ಯ. ಬ್ರಾಹ್ಮಣರ ಕೇರಿಗೆ ಬಂದರೆ, ಅಲ್ಲಿ ಮನೆಯ ಮುಂದೆ ತುಳಸೀ ಕಟ್ಟೆಯಿದೆ; ಅಲ್ಲಿ ಪೂಜೆ–ಭಜನೆ ಸಾಗಿದೆ; ಹೋಮಮಾಡುವ ಬ್ರಾಹ್ಮಣರು, ಕನ್ನಡಕ ಹಾಕಿಕೊಂಡು ಸಣ್ಣವರಿಗೆ ಪಾಠಹೇಳುವ ಉಪಾಧ್ಯಾಯರು, ಸ್ನಾನ ಮಾಡಿ ಪಟ್ಟೆನಾಮ ಹಾಕಿಕೊಂಡ ಶ್ರೀವೈಷ್ಣವರು, ಊಟದ ಮನೆಯ ಮುಂದೆ ಹೊಟ್ಟೆ ಮುಂದುಮಾಡಿಕೊಂಡು ಬಾಗಿಲು ಹಿಡಿಸದೆ ನುಗ್ಗಾಡುವ ಹೊಸ ವಿಘ್ನ ರಾಜನ ಬಳಗದಂತಿರುವ ಬ್ರಾಹ್ಮಣರು—ಇದಿಷ್ಟೇ ಸಾಕು ಈ ಚಿತ್ರಗಳು ಎಂಥ ವಾಸ್ತವತೆಯ ಉಸಿರಾಡುತ್ತಿವೆ ಎನ್ನುವುದಕ್ಕೆ. ಇನ್ನೊಂದು ನಿದರ್ಶನ ವನ ವಿಹಾರ ವರ್ಣನೆಯದು: ಇಲ್ಲಿಯೂ ಅಷ್ಟಾದಶವರ್ಣನೆಯ ಪ್ರಕಾರ ವನವಿಹಾರ ವರ್ಣನೆ ನಡೆದಿದೆ, ಕೃಷ್ಣನ ಅರಮನೆಯ ರಾಣಿಯರಿಂದ. ಆದರೆ ಇಲ್ಲಿನ ಸ್ತ್ರೀಯರು ಬೇರೆಯ ಕವಿಗಳ ಕಾವ್ಯದಲ್ಲಿಯಂತೆ ಉದ್ಯಾನದ ಹೂವು–ತಳಿರು ಗಳನ್ನು ಕಿತ್ತು ಬಳಲಿ ಬೆಂಡಾಗುವ ಸುಕುಮಾರಿಯರಲ್ಲ; ಹೂವುಗಳನ್ನು ಕೇವಲ ಸಿಂಗಾರಕ್ಕಾಗಿ ಮಾತ್ರ ಬಳಸಿ ತೃಪ್ತರಾದವರಲ್ಲ. ಇವರು "ಕೈದಣಿವನಕ ನಾನಾ ಪುಷ್ಪಂಗಳ ಕೊಯ್ದು ಪೊಟ್ಟಣವ ಕಟ್ಟಿದರು". ಅಷ್ಟೇ ಅಲ್ಲ, 'ಅಂಬೆಹಳದಿ ಕಾರ್ಗೆಣಸು ನೀರುಳ್ಳಿ ಕೊತ್ತುಂಬರಿ ಕರಿಬೇವು ಸಹಿತ, ಸಿಂಬೆ ಕೂಗಲಿ ಪಿಪ್ಪಲ ಗಾಯ ಕೊಯ್ದರು ನಿಂಬೆಯ ಕಟಿವಣ್ಗಳೊಡನೆ' [೪–೫೯, ೬೧]. ಇವರು ಕೇವಲ ವಿಲಾಸಕ್ಕೆ ಬಂದವರಲ್ಲ; ಕೃಷ್ಣನ ಅರಮನೆಯ ಈ ಹೆಂಗಸರು ಅಡುಗೆ ಮನೆಯನ್ನು ನೆನಪಿನಲ್ಲಿರಿಸಿಕೊಂಡ ಗೃಹಿಣಿಯರು. ಆದುದರಿಂದಲೇ ಇವರು 'ನೀರುಳ್ಳಿ ಕೊತ್ತುಂಬರಿ ಕರಿಬೇವು ಸಹಿತ' ಕೊಯ್ದು ಪೊಟ್ಟಣ ಕಟ್ಟಿದಾರೆ ಉಳಿದ ಕಾವ್ಯಗಳಲ್ಲಿ ಕಂಡುಬರುವ ವನವಿಹಾರ ವರ್ಣನೆಯಲ್ಲಿ ಕಾಣಿಸುವ ವಿಲಾಸಿನಿಯರಿಂದ ಭಿನ್ನವಾದ ಈ ಗರತಿಯರ ವ್ಯವಹಾರದಲ್ಲಿ ಜನಸಾಮಾನ್ಯರ ನಡವಳಿಕೆ ಇದೆ; ಆ ನಡವಳಿಕೆ ಸಹಜವಾಗಿದೆ, ಹಿತವಾಗಿದೆ. ಅಷ್ಟಾದಶ ವರ್ಣನೆಯ ಇಕ್ಕಟ್ಟಿನಲ್ಲಿ ಕಾವ್ಯದ ರಚನೆ ಸಿಕ್ಕಿಕೊಂಡರೂ, ಇಂಥ ಜನಜೀವನದ

ಯಥಾರ್ಥವಾದ ಚಿತ್ರಗಳನ್ನು ಕೊಡುವುದರ ಮೂಲಕ ಕನಕದಾಸರು ತಮ್ಮ ಸಾಮಾಜಿಕ ಪ್ರಜ್ಞೆಯನ್ನು ಪ್ರಕಟಿಸಿ ಅಭಿನಂದನೀಯರಾಗಿದ್ದಾರೆ. *

ಕನಕದಾಸರು ತಮ್ಮ ಸುತ್ತಣ ಜೀವನದ ಬಗ್ಗೆ ಹೇಗೆ ಜೀವಂತ ಪ್ರಜ್ಞೆಯುಳ್ಳವರಾಗಿದ್ದರೋ, ಅಷ್ಟರಮಟ್ಟಿಗೆ ತಮ್ಮ ಸುತ್ತಣ ಜನಭಾಷೆಯ ಬಗೆಗೂ ಎಚ್ಚರವನ್ನು ಕಾಯ್ದುಕೊಂಡಿದ್ದಂತೆ ತೋರುತ್ತದೆ. ಆದುದರಿಂದಲೇ ಅವರ ಕೃತಿಗಳ ಶೈಲಿ ಬಹುಮಟ್ಟಿಗೆ ದೇಸೀಯತೆಯ ಲಕ್ಷಣಗಳನ್ನು ತುಂಬಿಕೊಂಡಿದೆ. ಅವರ ಶೈಲಿಯಲ್ಲಿ 'ನಾಡೊಳಗುಳ್ಳ ಜಾಣ ಜಾಣೆಯರೊಡನಾಡುವ ನವಿಮಾತುಗಳ'ನ್ನು 'ಪಾಡುಗಬ್ಬ' ವಾಗಿ ವಿಸ್ತರಿಸುವ ಜಾಣ್ಮೆ ಕಂಡುಬರುತ್ತದೆ. ಅವರಲ್ಲಿ ಕೇವಲ ಸುಶಿಕ್ಷಿತ ಸಮಾಜದ ಭಾಷೆಮಾತ್ರವಲ್ಲ, ಅವರು ಹುಟ್ಟಿ ಬೆಳೆದುಬಂದ ಅಶಿಕ್ಷಿತ ಸಮಾಜದ ಭಾಷೆಯೂ ಯಥಾವತ್ತಾಗಿ ಬಂದಿದೆ. "ದೇವೀ ನಮ್ಮ ದ್ಯಾವರು ಬಂದರು, ಬನ್ನೀರೇ ನೋಡ ಬನ್ನೀರೇ", "ಆತನೊಲಿದಮ್ಯಾಲೆ ಯಾತರ ಕುಲವಯ್ಯ"—ಎನ್ನುವಂಥ ಅಭಿವ್ಯಕ್ತಿಗಳು ಇದಕ್ಕೆ ನಿದರ್ಶನ. ಅಷ್ಟೇ ಅಲ್ಲ ಅವರು ಸಾಕಷ್ಟು ಪೂರ್ವಕವಿಗಳ ಕಾವ್ಯಾಭ್ಯಾಸಮಾಡಿ ಪ್ರೌಢಭಾಷೆಯ 'ವ್ಯುತ್ಪತ್ತಿ' ಯನ್ನು ಪಡೆದವರಾಗಿದ್ದರೂ, ಅವರ ಕೃತಿಗಳಲ್ಲಿ 'ಆಡಂಬರ ವಿಲ್ಲದ ಸಂಸ್ಕೃತವು ತಿಳಿಯಾದ ತಿರುಳ್ಗನ್ನಡದೊಂದಿಗೆ ಹೊಂದಿದ ಸಮರಸತೆ' † ಯನ್ನು ಗುರುತಿಸಬಹುದು. ಸರಳತೆ, ಹೃದ್ಯತೆಗಳೇ ಅವರ ಶೈಲಿಯ ವಿಶಿಷ್ಟತೆ. ಎಲ್ಲಿಯೂ ಅವರ ಭಾಷೆ ಪೆಡಸಾಗಿಲ್ಲ; ಎತ್ತಿಕೊಂಡ ವಸ್ತು-ಭಾವಗಳಿಗೆ ಉಚಿತವಾಗಿ, ಸರಳವಾದ ಮಾತುಗಳಲ್ಲಿ ವಿಶೇಷವಾದ ಅರ್ಥವನ್ನು ವಿಸ್ತರಿಸುತ್ತಾ ಹೋಗುತ್ತದೆ. 'ಮನವೆನ್ನ ಮಾತ ಕೇಳದು ಕಾಣೊ ಗೋವಿಂದ'; 'ಅಹುದಾದರಹುದೆನ್ನಿ ಅಲ್ಲವಾದರಲ್ಲವೆನ್ನಿ'; 'ದೇವರಿಲ್ಲದ ಗುಡಿಯು ಹಾಳುಬಿದ್ದಂಗಡಿಯು....ಕರ್ಮವಿಲ್ಲದ ಗಂಡು ಕರಿಯ ಒನಕೆಯ ತುಂಡು'; 'ಅಂಧಕನನುಜನ ಕಂದನ ತಂದೆಯ ಕೊಂದನ ಶಿರದಲಿ ನಿಂದವನ'; 'ತೊರೆದು ಜೀವಿಸಬಹುದೆ ಹರಿ ನಿಮ್ಮ ಚರಣಗಳ'—ಈ ಮಾತುಗಳಲ್ಲಿರುವ ಲಾಲಿತ್ಯ ಮತ್ತು ಸರಳತೆ; 'ಬೀಜವೃಕ್ಷದೊಳಾಯ್ತು, ವೃಕ್ಷಕೆ ಬೀಜವಾರಿಂದಾಯ್ತು'; 'ಸತ್ತವರಿಗಳಲೇಕೆ ತನ್ನನು ಹೆತ್ತವರುಗಳು ತಾವ್ ಸತ್ತುಹೋಗುವರಲ್ಲದುಳಿವರೆ?' 'ಎಂಜಲೆಂಜಲು ಎಂಬರಾ ನುಡಿ ಎಂಜಲಲ್ಲವೆ'; 'ನೀ ಮಾಯೆಯೋ ನಿನ್ನೊಳು ಮಾಯೆಯೋ'; 'ಆತನೊಲಿದ ಮೇಲೆ ಯಾತರ ಕುಲವಯ್ಯ?'—ಈ ಪ್ರಶ್ನೆ ಶೈಲಿಯಲ್ಲಿ ಪ್ರಕಟವಾಗುವ ವೈಚಾರಿಕಮನೋಧರ್ಮ; 'ಹೊಡೆದಲು ಮರ

---

* ಶ್ರೀ ಬೆಟಗೇರಿ ಕೃಷ್ಣಶರ್ಮ ಅವರ 'ಕರ್ನಾಟಕ ಜನಜೀವನ'—ಎಂಬ ಗ್ರಂಥದಲ್ಲಿ 'ಕನಕದಾಸರು ಕಂಡ ವಿಜಯನಗರ'—ಎಂಬ ವಿಸ್ತಾರವಾದ ಪ್ರಬಂಧವಿದೆ. ಕುತೂಹಲವುಳ್ಳವರು ನೋಡಬಹುದು.

† ರಂ. ಶ್ರೀ. ಮುಗಳಿ: ಕನ್ನಡ ಸಾಹಿತ್ಯ ಚರಿತ್ರೆ, ಪುಟ ೨೯೦.

ಮುಟ್ಟ್ಟಿ ಮಾಂಸದ ಗೋಡೆ ಚರ್ಮದ ಹೊದಿಕೆ ನರಗಳ ಕೂಡೆ ಹಿಂಡಿಗೆ ಬಿಗಿದ ಮನೆಯೊಳಗಾತ್ಮನಿರುತಿರಲು'; 'ಹಳ್ಳ ಹರಿದಮೇಲೆ ಗುಳ್ಳೆ ಉರುಳಿತಲ್ಲೊ ನೀರ ಮೇಲೆ ಉಳ್ಳಿಪೊರೆಯಂತೆ ಕಾಣೊ ಸಂಸಾರದ ಆಟ'; 'ತುಱುಗಿದ ಕಾಯಿ ಪಣ್ಗಳ ಸಾಲ ವೃಕ್ಷವ, ಮುರಿದು ದೂಳಿಯ ಚಲ್ಲಿಕೊಳುತ ॥ ಸುರಿವ ಸೊಂಡಿಲ ನೀರ್ಗರೆಯುತ ಬಂದುದು । ಬಿರುಗಾಳಿ ಮದಗಜದಂತೆ';—ಈ ವರ್ಣನೆಗಳಿಂದ ವೈದಾಳಿ ನಿಲ್ಲುವ ಪ್ರತಿಮಾವೈಭವ—ಇವುಗಳು ಕನಕದಾಸರ ಶೈಲಿಯ ವಿಶಿಷ್ಟತೆಯನ್ನು ಎತ್ತಿಹಿಡಿದು ಅವರು ನಿಜವಾದ ಕವಿಗಳು ಎನ್ನುವುದನ್ನು ತೋರಿಸುತ್ತವೆ. ಅಷ್ಟೇ ಅಲ್ಲ, ಆ ಒಂದು ಶತಮಾನದಲ್ಲಿ ಪ್ರಚಲಿತವಾದ ಛಂದೋ ರೂಪಗಳಲ್ಲೂ ಕನಕದಾಸರು ಸಲೀಸಾಗಿ ಬರೆಯಬಲ್ಲರು; ಕೀರ್ತನೆಗಳ ಧಾಟಿಯಲ್ಲಿ, ಷಟ್ಪದಿಗಳ ರೀತಿಯಲ್ಲಿ, ಸಾಂಗತ್ಯದಲ್ಲಿ ಅವರ ಪ್ರಯೋಗ ಗಮನಾರ್ಹವಾಗಿದೆ. ಷಟ್ಪದಿ–ಕೀರ್ತನೆ–ಸಾಂಗತ್ಯ ಈ ಮೂರು ರೀತಿಗಳಲ್ಲೂ ಪ್ರಧಾನವಾದ ದೇಸೀಯತೆ, ತಿಳಿಯಾಗಿ ನಿರರ್ಗಳವಾಗಿ ಎಂಥ ಸಾಮಾನ್ಯ ಓದುಗನ ಮನಸ್ಸನ್ನೂ ಸೂರೆಗೊಳ್ಳುವಂತಿದೆ. ಅವರ ಷಟ್ಪದಿಗಳಲ್ಲಿ ಕುಮಾರವ್ಯಾಸನ ಪ್ರಭಾವವಿದೆ; * ಅವರ ಕೀರ್ತನೆಗಳಲ್ಲಿ ಪುರಂದರದಾಸರ ಛಾಯೆಯಿದೆ; ಅವರ 'ಕನಕನ ಮುಂಡಿಗೆ'ಗಳೆಂಬ ಕೆಲವು ರಚನೆಗಳಲ್ಲಿ ಬೆಡಗಿನ ವಚನಗಳ ಅನುಕರಣವಿದೆ. ಆದರೆ ಈ ನೆಳಲು ಬೆಳಕಿನ ನಡುವೆ ಕನಕದಾಸರು ತಮ್ಮ ತೇಜಸ್ಸನ್ನು ಕಳೆದುಕೊಂಡಿಲ್ಲ. ಅವರು ತಮ್ಮ ಕವಿವಿಶಿಷ್ಟವಾದ ಸಹಜ ಪ್ರತಿಭೆಯಿಂದ, ಮನಸ್ಸಿನ ಉದಾರತೆಯಿಂದ, ವಸ್ತುವೈವಿಧ್ಯ ಹಾಗೂ ಛಂದೋವೈವಿಧ್ಯಗಳಿಂದ, ಸಮಕಾಲೀನ ಜೀವನ ಪ್ರಜ್ಞೆಯಿಂದ, ಪಂಥಬದ್ಧವಲ್ಲದ ಉದಾತ್ತ ವ್ಯಕ್ತಿತ್ವದಿಂದ ದಾಸ ಪರಂಪರೆಯಲ್ಲಿ ಮಾತ್ರವಲ್ಲದೆ ಕನ್ನಡ ಕವಿಗಳ ಪಂಕ್ತಿಯಲ್ಲಿಯೂ ವಿಶಿಷ್ಟವಾದ ಸ್ಥಾನವನ್ನು ಸಂಪಾದಿಸಿಕೊಂಡಿದ್ದಾರೆ.

---

* ಹರಿಭಕ್ತಿಸಾರ, ರಾಮಧಾನ್ಯಚರಿತದಲ್ಲಿ ಅಲ್ಲಲ್ಲಿ, ನಳಚರಿತ್ರೆಯಲ್ಲಿ ವಿಶೇಷವಾಗಿ ಕುಮಾರವ್ಯಾಸನ ಪ್ರಭಾವವಿದೆ. ನಳ–ಪುಷ್ಕರ ಇವರ ದ್ಯೂತಪ್ರಸಂಗದಲ್ಲಿ (ಸಂಧಿ ೪–ಪದ್ಯ ೩೦, ೩೧, ೩೩, ೩೪, ೩೭) ಕುಮಾರವ್ಯಾಸನ ಸಭಾಪರ್ವದ ಪ್ರಭಾವ ಎದ್ದು ಕಾಣುತ್ತದೆ.

# ಕಾಗಿನೆಲ್ಲಿ

## (ಐತಿಹಾಸಿಕ ಹಿನ್ನೆಲೆ)

**ಶ್ರೀ ತಲ್ಲೂರ ರಾಯನಗೌಡರು ಪಾಟೀಲ**

ಕನ್ನಡ ಸಾಹಿತ್ಯದಲ್ಲಿ ಕನಕದಾಸ ಮತ್ತು ಕಾಗಿನೆಲೆ ಈ ಎರಡೂ ಶಬ್ದಗಳು ಅವಳಿ ಜವಳಿಯಾಗಿ ಅಮರವಾಗಿರುವವು. 'ಕಾಗಿನೆಲೆಯಾದಿಕೇಶವ' ಈ ಅಂಕಿತದಲ್ಲಿ ಕನಕದಾಸರ ಕಾವ್ಯಗಂಗೆಯು ಹೊನಲಾಗಿ ಹರಿದಿದೆ. ಈ ಗಂಗೆಗೆ ಉಗಮ ಸ್ಥಾನವೇ ಕಾಗಿನೆಲೆ. ಇದನ್ನು ಅರಿಯದ ಕನ್ನಡಿಗರೇ ವಿರಳ.

ಕಾಗಿನೆಲೆಗೆ ಕಾಗಿನೆಲ್ಲಿಯೆಂದು ಕರೆಯುವ ರೂಢಿಯಾಗಿದೆ. ಧಾರವಾಡ ಜಿಲ್ಲೆಗೆ ಇಂದು ಒಳಪಟ್ಟ ಒಂದು ಚಿಕ್ಕ ಗ್ರಾಮ. ಹಿಂದೆ ಹಿರೇಕೆರೂರ ತಾಲ್ಲೂಕಿಗೆ ಸೇರಿದ್ದನ್ನು ಈಗ ಬ್ಯಾಡಿಗೆ ಬ್ಲಾಕಿಗೆ ವರ್ಗಾಯಿಸಿರುವರು. ಹಾವೇರಿಯ ರೈಲ್ವೆ ನಿಲ್ದಾಣದಿಂದ ಒಂಬತ್ತು ಮೈಲು ಅಂತರದಲ್ಲಿದೆ. ಇಲ್ಲಿಂದಲೇ ರಹದಾರಿ ಮತ್ತು ವಾಹನಗಳ ಸೌಕರ್ಯವುಂಟು. ಕಾಗಿನೆಲ್ಲಿಯಲ್ಲಿ ಹಳೆ ಊರು, ಹೊಸ ಊರು ಎಂದು ಎರಡು ವಿಭಾಗಗಳಿರುವವು. ಹಳೆ ಊರು ಹಾಳು ಪ್ರದೇಶ; ಹಳೆಯ ಕಾಲದ ಗುಡಿ–ಗೋಪುರಗಳು, ದೀಪಸ್ತಂಭಗಳು, ಗದ್ದುಗೆ ಸಮಾಧಿಗಳು ಚೆಲ್ಲಾಪಿಲ್ಲಿಯಾಗಿ ಬಿದ್ದಿರುವ ಶಿಲಾಶಾಸನಗಳು, ಶಿಲ್ಪಕಲೆಗಳಿಂದ ಕೂಡಿದ ತುಂಡು–ತುಣುಕು ಕಲ್ಲುಪಾಷಾಣಗಳು ಕಂಡುಬರುವವು. ಇದೊಂದು ವಿಶಾಲವಾದ ಹಾಳು ಬಯಲು. ಮುಳ್ಳು, ಗಿಡಗಂಟೆ, ತಗ್ಗು–ದಿನ್ನೆ ಬೀಳುಗಳಿಂದ ತುಂಬಿಹೋಗಿದೆ. ಈ ಬಯಲಿಗೆ ಹೊಂದಿಯೇ ಒಂದು ಕಿರಿಯುಗಲಾದ ಕೆರೆಯೊಂದಿದೆ. ಈ ಕೆರೆಯ ದಂಡೆಯ ಮೇಲೆಯೇ ಕನಕದಾಸರ ಸಮಾಧಿಯೂ ಇರುತ್ತದೆ. ಮಗ್ಗುಲಲ್ಲಿ ವಿಶಾಲವಾದ ಆಕಾಶ ಚುಂಬಿಸುವ ಅರಳಿಯ ಮರವೊಂದಿದೆ. ದಾಸರ ಘನತೆಯನ್ನು ನಾನೂರು ವರುಷಗಳಿಂದ ಕಾಪಾಡುತ್ತ ನಿಂತಿರುವೆನೆಂಬ ಸೇವೆಯ ಅಟ್ಟಹಾಸವನ್ನು ವ್ಯಕ್ತಪಡಿಸುತ್ತಲಿದೆ. ಇದೇ ಮೂಲ ಕಾಗಿನೆಲೆ. ಪುರಾತನ ನಗರ, ಕೋಟೆ–ಕೊತ್ತಳ, ಬುರುಜು, ಅಗಳು, ಆಳ್ವೇರಿ ಮುಂತಾದ ಅವಶೇಷಗಳನ್ನು ಊಹೆಮಾಡಬಹುದು. ಗಚ್ಚಿನ ಹೌದುಗಳು, ಕಟ್ಟೆಗಳು, ದೀಪಸ್ತಂಭಗಳು, ಒಡೆದುಹೋದ ಕೆಲವು ಶಾಸನಗಳು, ಹುಗಿದುಹೋದ ಕಲ್ಬರಹದ ಶಿಲೆಗಳು, ಮುಕ್ಕುಮುಕ್ಕಾದ ಪ್ರತಿಮೆಗಳು, ಶಿಲ್ಪಕಲೆಯಿಂದ ಕೂಡಿದ ಕಂಬಗಳು ಈ ಬಯಲಲ್ಲಿ ಬಿದ್ದುಕೊಂಡು ಪುರಾತನದ ವಾತಾವರಣವನ್ನು ದುಃಖವಿಲ್ಲದೆ ಅನೇಕ ವರುಷಗಳ ಕಾಲದ ಮಹಿಮೆಯನ್ನು ಪ್ರದರ್ಶಿಸುತ್ತಲಿವೆ. ಈ ಹಳೆಯೂರಿಗೆ ಹೊಂದಿ ಮರಡಿಯಿದೆ. ಈ ಮರಡಿಗೆ ಆದಿಕೇಶವನ ಮರಡಿಯೆಂದು ಕರೆಯುತ್ತಾರೆ. ಇಲ್ಲಿಯೇ ಲಕ್ಷ್ಮೀನರಸಿಂಹ,

ಆದಿಕೇಶವ ಈ ದೇವರ ಗುಡಿಗಳೆರಡೂ ಮಣ್ಣಿನಿಂದ ಕಟ್ಟಲ್ಪಟ್ಟ ಪ್ರಾಕಾರದಲ್ಲಿವೆ. ಇದೇ ಆದಿಕೇಶವ ಮೂರ್ತಿಯೇ ಕನಕದಾಸರ ಆರಾಧ್ಯದೇವತೆ, ಸಾಕ್ಷಾತ್ಕಾರ ಕ್ಷೇತ್ರವು. ಇದನ್ನು ಎಡಬಲಗೊಂಡು ಅನುಕೂಲವಾದಂತೆ ವಾತಾವರಣಕ್ಕನು ಸರಿಸಿ ಹೊಸಹಳ್ಳಿಯು ನೆಲೆಸಿ ನಿಂತಿದೆ.

## ಕಾಗಿನೆಲ್ಲಿ ಪ್ರಾಚೀನ ಪಟ್ಟಣ

ಕಾಗಿನೆಲೆಯು ಬುನಾದಿಯಿಂದ ಅನೇಕ ತೊಡಿಗೆಗಳನ್ನು ತೊಡುತ್ತ ಕಾಲ ಮಹಿಮೆಗೆ ತುತ್ತಾಗಿ ಬದಲಾಗುತ್ತ ಬಂದಿರುವ, ಪ್ರಾಚೀನ ಪಡಿಮೂಲೆಯ ಮಂಡಲ; ಒಂದು ಪರಗಣೆಯಾಗಿ ಅನೇಕ ಗ್ರಾಮಗಳನ್ನೊಳಗೊಂಡ ಭದ್ರ ಕೋಟೆಯ ಸ್ಥಳವಾಗಿದ್ದಿತು. ಈಗ ಈ ಸ್ಥಳದಲ್ಲಿ ೧೫ ಶಿಲಾಶಾಸನಗಳುಂಟು, ೧೦ ಪುರಾತನ ದೇವಾಲಯಗಳುಂಟು. ಕೇಂದ್ರ ಸರ್ಕಾರದ ಶಿಲಾಶಾಸನ ಇಲಾಖೆಯವರು ಕ್ರಿ.ಶ. ೧೯೩೩–೧೯೩೪ರಲ್ಲಿ ಹಾವೇರಿ ತಾಲ್ಲೂಕಿನ ಶಾಸನಗಳನ್ನು ಸರ್ವೇ ಮಾಡಿದಾಗ ಕಾಗಿನೆಲ್ಲಿಯಲ್ಲಿ ಅವರಿಗೆ ದೊರೆತ ೧೨ ಕಲ್ಬರಹಗಳನ್ನು ಪರಿಶೀಲಿಸಿ, ಸಾರಾಂಶಗಳನ್ನು ಪ್ರಕಟಿಸಿದ್ದಾರೆ. ಕೆಲವು ಶಾಸನಗಳು ಸ್ಪಷ್ಟವಾಗಿವೆ. ಕೆಲವನ್ನು ಇನ್ನೂ ಖಚಿತಗೊಳಿಸಬೇಕಾಗಿದೆ. ಶ್ರೀ ಕಟ್ಟೀ ಶೇಷಾಚಾರ್ಯರ ಅಭಿಪ್ರಾಯದಲ್ಲಿ "ಕಾಗಿನೆಲೆಯು ಬನವಾಸಿ ದೇಶಕ್ಕೆ ಒಳಪಟ್ಟಿತ್ತೆಂದು ತೋರುತ್ತದೆ. ಬನವಾಸಿಯು ಪನ್ನಿಚ್ಛಾಸಿರನಾಡು. ಮೊದಲಿನಿಂದ ಕದಂಬರಿಗೆ ನಡೆದು ಬಂದುದು. ಕಾಗಿನೆಲೆಯು ಪನ್ನೆರಡರ ಪಟ್ಟಣ." ಕದಂಬರನ್ನು ಸೋಲಿಸಿ ಚಾಲುಕ್ಯರು ಬನವಾಸಿಯ ಹಿರಿಯರಸರಾದರು. ಕೆಲಕಾಲ ಕಾಗಿನೆಲೆಯು ದೇವಗಿರಿಯ ಯಾದವರ ಕೈವಶವಾಯಿತು. ಕಾಗಿನೆಲೆಗಾಗಿ ಕಳಚೂರಿಯರು ಕಾದಿದಂತೆ ತೋರುತ್ತಿದೆ. ಇದಕ್ಕಿಂತಲೂ ಮಸಮಸುಕಾದ ಹಿಂದಿನ ಇತಿಹಾಸವು ಉಂಟೆಂದು ತಿಳಿಯುತ್ತದೆ. ೮ನೆಯ ಶತಮಾನದಲ್ಲಿ ರಾಷ್ಟ್ರಕೂಟರು, ಕದಂಬರು, ೧೦–೧೧ನೆಯ ಶತಮಾನದಲ್ಲಿ ಗಂಗರು ಚಾಳುಕ್ಯರು ಈ ನಾಡನ್ನು ಆಳಿದಂತಿದೆ. ಅನೇಕ ಜೈನಕಾಲದ ಅಗ್ರಹಾರಗಳು, ಧಾರ್ಮಿಕ ಕೇಂದ್ರಗಳು, ಪ್ರೌಢಶಾಲೆಗಳು ಇದ್ದಂತೆ ತೋರುವವು. ಗಂಗರ ಉದಯಾದಿತ್ಯ, ಚಾಲುಕ್ಯರ ಸೋಮೇಶ್ವರ ಮುಂತಾದ ರಾಜರು ಈ ಪರಗಣೆಯ ಮೇಲೆ ಪ್ರಭಾವ ಬೀರಿದ್ದುಂಟು. ೧೧ನೆಯ ಶತಮಾನದಿಂದೀಚೆಗೆ ಚಾಲುಕ್ಯರ ಭುವನೈಕಮಲ್ಲರಿಂದ ದತ್ತಿ-ದಾನಪಟಗಳನ್ನು ಕೊಟ್ಟಿರುವ ಸ್ಪಷ್ಟ ಆಧಾರಗಳು ಸಿಗುವವು. ೧೩ನೆಯ ಶತಮಾನದ ನಂತರ ದೇವಗಿರಿಯ ಯಾದವ (ರಾಮಚಂದ್ರರಾಯ)ರು, ಕಾಳಹಸ್ತೇಶ್ವರ, ಬಿಟ್ಟೇಶ್ವರ ಮಂದಿರಗಳಿಗೆ ದಾನಪತ್ರ ಕೊಟ್ಟಿರುವರು. ೧೪ನೆಯ ಶತಮಾನದಲ್ಲಿ ಬಹಾಮನಿ ಸುಲ್ತಾನರು ವಿಜಯನಗರದ ಬುಕ್ಕರಿಂದ ಹಸ್ತಗತಮಾಡಿಕೊಂಡಂತೆ ತೋರುತ್ತದೆ. ವಿಜಯನಗರದ ಕೊನೆಯ ಕಾಲದ ರಕ್ಕಸತಂಗಡಿಗೆಯ ಯುದ್ಧದ

ವರೆಗೂ, ವಿಜಯನಗರದವರ ಮಾಂಡಲೀಕತ್ವದಲ್ಲಿ ಕಾಗಿನೆಲ್ಲಿಯು ಒಂದು ಪರಗಣೆಯಾಗಿ, ಸುಭೆಯಾಗಿದ್ದಿತೆಂದು ಸ್ಪಷ್ಟವಾಗಿ ತಿಳಿಯುತ್ತಿದೆ. ಈ ಅವಧಿಯಲ್ಲಿಯೇ ಕನಕನು ಢಣಾಯಕನಾಗಿ ವಿಜಯನಗರ ಮಾಂಡಲೀಕನಾಗಿದ್ದನು. ಕ್ರಿ.ಶ. ೧೫೭೩ ರಲ್ಲಿ ವಿಜಾಪುರದ ಸುಲ್ತಾನರು ಗೆದ್ದು,—ಈ ಪರಗಣೆಯನ್ನು ಬಂಕಾಪುರಕ್ಕೆ (ಆಗ ಪ್ರಾಂತವಾಗಿತ್ತು) ಸೇರಿಸಿದ್ದಿರಬೇಕು. ವಿಜಾಪುರದ ದಂಡನಾಯಕನಾಗಿದ್ದ ಮುಸ್ತಫಾಖಾನನ ಹಲ್ಲೆಯಿಂದ ಇಲ್ಲಿನ ಕೋಟೆ ಕೊತ್ತಳಗಳು ವಿಶೇಷ ಘಾಸಿಯಾಗಿದ್ದಂತೆ ತೋರುತ್ತದೆ. ಬರಬರುತ್ತ ಸವಣೂರ ನವಾಬರ ಪೂರ್ವಿ ಅಬ್ದುಲ್ ಕರೀಮಖಾನರ ವಶಕ್ಕೆ ಬಂದಿತು. ಮುಂದೆ ಮೊಗಲರ, ವಿಜಾಪುರದವರ, ಮರಾಠಾ-ಬ್ರಿಟಿಷರ ರಾಜ್ಯವಿಸ್ತರಣೆಯಲ್ಲಿ ಕಾಲಕ್ರಮೇಣ ದಾಳಿಗಳಿಗೆ ಸಿಕ್ಕು ರಾಜಕೀಯ ಸಾಮಾಜಿಕ ಒತ್ತಡಗಳಿಗೆ ಈಡು ಆಯಿತು.

## ಚೆಲುವ ಕನ್ನಡನಾಡು

ಕಾಗಿನೆಲ್ಲಿಯು ನಿಸರ್ಗದ ಮಡಲಲ್ಲಿ ನೆಲೆನಿಂತು, ಈಗಲೂ ತನ್ನ ಚೆಲುವನ್ನು ಪ್ರದರ್ಶಿಸುತ್ತಲಿದೆ. ಕಾಗಿನೆಲ್ಲಿಯು ಮಲೆನಾಡಿನ ಅಂಚಿನಲ್ಲಿದೆ. ಭತ್ತದ ಗದ್ದೆಗಳು, ಕಬ್ಬು, ತೆಂಗು, ಬಾಳೆ, ಮಾವಿನ ತೋಟಗಳು ಮನವನ್ನಾಕರ್ಷಿಸುತ್ತಿರುವವು. ಇದನ್ನೇ ೧೬ ನೆಯ ಶತಮಾನದಲ್ಲಿ ಕನಕದಾಸರು ಮನವಾರೆ ಹೊಗಳಿದ್ದಾರೆ. ೧೦-೧೨ ನೆಯ ಶತಮಾನಗಳಲ್ಲಿಯು ಕಾಗಿನೆಲೆಯೂ ಸೊಗಸಾಗಿತ್ತೆಂದು ಚಾಲುಕ್ಯ ಮತ್ತು ದೇವಗಿರಿಯ ಯಾದವರ ಕಾಲದ ಶಾಸನಗಳಿಂದ ಕಾಣುತ್ತೇವೆ. "ಕನ್ನಡಮೆನಿಪ್ಪಾ ನಾಡು ಚೆಲ್ವಾಯ್ತು" ಎಂಬ ಆ ಪೆಂಪನ್ನು ಮರೆಯಿಸುವ ಸೊಗಸಾದ ವರ್ಣನೆಗಳನ್ನು ನೋಡಲು ಆ ಅಂಡಯ್ಯನು ಕಾಗಿನೆಲ್ಲಿಗೆ ಹೋಗಿರಬೇಕು.

(ಕಾಗಿನೆಲ್ಲಿಯ ಚಾಲುಕ್ಯ ವಿಕ್ರಮಾಂಕನ ಶಿಲಾಶಾಸನದಿಂದ)

ಸಿರಿನೆಲೆ ಗುಣದನೆಲೆ ಖಾ ।
ಸುರಕೀರ್ತಿನೆಲೆ ವಿವೇಕ ವಿಭವದ ನೆಲೆ ವಿ ॥
ಸ್ತರಿಪ ಜಯವಧುಗೆ ನೆಲೆಯೆನೆ ।
ಕರವೆಸೆಗುಂ ಕಾಗಿನೆಲೆ ಧರಿತ್ರೀತಳದೊಳ್ ॥

*　　*　　*　　*

(ಚಾಲುಕ್ಯರ ಶಾಸನದಿಂದ)

ಸರಸಿಧಿಯುಂ ಪಳಂಚಲೆವ ಪೆರ್ಗೆರೆ ಚೆಲ್ವಿಡಿದಿರ್ದನಂದನಂ ।
ಒರುಪಮುಮಾಗಿ ಕತ್ತಲಿಸುತಿಪ್ಪೆಲೆವಳ್ಳಿ ಮಡಲ್ತು ರಂಜಿಪಾ ॥

ಸುರಗಿಯನಾಗ ನಾಗಕುಸುಮಂಗಳ ಪುಷ್ಪಲತಾಗೃಹಂ ಸವಿ ।
ಸ್ತರವೆಸೆದೊಪ್ಪೆ ಕಾಗಿನೆಲೆ ಶೋಭೆಗೆ ತಾಯ್‌ನೆಲೆಯಾಗಿ ರಂಜಿಕುಂ ॥

* * * *

(ತ್ರಿಭುವನಮಲ್ಲನ ಶಿಲಾಶಾಸನದಿಂದ)

ದಳಿತಾಂಭೋಜ ಸರೋವರ ಪ್ರತತಿಯಿಂದುದ್ಯಾನ ಸಂದೋಹದಿಂ ।
ಫಳಭಾರಾನ್ವಿತ ರಮ್ಯಶಾಳಿವನದಿಂ ನೀಳಾಭ್ರ ಸು-ಂಡಸಂ ॥
ಕುಳದಿಂ ಸುತ್ತಿದ ಪೂರ್ಣವಾರಿಪರಿಖಾವಿಭ್ರಾಜಿಯಿಂ ದಿರ್ಘಿಕಾ ।
ವಳಿಯಿಂ ಕಣ್ಗೆಸೆದಿಂತು ಕಾಗಿನೆಲೆ (ವಿ)ತ್ಯಾನೀಕದಿಂದೊಪ್ಪುಗಂ ॥

* * * *

ಬಳಸಿದ ಕೋಟೆ ಶೂದ್ರನಿಕೇತನದಿಂ ಗಣಿಕಾನಿವಾಟ ಸಂ ।
ಕುಳದ ವಿಳಾಸದಿಂ ದ್ವಿಜನಿವಾಸಕದಂಬಕದಿಂ ವಣಿಗ್ಗೃಹಾ ॥
ವಳಿಯಿನುದಾತ್ತ ದೇವಭವನಂಗಳ ತಿಂತಿಣಿಯಿಂ ಶೋಭೆಯುಂ ।
ತಳೆದು ಪೊದಳ್ದು ಕಾಗಿನೆಲೆ ಸಂತತಮಿಂತೆಸೆದೊಪ್ಪಿತೋರುಗುಂ ॥

* * * *

೧೬ನೆಯ ಶತಮಾನದ ಕಾಗಿನೆಲೆಯನ್ನು ಕನಕದಾಸರ ಮೋಹನ ತರಂಗಿಣಿಯಲ್ಲಿ ಇನ್ನಿಷ್ಟು ನೋಡಬಹುದು. ಅಂದಿನ ಕಾಲದ ಕೋಟೆ ಕೊತ್ತಳ, ರಾಜಭವನ, ಉದ್ಯಾನವನ, ಕೆರೆ-ಕಾಲುವೆ, ಹಸಿರು ಗದ್ದೆ, ಹರಿಯುವ ಝುರಿ, ಅಬ್ಬರಿಸಿ ಹಾಡುವ ಹಕ್ಕಿಗಳನ್ನು ಬಣ್ಣದ ಪರದೆಯಂತೆ ಭಾಸವಾಗುತ್ತಿರುವ ಈ ನಾಡು ಮಲೆನಾಡಿನ ಗರ್ಭದಲ್ಲಿ ನೆಲೆನಿಂತು, ಕಬ್ಬಿಗರನ್ನು ಸಾಧು ಸತ್ಪುರುಷರನ್ನು ಕರೆದೊಯ್ದು ತನ್ನ ಮಡುವಿನಲ್ಲಿರಿಸಿಕೊಂಡಿದೆ.

## ಧರ್ಮ-ಸಂಸ್ಕೃತಿಗಳ ಸಂಗಮ

ಕಾಗಿನೆಲ್ಲಿಯು ಧರ್ಮಪೀಠವಾಗಿದ್ದಿತು. ಕನಕದಾಸರ ಅನುಗ್ರಹ-ತೀರ್ಥ—ಇಲ್ಲಿಯೇ ಕಾವ್ಯಶ್ರೀಯು ಗಂಗೆಯಾಗಿ ಹರಿದಿರುವಳು. ಪ್ರಾಚೀನ ಕಾಲದಿಂದಲೂ ಧಾರ್ಮಿಕ ಆಧ್ಯಾತ್ಮಿಕ ಕೇಂದ್ರವಾಗಿ ಬೆಳೆದುಬಂದಿರುವದು. ಜೈನ, ವೈಷ್ಣವ, ಶೈವ, ವೀರಶೈವ ಸಂಸ್ಕೃತಿಗಳ ಸಂಗಮವಾಗಿದೆ. ಇಲ್ಲಿ ನೆಲೆಸಿರುವ ಗುಡಿಗೋಪುರಗಳೇ ಈ ಸಂಗಮಕ್ಕೆ ಸಾಕ್ಷಿಯಾಗಿ ನಿಂತಿವೆ. ಒಟ್ಟಿಗೆ ಇಲ್ಲಿ ಹತ್ತು ಪುರಾತನ ದೇವಾಲಯಗಳುಂಟು. ಇವು ಕರ್ನಾಟಕದ ಸರ್ವ ಧರ್ಮಗಳ ಸಿದ್ಧಾಂತಗಳ ಸಾಂಕೇತಿಕಗಳಾಗಿರುವವು.

೧. ಲಕ್ಷ್ಮೀನರಸಿಂಹ, ೨. ಆದಿಕೇಶವ, ೩. ಕಾಳಹಸ್ತೇಶ್ವರ, ೪. ವೀರಭದ್ರ, ೫. ಸೋಮೇಶ್ವರ, ೬. ಬ್ರಹ್ಮೇಶ್ವರ, ೭. ಸಂಗಮೇಶ್ವರ, ೮. ಬಸವಣ್ಣ, ೯. ಆದಿಶಕ್ತಿ, ೧೦. ——

ಇವುಗಳ ಹೊರತಾಗಿ ಅನೇಕ ವಿಗ್ರಹಗಳು ಅಲ್ಲಲ್ಲಿ ದೊರಕುವದುಂಟು. ಆದಿಶಕ್ತಿಯ ಹೊರತುಪಡಿಸಿ ಉಳಿದ ದೇವಾಲಯಗಳು ೧೧ನೇ ಶತಮಾನ ದಿಂದೀಚೆಗೆ ಸ್ಥಾಪಿಸಲ್ಪಟ್ಟಿರುವುದಕ್ಕೆ ಆಧಾರಗಳಿರುತ್ತವೆ. ಶಕ್ತಿದೇವತೆ (ಆದಿಶಕ್ತಿ)ಯು ಬುನಾದಿಕಾಲದ್ದೆಂದು ತಿಳಿಯುವಂತಿದ್ದರೂ ಈ ಬಗ್ಗೆ ಯಾವ ಆಧಾರಗಳ ಸಾಕ್ಷಿಯಿರುವದಿಲ್ಲ. ಈ ಸುಂದರವಾದ ವಿಗ್ರಹವು ಒಳ್ಳೇ ಕುಶಲ ಕೆತ್ತನೆಯುಲ್ಲಿರುವದು. ಈಗ ಹಾಳು ಗುಡಿಯೊಂದರ ಮೂಲೆಯಲ್ಲಿ ಬಿದ್ದುಕೊಂಡಿರುತ್ತದೆ. ಆಗಾಗ ಕನಕದಾಸರ ಪದ್ಯಗಳಲ್ಲಿ ಸಂಬೋಧಿಸಲ್ಪಡು ತ್ತದೆ. ಇದರ ಕಾಲಮಾನವನ್ನು ಆ ಶಿಲ್ಪಕಲೆಯಿಂದಲೂ ಮತ್ತು ವಸ್ತ್ರಾಭರಣ ಗಳಿಂದಲೂ ನಿರ್ಧರಿಸಬೇಕಾಗುತ್ತದೆ.

**ಆದಿಕೇಶವ-ನರಸಿಂಹ ಮಂದಿರಗಳು.**—ಪ್ರಸ್ತುತ ಇವೇ ಈಗ ಮುಖ್ಯ ದೇವಸ್ಥಾನಗಳು. 'ನರಸಿಂಹಾದಿಕೇಶವ' ದೇವಸ್ಥಾನವೆಂದೂ ಕರೆಯಲ್ಪಡು ತ್ತದೆ. "ಶ್ರೀ ಲಕ್ಷ್ಮೀನರಸಿಂಹಾದಿಕೇಶವ ದೇವಸ್ಥಾನ"ವೆಂಬ ಹೆಸರಿನಲ್ಲಿ ಕಾಗಿನೆಲ್ಲಿಯ ಗ್ರಾಮದ ಬಳಿಯ ದಾಸನಕೊಪ್ಪವೆಂಬ ಗ್ರಾಮವು ದೇವತಾ ಕಾರ್ಯನಿಮಿತ್ತಗಳಿಗಾಗಿ ಉಂಬಳಿ ಹಾಕಿಕೊಟ್ಟಿರುತ್ತದೆ. ಇದರ ಉತ್ಪನ್ನವು ಸರಾಸರಿ ೫೦೦ ರೂಪಾಯಿಗಳಿಷ್ಟಿದೆ. ಸರ್ಕಾರದಿಂದಲೂ ಈ ಧರ್ಮಸಂಸ್ಥೆಗೆ (ಟ್ರಸ್ಟ್) ೪೯೪ ರೂಪಾಯಿಗಳನ್ನು ರಥೋತ್ಸವಕ್ಕಾಗಿ ಪ್ರತಿವರುಷ ಕೊಡಲಾಗು ವುದು. ಇದರ ಪೂಜಾರಿಗಳು ಆದಿಬಣಜಿಗರು. ಮರಡಿಯ ಮೇಲೆ ಮಣ್ಣು ಗೋಡೆಯಿಂದ ಸುತ್ತುವರಿಯಲ್ಪಟ್ಟ ಪ್ರಾಕಾರದೊಳಗೆ ಈ ಎರಡೂ ದೇವಾಲಯ ಗಳುಂಟು. ಹೆಬ್ಬಾಗಿಲು ಪ್ರವೇಶಮಾಡಿದೊಡನೆಯೇ ಎದುರಿಗೆ ಕಾಣುವ ಗುಡಿಯೇ ನರಸಿಂಹ ಮಂದಿರವು. ಸಾದಾ ಕಲ್ಲುಗಳಿಂದ ಕಟ್ಟಲ್ಪಟ್ಟಿರುತ್ತದೆ. ಗರ್ಭಗುಡಿಯ ಮೇಲೆ ಗಚ್ಚಿನ ವಿಮಾನವುಂಟು. ಮಂದಿರದೊಳಗೆ ನರಸಿಂಹನ ಮೂರ್ತಿಯುಂಟು. ಎಡಕ್ಕೆ ಲಕ್ಷ್ಮೀ ವಿಗ್ರಹ ಕೆಳಗಡೆಗೆ ನರಸಿಂಹನ ಉತ್ಸವ (ಹಿತ್ತಾಳೆಯ) ಮೂರ್ತಿಯುಂಟು. ಈ ನರಸಿಂಹನ ಗುಡಿಯ ಎಡಪಕ್ಕದಲ್ಲಿ ೧೦ ಫೂಟುಗಳ ಅಂತರದಲ್ಲಿರುವ ದೇವಾಲಯುವೇ ಆದಿಕೇಶವನದು; ಉದ್ದಗಲ ೬೬×೨೩ ಫೂಟುಗಳು. ಈ ಗುಡಿಯ ಮುಂದಣ ಭಾಗವು ಭಕ್ತಾದಿಗಳ ಸಡಿಚ್ಛೆಯ ಮೇರೆಗೆ ಬದಲಾಗುತ್ತಲೇ ಬಂದಿರುವದು. ಮುಕ್ತದ್ವಾರದ ಮುಂಭಾಗವು ಹೊಡೆದ ಕಲ್ಲಿನಿಂದ ಕಟ್ಟಲ್ಪಟ್ಟಿರುತ್ತದೆ. ಆದರೆ ಪ್ರಾಚೀನ ದೇವಾಲಯಗಳನ್ನು ಕೊಂಡಪ್ಪ ವೆಂಕಪ್ಪನೆಂಬುವರು ಕಟ್ಟಿಸಿರುವದಾಗಿ ಐತಿಹ್ಯವಿರುತ್ತದೆ. ೧೬ ನೇ ಶತಮಾನದಲ್ಲಿ ಕನಕದಾಸರೇ ಆದಿಕೇಶವನ ಮೂರ್ತಿಯನ್ನು ಬಾಡ ಗ್ರಾಮ ದಿಂದಲೇ ತಂದು ಸ್ಥಾಪಿಸಿ ಜೀರ್ಣೋದ್ಧಾರ ಮಾಡಿದರೆಂದು ತಿಳಿಯುತ್ತದೆ. ಈ ಆದಿಕೇಶವನ ಮೂರ್ತಿಯು ಸಿಲುಪಿಕೆಯಲ್ಲಿ ೧೪ ಫೂಟ ಎತ್ತರವಾಗಿರುತ್ತದೆ. ಅದೇ ಕಲ್ಲಿನಲ್ಲಿ ಆದಿಕೇಶವನ ವಿಗ್ರಹವೂ ಎಡಬಲದಲ್ಲಿ ಲಕ್ಷ್ಮೀ-ಗರುಡರ ಚಿಕ್ಕ

ವಿಗ್ರಹಗಳು ಇರುವವು. ಈ ನರಸಿಂಹ ಮತ್ತು ಆದಿಕೇಶವನ ಗುಡಿಗಳ ಮಧ್ಯದಲ್ಲಿ ನಡುವೆ ಒಂದು ರಂಗಮಂಟಪವುಂಟು. ಉತ್ಸವದ ದಿನಗಳಲ್ಲಿ ಉತ್ಸವದ ಮೂರ್ತಿಗಳನ್ನಿಟ್ಟು ಮಂಗಳಾರತಿ ಮಾಡುವ ರೂಢಿಯನ್ನಿಟ್ಟುಕೊಂಡಿರುತ್ತಾರೆ. ವೈಶಾಖ ಮಾಸದಲ್ಲಿ ರಥೋತ್ಸವ; ಕಾರ್ತಿಕದಲ್ಲಿ ತೆಪ್ಪೋತ್ಸವ; ನವರಾತ್ರಿಯಲ್ಲಿ ಬನ್ನೀಪೂಜೆ ಹೀಗೆ ಜರಗುವವು. ಈ ಪ್ರಾಕಾರದಲ್ಲಿಯೇ ಆದಿಕೇಶವನ ಗುಡಿಯ ಮುಂಭಾಗದಲ್ಲಿ ಬಂಢಾರಗಿರಿ ಸ್ವಾಮಿಗಳ ಗದ್ದುಗೆಯುಂಟು. ಒಳ್ಳೇ ಶಿಲ್ಪ ಕಲಾಕೃತಿಯ ಸುಳುವಿನ ಕಂಬಗಳುಂಟು. ಈ ಕಂಬಗಳಲ್ಲಿ ಲಿಪಿಗಳಿರುವವು. ಜೈನ ಕಾಲದ ಅಗ್ರಹಾರ ಸಂಬಂಧಗಳನ್ನು ವ್ಯಕ್ತಪಡಿಸುವವು. ಈ ಗುಡಿಗಳ ಅಂಗಳ ನಡುವೆ ಒಂದು ಚೌಕ ಕಟ್ಟೆಯುಂಟು. ಕಟ್ಟೆಯ ಮಧ್ಯದಲ್ಲಿ ಒಂದು ಸಮಾಧಿಯ ವಿಗ್ರಹವಿರುವದು; ಒಂದು ಬೇವಿನ ಮರವು ಬೆಳೆದು ನಿಂತಿರುವದು. ಇದಕ್ಕೆ ಪ್ರವಚನಕಟ್ಟೆಯೆಂದೂ, ಕನಕದಾಸರು ಈ ಕಟ್ಟೆಯ ಮೇಲೆ ಕುಳಿತು ಕೀರ್ತನೆ ಪ್ರವಚನ ಹೇಳುತ್ತಿದ್ದರೆಂದೂ ತಿಳಿಯುತ್ತದೆ.

ಈ ದೇವಾಲಯದಿಂದ ಕೆರೆಗೆ ಹೋಗುವದಕ್ಕಾಗಿ ದಾರಿಯುಂಟು. ಇಕ್ಕೆಲದಲ್ಲಿ ಪ್ರಾಚೀನ ಅವಶೇಷಗಳು ಕಂಡುಬರುವವು. ಇಲ್ಲಿಯೇ ಕಾಳಹಸ್ತೇಶ್ವರ, ವೀರಭದ್ರ, ಸೋಮೇಶ್ವರ, ಬೆಟ್ಟೇಶ್ವರ, ಸಂಗಮನಾಥ ದೇವಾಲಯಗಳು ಆ ಪ್ರಾಚೀನತೆಯನ್ನು ವ್ಯಕ್ತಪಡಿಸುವವು. ವೀರಭದ್ರದೇವರ ಗುಡಿಯು— ಚಾಲುಕ್ಯರ ಕಾಲದ ದತ್ತಿ-ದಾನಗಳ ಶಾಸನಪತ್ರವನ್ನು ಪೂರೈಸುತ್ತದೆ. ವೀರಭದ್ರನ ವಿಗ್ರಹವು ಗಂಭೀರವಾಗಿರುತ್ತದೆ. ಗರ್ಭಗುಡಿಯ ದ್ವಾರಗಳ ಮೇಲೆ ಚಾಲುಕ್ಯ ಕಾಲದ ಶಿಲ್ಪಕಲೆಯನ್ನು ವ್ಯಕ್ತಪಡಿಸುವ ಸುಂದರವಾದ ಖಗ-ಮೃಗಗಳು ಕೆತ್ತಲ್ಪಟ್ಟಿರುವವು. ಎದುರಿನಲ್ಲಿ ಒಂದು ದೀಪಸ್ತಂಭವುಂಟು. ಅದರಲ್ಲಿ ಲಿಪಿಗಳಿರುವವು. ಸಮೀಪದಲ್ಲಿ ಒಂದು ವೀರಗಲ್ಲುಂಟು. ಕಾಗಿನೆಲ್ಲಿಯ ಒಬ್ಬ ದಂಡನಾಯಕನು ಕಳಚೂರಿ-ಯಾದವರ ನಡುವಿನ ಯುದ್ಧದಲ್ಲಿ ವೈರಿಗಳನ್ನು ಎದುರಿಸಿ ವೀರಸ್ವರ್ಗವನ್ನು ಹೊಂದಿದ ಸಾರಕವನ್ನು ನೆನಪಿಗೆ ತರುತ್ತದೆ. ಈ ಕುರಿತಾಗಿ ಒಂದು ಶಾಸನವುಂಟು. ಕಾಳಹಸ್ತೇಶ್ವರ ಮತ್ತು ಸೋಮೇಶ್ವರ ಮಂದಿರಗಳು ಖಿಲವಾಗುತ್ತ ನಡೆದಿರುವವು, ಸಂರಕ್ಷಣೆಗಳಿಲ್ಲ; ಮುಂಭಾಗದ ಕಂಬಗಳಲ್ಲಿ ಚಾಲುಕ್ಯ ಶಿಲ್ಪಕಲೆಯನ್ನು ವೈಭವದಿಂದ ಕಾಣುತ್ತೇವೆ. ಸಮೀಪದಲ್ಲಿ ಬ್ರಹ್ಮದೇವರ ಗುಡಿಯುಂಟು. ಇದಕ್ಕೆ ಮುಸುಕಿನ ಗುಡಿಯೆಂದು ಕರೆಯುತ್ತಾರೆ. ಕಾಗಿನೆಲೆಯ ಕಾಳಿಶೆಟ್ಟಿಯೆಂಬ ಗೌಡನು ಕಟ್ಟಿಸಿದನೆಂದು ಇಲ್ಲಿಯ ಲಿಪಿಯೊಂದರಿಂದ ತಿಳಿಯುತ್ತದೆ.

**ಸಂಗಮನಾಥ ಮಂದಿರ.—** ಕಲ್ಯಾಣದಿಂದ ಹೊರಹೊರಟ ಶರಣರ ಗುಂಪೊಂದು ಈ ಸ್ಥಳದ ಮೇಲ್ಮೆ ಪ್ರಭಾವಗಳಿಂದ ಆಕರ್ಷಿಸಲ್ಪಟ್ಟಿರುತ್ತದೆ. ಈ ಮಂದಿರವು ಕನಕದಾಸರ ಗದ್ದುಗೆಗೆ ಹೋಗುವ ದಾರಿಯ ಮೇಲುಂಟು.

ಈ ದೇವಾಲಯದ ಮುಂಭಾಗದಲ್ಲಿ ಒಂದು ಶಾಸನವಿರುವದು. ವಿಜಯನಗರದ ೨ ನೇ ಹರಿಹರರಾಯನು ಜೀರ್ಣೋದ್ಧಾರಕ್ಕಾಗಿ ದಾನಪತ್ರ ಕೊಟ್ಟಿರುವನು. ಈ ಮಂದಿರವು ೧೨ನೇ ಶತಮಾನಕ್ಕೆ ಸೇರಿರುತ್ತದೆ. ಈ ದೇವಾಲಯದಲ್ಲಿ ಜರಗುವ ಸಾಂಪ್ರದಾಯಗಳಿಂದ ಕೆಲವು ಕುತೂಹಲ ಸಂಗತಿಗಳು ಬೆಳಕಿಗೆ ಬಂದಿರುತ್ತವೆ. ಇದೊಂದು ಪ್ರಮುಖ ಶರಣನೊಬ್ಬನ ಸಮಾಧಿಯು; ಭಕ್ತಿ ಭಂಡಾರಿ ಬಸವಣ್ಣ ನವರ ಖಾಸ ವಿಶ್ವಾಸಕ್ಕೆ ಪಾತ್ರನಾಗಿದ್ದವನಿರಬೇಕೆಂದು ತಿಳಿಯುವದು. ಅಂತೆಯೇ ಇದಕ್ಕೆ ಪ್ರತಿ ಬಸವಣ್ಣನ ಗದ್ದುಗೆಯೆಂದು ಸಂಬೋಧಿಸಲ್ಪಡುತ್ತದೆ. ಈ ಗದ್ದುಗೆಗೆ ರಾಯಚೂರ ಜಿಲ್ಲೆಯ ಕಪ್ಪಡಿ ಸಂಗಮಕ್ಕೆ ಸಮೀಪದ ಕೋಡಿಹಾಳ ಗ್ರಾಮದ ಭಕ್ತಸಮೂಹವು ಶಿವರಾತ್ರಿಗೆ ಇಲ್ಲಿಗೆ ಶ್ರದ್ಧಾಂಜಲಿ ಅರ್ಪಿಸಲು ಬರುವರು. ಭಕ್ತಪೂಜೆ ಸಲ್ಲಿಸುವಾಗ ಆಚರಿಸುವ ಸಾಂಪ್ರದಾಯಗಳಿಂದ ಶರಣರ ಕೆಲವು ಐತಿಹಾಸಿಕ ಸಂಗತಿಗಳು ಸಾಧಾರವಾಗಿ ವ್ಯಕ್ತಪಡುವವು. ಬಸವಣ್ಣನವರು ಕಪ್ಪಡಿ ಸಂಗಮದಲ್ಲಿ ಐಕ್ಯವಾಗುವ ಮುಂಚೆ ಕೆಲವು ದಿನ ಕೋಡಿಹಾಳದ ಹಿರೇಮಠ(ಮಾಲಿನ ಮಠ)ದಲ್ಲಿ ಉಳಿದಿದ್ದರು. ಆಗ ಈ ಗದ್ದುಗೆಯಾಗಿ ಪೂಜಿಸಲ್ಪಡುವ ಶಿವಶರಣನು ಅವರ ಜೊತೆಯಲ್ಲಿದ್ದ ಶಿವಶರಣನೇ ಇವನಿದ್ದಿರ ಬೇಕೆಂದು ತಿಳಿಯುತ್ತದೆ. ಈ ಶರಣನ ಶಿಷ್ಯರು ಕಲ್ಯಾಣದ ಸುತ್ತಲಿನಿಂದಲೂ ಬರುವರು. ಕಲ್ಯಾಣದ ಕ್ರಾಂತಿಯ ನಂತರ ಚೆನ್ನಬಸವನ ನಾಯಕತ್ವದಲ್ಲಿ ಒಂದು ದೊಡ್ಡ ಶರಣರ ಗುಂಪು ಧಾರವಾಡದಿಂದ ಉಳವೆಗೆ ಸಾಗಿತು. ಇನ್ನೊಂದು ಚಿಕ್ಕ ಶಾಖೆಯು ಹುಬ್ಬಳ್ಳಿ-ಬುಧರ ಆರಳಿಕಟ್ಟಿ-ಶಿಶುನಾಳಗಳ ಮೇಲಿಂದ ಕಾಗಿನೆಲ್ಲಿಗೆ ಬಂದಿತು. ಇಲ್ಲಿ ವಿಶೇಷ ಆಶ್ರಯ ಸಿಕ್ಕಂತೆ ತೋರುತ್ತದೆ. ಆ ಕಾಲಕ್ಕೆ ಕಾಗಿನೆಲ್ಲಿಯ ಹಿರೇಮಠ ಸ್ವಾಮಿಗಳು ಪ್ರಮುಖ ಪಾತ್ರ ವಹಿಸಿದಂತೆ ಕಾಣುತ್ತದೆ. ಇವರ ಸಂರಕ್ಷಣೆಯಲ್ಲಿ ಚಟುವಟಿಕೆಗಳು ಸಾಗಿರುತ್ತವೆ. ಕೆಲವು ಶಿವಶರಣರು ಕಾಗಿನೆಲ್ಲಿಯಿಂದಾಚೆಗೆ ಹಿರೇಕೆರೂರು, ರಟ್ಟಿಹಳ್ಳಿ, ಗೆಜ್ಜಿಹಳ್ಳಿಗಳತ್ತ ಹೋಗಿ ನೆಲಸಿರುವದು ಗೊತ್ತಾಗುತ್ತದೆ. ಈ ಎಲ್ಲ ಕಡೆಗಳಲ್ಲಿ ಈ ಶಿವಶರಣರ ಸಮಾಧಿ ದೊರೆಯುವವು. ಈ ದಿಶೆಯಲ್ಲಿ ಇನ್ನೂ ಸಂಶೋಧನೆಯಾಗಬೇಕು.

ಕಾಲಕ್ರಮೇಣ ಕಾಗಿನೆಲ್ಲಿಯು ಬಿಜಾಪುರದ ಸುಲ್ತಾನರ ಆಳಿಕೆಗೆ ಹಸ್ತಾಂತರವಾಯಿತು. ಈ ದೇವಾಲಯದ ಆಡಳಿತೆಯು ಮುಸಲ್ಮಾನ ಸಮಾಜದ ಕೈಗೆ ಹೋಗಿರುತ್ತದೆ. ಈಗಲೂ ಈ ಸಂಗಮ ದೇವಾಲಯದ ಗದ್ದುಗೆಯ ಪೂಜೆಯು ಮುಸಲ್ಮಾನರಿಂದಲೇ ಜರಗುತ್ತದೆ. ಕರ್ನಾಟಕದಲ್ಲಿ ಅಲ್ಲಲ್ಲಿ ವೀರಶೈವ ಮತ್ತು ಸೂಫಿ ಪಂಥದ ಧಾರ್ಮಿಕಸಮನ್ವಯ ಚಟುವಟಿಕೆಗಳನ್ನು ಆಚರಿಸುತ್ತಿರು ವದನ್ನು ನೋಡುತ್ತಿರುವೆವು. ಕಾಗಿನೆಲ್ಲಿಯ ಸಮೀಪದಲ್ಲಿಯೇ ಶಿರಹಟ್ಟಿ ಫಕೀರ ಸ್ವಾಮಿಗಳ ಮಠವೇ ಇದಕ್ಕೆ ಸಾಕ್ಷಿ, ಅದೇ ತರಹದ ಲಿಂಗಾಯತ-ಮುಸಲ್ಮಾನ ಸಮಾಜದ ಸಂಗಮ ಮಠ ಪೂಜೆಯು ಇಲ್ಲಿ ಈಗಲೂ ನಡೆಯುತ್ತಿರುವದು.

**ಕನಕದಾಸರ ಗದ್ದುಗೆ.**—ಈ ಹಾಳು ಬಯಲಿನ ಕೊನೆಯ ತುದಿಯಲ್ಲಿ ಕೆರೆಯ ದಂಡೆಯ ಮೇಲೆ ಅಶ್ವತ್ಥ (ಅರಳಿ) ಮರದ ಅಡಿಯಲ್ಲಿ ಗಿಡಗಂಟಿಗಳ ಪೊದೆಯಲ್ಲಿ ದುರ್ಲಕ್ಷಿಸಲ್ಪಟ್ಟಿರುವ ಹಳೇ ಸಾಂಪ್ರದಾಯದ ಸಮಾಧಿಯೇ ಈ ಪವಾಡಪುರುಷ ಕನಕದಾಸರ ಗದ್ದುಗೆಯು; ಗಚ್ಚಿನಿಂದ ಕಟ್ಟಲ್ಪಟ್ಟಿರುತ್ತದೆ. ಶಿಥಿಲಾವಸ್ಥೆಯಲ್ಲಿರುವದು. ಕಲ್ಲುಗಳು ಉದುರಿಹೋಗಿರುವವು; ಭಗ್ನಾವಸ್ಥೆಯಲ್ಲಿದೆ. ಈ ಸಮಾಧಿಯು ಆರಡಿ ಎತ್ತರ, ನಾಲ್ಕು ಅಡಿ ಅಗಲಾಗಿರುತ್ತದೆ. ಸಾಂಪ್ರದಾಯ ರೀತಿಯಲ್ಲಿ ಕಟ್ಟಲ್ಪಟ್ಟಿರುತ್ತದೆ. ಈಗ ಕನಕದಾಸರ ನಾಲ್ಕನೆಯ ಶತಮಾನೋತ್ಸವ ಸಮಿತಿಯವರು ಇದರ ಜೀರ್ಣೋದ್ಧಾರ ಕಾರ್ಯವನ್ನೂ ಕೈಕೊಂಡಿರುವರು; ಇದರಿಂದ ಹಳೇ ವಿಗ್ರಹದ ರೂಪು ವಿಶೇಷ ಬದಲಾವಣೆಯಾಗುವ ಸಂಭವವುಂಟು. ಈ ವಿಶಾಲ ಹಾಳು ಬಯಲು ಹೊಸ ಸ್ವರೂಪ ತಳೆಯುತ್ತಿರುವದೂ ಒಂದು ಪವಾಡವೆಂದೇ ಹೇಳಬಹುದು. **ಯೋಧ-ರಸಋಷಿ-ಮಹರ್ಷಿಯಾಗಿ ಎರಕಗೊಂಡ-ಕನಕದಾಸರು ಶಾಶ್ವತವಾಗಿ ಚಿದಾನಂದದಲ್ಲಿ ಇಲ್ಲಿ ಮಲಗಿಕೊಂಡಿದ್ದಾರೆ.** ಅವರ ಪಾರ್ಥಿವಶರೀರವು ಗಚ್ಚಿನ ಗೋಡೆಯಲ್ಲಿ ಮುಚ್ಚಿರುವದು; ಆದರೆ ಚೈತನ್ಯಯುತವಾಗಿರುವ ದಿವ್ಯಶಕ್ತಿಯು ದೇದೀಪ್ಯಮಾನವಾಗಿ ನಿಗಿನಿಗಿ ಕೆಂಡದಂತೆ ಪ್ರಜ್ವಲಿಸುತ್ತಿರುವದು. ಇದೊಂದು ಸ್ಥಾವರ ಗದ್ದುಗೆಯಾಗಿರದೆ ಮಾನವಕುಲಕ್ಕೆ ಅಖಂಡವಾದ ಸಂದೇಶ ಬೀರುವ ದಾರಿದೀಪವಾಗಿರುತ್ತದೆ.

**ಕಾಗಿನೆಲ್ಲಿ—ಸುತ್ತುಮುತ್ತು.**—ಇಲ್ಲಿಯ ಇನ್ನೊಂದು ಐತಿಹಾಸಿಕ ಪ್ರಸಿದ್ಧ ಸ್ಥಳವೆಂದರೆ ಕಾಗಿನೆಲ್ಲಿಯ ಹಿರೇಮಠ; ವೀರಶೈವ ಧರ್ಮ-ಸಂಸ್ಕೃತಿಗಳ ಆಂದೋಲನದಲ್ಲಿ ೧೪ ನೇ ಶತಮಾನದಲ್ಲಿ ವಿಶೇಷ ಪಾತ್ರವಹಿಸಿರುತ್ತದೆ. ಈ ಮಠದ ಜೀರ್ಣೋದ್ಧಾರ ಕಾರ್ಯಗಳು ಮಠದ ಒಡೆಯರಿಂದ ನಡೆದಿರುವವು. ಕಾಗಿನೆಲ್ಲಿಯ ಸುತ್ತುಮುತ್ತಲೂ ೧೬ ನೇ ಶತಮಾನದಲ್ಲಿ ಭಾಗವತ ಚಟುವಟಿಕೆಗಳು ನಡೆದಿರುವದು ತಿಳಿಯುತ್ತದೆ. ಆದಿಕೇಶವನ ಭಕ್ತಾದಿಗಳು ತಿರುಪತಿ ಮತ್ತು ಬೇರೆ ಕಡೆಗಳಿಂದ ಆದಿಕೇಶವನ ತತ್ಸಮ ವಿಗ್ರಹಗಳನ್ನು ಸ್ಥಾಪಿಸಿದಂತೆ ತೋರುತ್ತದೆ. ಈ ಗ್ರಾಮದಿಂದ ಅರ್ಧ ಮೈಲಿಯ ಅಂತರದಲ್ಲಿರುವ ಮರಡಿಯ ಮೇಲೆ ಚೆನ್ನಕೇಶವ, ತಿಮ್ಮಕೇಶವ ವಿಗ್ರಹಗಳನ್ನು ತಂದು ಸಾ ಪಿಸಿರುವರು. ಆದಿಕೇಶವನ ಜೊತೆಗೊಂಡು ಈ ವಿಗ್ರಹಗಳ ಪೂಜಾದಿಗಳು ಈಗಲೂ ನಡೆಯುತ್ತಲಿವೆ. ಈಗಲೂ ಬನ್ನೀಪೂಜೆಯ ಉತ್ಸವದಲ್ಲಿ ಕಾಗಿನೆಲ್ಲಿಯಿಂದ ಇಲ್ಲಿಗೂ ಪಲ್ಲಕ್ಕಿ ಸೇವೆಯು ಬರುವ ರೂಢಿಯಿರುತ್ತದೆ.

**ಮರೆತುಹೋದ ಕ್ಷೇತ್ರ.**—ಒಟ್ಟಿಗೆ ಕಾಗಿನೆಲ್ಲಿಯು ಮರೆತುಹೋದ ಕ್ಷೇತ್ರ. ೯ ನೇ ಶತಮಾನದಿಂದ ೧೬ ನೇ ಶತಮಾನದ ತನಕ ಒಳ್ಳೇ ಭರಾಟೆಯಲ್ಲಿದ್ದಿತು. ಧಾರ್ಮಿಕ-ಸಾಮಾಜಿಕ-ಸಾಂಸ್ಕೃತಿಕ ರಂಗಗಳಲ್ಲಿ ಪ್ರಮುಖವಾಗಿತ್ತು.

ಮುಂದೆ ಕಾಗಿನೆಲ್ಲಿ ಮತ್ತು ಸುತ್ತಣ ನಾಡು ಮುಸಲ್ಮಾನ ಅರಸರ ಕೈವಶವಾದ ನಂತರ ಈ ಚಟುವಟಿಕೆಗಳು ನಿಂತು, ಖಿಲವಾಗುತ್ತ ಹೇಳಹೆಸರಿಲ್ಲದಂತಾಯಿತು. ಸ್ಥೂಲವಾದ ಕಾಗಿನೆಲ್ಲಿಯು ಮರೆತುಹೋದ ಗ್ರಾಮವಾಗಿರಬಹುದು; ಆದರೆ ಲೀಲಾಪುರುಷನಾದ ಕನಕದಾಸರ ದೇವೀ ಪ್ರಭಾವದಿಂದ ಸಾಹಿತ ಪ್ರಪಂಚವಲ್ಲಿ, ಧಾರ್ಮಿಕ ಸೃಷ್ಟಿಯಲ್ಲಿ ಅಮರವಾಗಿ ಉಳಿದಿರುತ್ತದೆ. ಕಾಲಪುರುಷನ ಚಕ್ರದಲ್ಲಿ ಸ್ಥೂಲಕ್ಕೆ ಅಳಿವುಂಟಾಗಬಹುದು ಮಾತ್ರ ನೆಲದ ಆತ್ಮಬಲ ಮತ್ತು ಸೂಕ್ಷ್ಮ ಸುಷುಪ್ತ ಶಕ್ತಿಗಳು ಬತ್ತಲಾರವು. ಭಗವದ್ಭಕ್ತರಿಗೆ–ಸಾಹಿತಿಗಳಿಗೆ–ಕವಿಗಳಿಗೆ–ದಾರ್ಶನಿಕರಿಗೆ ಇದು ಒಂದು ಚೈತನ್ಯಕ್ಷೇತ್ರವಾಗಿ ಮಾನವಕುಲದ ದಾರಿದೀಪವಾಗಿರುತ್ತದೆ.

**ಬಾಡ.**—ಇದು ಕನಕದಾಸರ ಜನ್ಮಸ್ಥಳ. ಕನಕದಾಸರು ತಿಮ್ಮನಾಗಿ. ಬೀರಪ್ಪ–ಬಚ್ಚಮ್ಮ ಇವರ ಉದರದಿಂದ ಇಲ್ಲಿ ಜನ್ಮತಾಳಿದರು. ಬಾಡಗ್ರಾಮವು ಬಂಕಾಪುರದಿಂದ ಒಂದು ಹರದಾರಿ ಅಂತರದಲ್ಲಿರುತ್ತದೆ. 'ಬಾಡದಾದಿ ಕೇಶವ'ನೆಂದು ಕನಕದಾಸರು ಒಳ್ಳೇ ಹೆಮ್ಮೆಯಿಂದ ಹುಟ್ಟಿದೂರನ್ನು ಹೊಗಳಿದ್ದಾರೆ. ಈ ಗ್ರಾಮದಲ್ಲಿ ವಿಶೇಷ ಐತಿಹಾಸಿಕ ಅವಶೇಷಗಳೇನೂ ಇರುವದಿಲ್ಲ, ಆದರೆ ರಂಗನ ಬಯಲು ಎಂಬ ಹಾಳು ಮರಡಿಯುಂಟು. ಕನಕದಾಸರು ಆದಿಕೇಶವನ ವಿಗ್ರಹವನ್ನು ಬಾಡದಿಂದಲೇ ಒಯ್ದು ಕಾಗಿನೆಲ್ಲಿಯಲ್ಲಿ ಸ್ಥಾಪಿಸಿರುವರು.

# ಕನಕದಾಸರ ಸಮಕಾಲೀನರು

**ಶ್ರೀ ವಿದ್ಯಾರತ್ನಂ ಆರ್. ಎಸ್. ಪಂಚಮುಖಿ, ಎಂ.ಎ., ಧಾರವಾಡ**

ಶ್ರೀ ನರಹರಿತೀರ್ಥರಿಂದ ಆರಂಭವಾದ ಹರಿದಾಸಕೂಟವು ಶ್ರೀಪಾದರಾಯರಿಂದ ಅಂಕುರಿಸಿ ವಿಜಯನಗರದ ಕೃಷ್ಣದೇವರಾಯನ ಕಾಲದಲ್ಲಿ ಶ್ರೀ ವ್ಯಾಸತೀರ್ಥರ ಅಧಿಷ್ಠಾನದಲ್ಲಿ ಪುರಂದರದಾಸರಿಂದ ಟಿಸಿಲೊಡೆದು ಬೆಳೆಯಿತು; ವಿಜಯದಾಸ–ಜಗನ್ನಾಥದಾಸ ಮೊದಲಾದ ದಾಸಾಗ್ರಣಿಗಳ ಭಕ್ತಿ–ತತ್ವಜ್ಞಾನದ ತೊಡಿಗೆಗಳಿಂದ ಪ್ರಫುಲ್ಲವಾಗಿ ಕಂಗೊಳಿಸಿತು. ಹರಿದಾಸರು ವಿಷಯೋನ್ಮುಖರಾಗಿ ಚಾರ್ವಾಕವಾದದಲ್ಲಿ ಆದರವುಳ್ಳ ಜನರನ್ನು ಅಂತರ್ಮುಖರನ್ನಾಗಿ ಮಾಡಿ ಆನಂದಾನುಭವದ ಸಾಧನಗಳನ್ನು ಅಧಿಕಾರೀ ಜೀವರಿಗೆ ತೋರಿಸಿಕೊಟ್ಟು ಜಗತ್ತಿಗೆ ಮಹೋಪಕಾರವನ್ನು ಮಾಡಿದ್ದಾರೆ. ಇಂಥ ಹರಿದಾಸರ ಮಾಲಿಕೆಯಲ್ಲಿ ಕನಕದಾಸರು ಮೇಲುಪಂಕ್ತಿಯಲ್ಲಿ ಗಣಿಸಲ್ಪಟ್ಟಿದ್ದಾರೆ. ಅವರು ಬಾಳಿದ ಕಾಲವೂ ಬಳಸಿದ ಸಂಗತಿಯೂ ದಾಸಕೂಟದ ಉನ್ನತಿಗೆ ಕಾರಣವಾಗಿವೆ; ಜನತೆಯ ಉದ್ಧಾರವನ್ನು ಸಾಧಿಸಿವೆ.

ಕನಕದಾಸರ ಜನ್ಮತಿಥಿ, ನಿರ್ಯಾಣದ ದಿನಗಳು ನಿಷ್ಕೃಷ್ಟವಾಗಿ ತಿಳಿದಿಲ್ಲವಾದರೂ ಅವರು ಕ್ರಿ ಶ. ೧೬ ನೆಯ ಶತಮಾನದಲ್ಲಿ ಬಾಳಿದ್ದರೆಂದು ಅವರ ಕೃತಿಗಳಿಂದಲೂ ಸಮಸಾಮಯಿಕ ಪ್ರಮಾಣಗಳಿಂದಲೂ ಐತಿಹ್ಯಗಳಿಂದಲೂ ಸಿದ್ಧವಾಗುತ್ತದೆ. ಇವರ ಜೊತೆಗಾರರಾಗಿ ಭಕ್ತಿಮಾರ್ಗವನ್ನು ಉಪದೇಶಿಸಿದ ತತ್ಕಾಲದ ಮಹನೀಯರು ಕರ್ನಾಟಕದ ಸಾಂಸ್ಕೃತಿಕ ಇತಿಹಾಸದಲ್ಲಿ ಉಚ್ಚಸ್ಥಾನವನ್ನು ಗಳಿಸಿದ್ದಾರೆ. ಅವರಲ್ಲಿ ಮುಖ್ಯರಾದವರು (೧) ಶ್ರೀವ್ಯಾಸತೀರ್ಥರು, (೨) ಶ್ರೀ ವಾದಿರಾಜತೀರ್ಥರು, (೩) ಶ್ರೀ ಪುರಂದರದಾಸರು, (೪) ಕುಮಾರವ್ಯಾಸನೆಂದು ಪ್ರಸಿದ್ಧನಾದ ಮಹಾಭಾರತ ಕರ್ತೃವಾದ ಗದುಗಿನ ನಾರಾಯಣಪ್ಪನು, ಅಲ್ಲದೆ (೫) ರಾಮಾನುಜೀಯರಾದ ಶ್ರೀ ತಾತಾಚಾರ್ಯರು ಮತ್ತು (೬) ಶ್ರೀ ವೈಕುಂಠದಾಸರು. ವಿಜಯನಗರದ ಸಮ್ರಾಟನಾದ ಕೃಷ್ಣದೇವರಾಯನೂ ಅಚ್ಯುತರಾಯನೂ ಕನಕದಾಸರ ಸಮಕಾಲೀನರಾದ ರಾಜರು. ಶ್ರೀ ಕೃಷ್ಣಚರಿತೆಯಾದ ಮೋಹನತರಂಗಿಣಿಯಲ್ಲಿ ಶ್ರೀಕೃಷ್ಣನ ಹೆಸರನ್ನು ಹೇಳುವ ಪ್ರಸಂಗ ಬಂದಾಗೆಲ್ಲ 'ಕೃಷ್ಣರಾಯ', 'ದೇಶಾಧಿಪ ಕೃಷ್ಣರಾಯ' 'ದೊರೆರಾಯ ಶ್ರೀಕೃಷ್ಣ' ಎಂದೂ, ಕಾವ್ಯನಾಯಕನನ್ನು ಕುರಿತು ಬರೆಯುವಾಗ 'ಅಚ್ಯುತ' ಎಂದೂ ನಿರ್ದೇಶಿಸಿರುವುದರಿಂದ ಈ ರಾಜರು ಕನಕದಾಸರ ಕಾಲದಲ್ಲಿ ಇದ್ದರೆಂದು ಸ್ಪಷ್ಟವಾಗುತ್ತದೆ. ಅದಲ್ಲದೆ ಕನಕದಾಸರು ವರ್ಣಿಸಿದ ರಾಜಧಾನಿ ಮತ್ತು ಅರಮನೆಗಳ ವರ್ಣನೆಗಳು ಅವರ ಕಾಲದ ವಿಜಯನಗರ ಮತ್ತು

ರಾಜಧಾನಿ ಹಂಪೆಯ ತಾತ್ಕಾಲಿಕ ಪರಿಸ್ಥಿತಿಗಳನ್ನು ಚಿತ್ರಿಸುತ್ತವೆ ಎಂದು ಪರದೇಶದ ಪ್ರಯಾಣಿಕರು ವಿಜಯನಗರದ ಸಂಪತ್ತನ್ನೂ ಜನರ ಕಲಾಭಿರುಚಿಯನ್ನೂ ಕುರಿತು ಬರೆದಿಟ್ಟ ವರದಿಗಳಿಂದ ಊಹಿಸುವಂತಿದೆ. ಅಂತು ಕನಕದಾಸರು ಬಾಳಿದ ಕಾಲವು ಭಾರತದೇಶದ ಆಧ್ಯಾತ್ಮ ಚರಿತ್ರೆಯಲ್ಲಿ ಉನ್ನತ ಕೃತಿಗಳಿಂದ ಕರ್ಣಾಟಕದ ಕೀರ್ತಿಯನ್ನು ಬೆಳಗಿದ ಕಾಲವು. ಇದಕ್ಕೆ ಕಾರಣರಾದ ಆ ಮಹಾಪುರುಷರನ್ನು ಕುರಿತು ಇಲ್ಲಿ ಸಂಕ್ಷೇಪವಾಗಿ ವಿವರಿಸುವೆವು.

ಕೃಷ್ಣದೇವರಾಯನು ಕ್ರಿ.ಶ. ೧೫೦೯ ರಲ್ಲಿ ವಿಜಯನಗರದ ಸಿಂಹಾಸನವನ್ನೇರಿ ಕ್ರಿ.ಶ. ೧೫೩೦ ರಲ್ಲಿ ತನ್ನ ಆಳಿಕೆಯನ್ನು ಮುಗಿಸಿ ಸ್ವರ್ಗಸ್ಥನಾದನು. ಈ ಇಪ್ಪತ್ತು ವರ್ಷಗಳ ಅವಧಿಯಲ್ಲಿ ಆಂಧ್ರ–ದ್ರಾವಿಡ ದೇಶಗಳಲ್ಲಿ ದಿಗ್ವಿಜಯವನ್ನು ಮಾಡಿ ಅಪ್ರತಿಹತ ಪರಾಕ್ರಮಿಯಾಗಿ ಕರ್ಣಾಟಕದ ರಾಜಕೀಯ ಸತ್ತೆಯನ್ನು ಪ್ರತಿಷ್ಠೆಗೊಳಿಸಿದನಲ್ಲದೆ ಧರ್ಮ, ತತ್ವಜ್ಞಾನ, ವಾಙ್ಮಯ, ಕಲಾಕೃತಿಗಳಲ್ಲಿ ಅಸಪೃಶವಾದ ಪ್ರಗತಿಯನ್ನು ಸಾಧಿಸಿದನೆಂದು ಅವನ ಚರಿತ್ರ ವಿಮರ್ಶೆಯಿಂದ ಗೊತ್ತಾಗುತ್ತದೆ. ತಾತಾಚಾರ್ಯರೂ ವ್ಯಾಸತೀರ್ಥರೂ ಇವನಿಗೆ ರಾಜಗುರುಗಳಾಗಿದ್ದರು. ಕೃಷ್ಣದೇವರಾಯನು ವ್ಯಾಸತೀರ್ಥರ ಉಪದೇಶದಿಂದ ಅನೇಕ ದಾನಗಳನ್ನು ಮಾಡಿದನೆಂದೂ ಅವರ ಪ್ರಭಾವದಿಂದ ತನಗೆ ಬಂದ ಅನೇಕ ರಾಜಕೀಯ ಕುತ್ತುಗಳಿಂದ ಪಾರಾದನೆಂದೂ 'ವ್ಯಾಸಯೋಗಿ ಚರಿತ' ಎಂಬ ಗ್ರಂಥದಿಂದ ಗೊತ್ತಾಗುವುದು. ರಾಯನು ಶ್ರೀವ್ಯಾಸರಾಯರಿಗೆ ಅತ್ಯಂತ ಭಯಭಕ್ತಿಯಿಂದ ಕನಕಾಭಿಷೇಕವನ್ನು ಮಾಡಿದನೆಂದೂ ಅದೇ ಗ್ರಂಥದಿಂದ ತಿಳಿಯುತ್ತದೆ.

"ಸ ಕಿಲ ಕೃಷ್ಣಮಹಿಪಾಲಃ ಸ್ವಯಮೇವ ಕರಕಮಲೇನಾದಾಯ ಕನಕ ಕುಂಭಮಿಮಂ ಭಗವಂತಂ ವ್ಯಾಸತಾಪಸಮಾದರಾನ್ಮಣಿಭಿರಭಿಷೇಕ್ತುಮಾರಭತ।"

—ವ್ಯಾಸಯೋಗೀ ಚರಿತಾ, ಪುಟ ೨೪.

ಕನಕದಾಸರು ಕೃಷ್ಣದೇವರಾಯನ ಸೈನ್ಯದಲ್ಲಿ ದಂಡನಾಯಕರಾಗಿದ್ದರೆಂದೂ, ಅನೇಕ ಯುದ್ಧಗಳಲ್ಲಿ ಭಾಗವಹಿಸಿದ್ದರೆಂದೂ ಗೊತ್ತಾಗುವುದು. ರಣಾಂಗಣದಲ್ಲಿ ಯುದ್ಧಮಾಡುತ್ತಿದ್ದಾಗ ಶತ್ರುಗಳ ಆಯುಧಗಳಿಂದ ಹತನಾಗಿ ಮಲಗಿದಾಗ ಶ್ರೀ ನರಹರಿಯು ತಮ್ಮನ್ನು ರಕ್ಷಿಸಿದನೆಂದು ಈ ಕೆಳಗಿನ ಪದದಲ್ಲಿ ಹಾಡಿದ್ದಾರೆ:

ಸಾಲದೇ ನಿನ್ನದೊಂದು ದಿವ್ಯನಾಮ ಅ-
ಕಾಲಮೃತ್ಯುವಿನ ಗಂಟಲಗಾಣ ನರಹರಿಯೇ ॥ ಪ ॥

ರಣದೊಳಗೆ ಅವಯವವು ಖಂಡತುಂಡಾಗಿ ಪ್ರತಿ
ರಣವನುತ್ತರಿಸಿ ಮರಣದ ತಾಳಿರೆ
ಪ್ರಣವಗೋಚರ ನೀನು ಗೋಚರಿಸಿ ಬಂದೆನ್ನ
ಹೆಣಕೆ ಪ್ರಾಣವ ಪ್ರಯೋಗಿಸಿದಂತರಾತ್ಮ ॥

ಇಂಥ ಅನೇಕ ಪ್ರಸಂಗಗಳಲ್ಲಿ ರಾಜನಿಗೆ ಕನಕದಾಸರೊಡನೆ ಸಂಪರ್ಕವಿದ್ದಿರಬೇಕು.

**ವ್ಯಾಸರಾಜರು.**— ವ್ಯಾಸರಾಜರು ಅತ್ಯಂತ ಪ್ರಸಿದ್ಧರಾದ ಮಾಧ್ವಯತಿಗಳು. ಇವರು ಮೈಸೂರು ದೇಶದ ಬನ್ನೂರು ಗ್ರಾಮದಲ್ಲಿ ಜನಿಸಿ ಭೂಸ್ಪರ್ಶದ ಮುನ್ನ ಶ್ರೀ ಬ್ರಹ್ಮಣ್ಯತೀರ್ಥರ ವಶಕ್ಕೆ ಕೊಡಲ್ಪಟ್ಟು ಅವರಿಂದ ಶ್ರೀರಾಮಚಂದ್ರ ದೇವರ ಅಭಿಷೇಕದ ಹಾಲಿನಿಂದ ಪೋಷಿತರಾದರು. ಮುಂದೆ ಯೋಗ್ಯಕಾಲದಲ್ಲಿ ಉಪನಯನವನ್ನು ಮಾಡಿಸಿಕೊಂಡು ಸನ್ಯಾಸ ಪಟ್ಟವನ್ನು ಧರಿಸಿ ಶ್ರೀಪಾದ ರಾಯರಲ್ಲಿ ವಿದ್ಯಾವ್ಯಾಸಂಗವನ್ನು ಮಾಡಿದರು. ಶ್ರೀ ವಿಜಯೀಂದ್ರ, ವಾದಿರಾಜ, ಗೋವಿಂದ ಒಡೆಯರು, ಪುರಂದರ ಮೊದಲಾದ ಶಿಷ್ಯರಿಗೆ ಪಾಠವನ್ನು ಹೇಳಿ ಮಂತ್ರೋಪದೇಶವನ್ನು ಕೊಟ್ಟು ಅವರದ್ವಾರಾ ಜಗತ್ತಿನಲ್ಲಿ ತತ್ವಜ್ಞಾನವನ್ನೂ ಹರಿಭಕ್ತಿಯನ್ನೂ ಪ್ರಚಾರಗೊಳಿಸಿದರು. ಬಸವಾಭಟ್ಟ ಎಂಬ ಕಾಲಿಂಗಪಂಡಿತನನ್ನು ವಾದದಲ್ಲಿ ಜಯಿಸಿದರಲ್ಲದೆ ಕೃಷ್ಣದೇವರಾಯನಿಂದ ಕನಕಾಭಿಷೇಕವನ್ನು ಮಾಡಿಸಿಕೊಂಡರು. ಶ್ರೀ ನ್ಯಾಯಾಮೃತ, ತರ್ಕತಾಂಡವ, ಚಂದ್ರಿಕಾ ಮೊದಲಾದ ಉದ್ಗ್ರಂಥಗಳನ್ನು ರಚಿಸಿ ಪಕ್ಷಧರಮಿಶ್ರ ಮೊದಲಾದ ತಾರ್ಕಿಕ ಪಂಡಿತರನ್ನು ವಾದದಲ್ಲಿ ಬೆರಗುಗೊಳಿಸಿ ಉತ್ತರ ದೇಶದ ಚೈತನ್ಯ ಪಂಥಕ್ಕೆ ಪ್ರತಿಷ್ಠಾಪನಾಚಾರ್ಯರಾಗಿ ಜಗತ್ತಿನಲ್ಲಿ ತತ್ವಶಾಸ್ತ್ರಧುರೀಣರೆಂದು ಅಸದೃಶವಾದ ಕೀರ್ತಿಯನ್ನು ಪಡೆದರು. ಅವರ ಶಿಷ್ಯರಾದ ಪುರಂದರದಾಸರು ಗುರುಗಳ ಮೇಲೆ ಮಾಡಿದ ಸುಳಾದಿಯಿಂದಲೂ ವಿಜಯದಾಸರ ಹಾಡುಗಳಿಂದಲೂ ವ್ಯಾಸರಾಯರ ಚರಿತ್ರೆಯನ್ನು ಸ್ಪಷ್ಟವಾಗಿ ತಿಳಿದುಕೊಳ್ಳಬಹುದು.

ವ್ಯಾಸರಾಜರು ಪುರಂದರದಾಸರಿಗೂ ಕನಕದಾಸರಿಗೂ ಸ್ವರೂಪೋದ್ಧಾರಕ ಗುರುಗಳಾಗಿದ್ದರು. ಕನಕದಾಸರನ್ನು ಕುರಿತು ಹಾಡಿದ ಒಂದು ಪದದಲ್ಲಿ ಪುರಂದರದಾಸರು :

‘ಕನಕದಾಸನ ಮೇಲೆ ದಯಮಾಡಲು ವ್ಯಾಸ-
ಮುನಿ ಮಠದವರೆಲ್ಲ ದೂರಿಕೊಂಬುವರೋ’ ॥ ಪ ॥

ಎಂಬ ಪದದಲ್ಲಿ ವ್ಯಾಸರಾಯರ ಮಠದಲ್ಲಿ ಅವರು ಗುರುಗಳ ಪ್ರೀತಿಗೆ ಪಾತ್ರರಾಗಿದ್ದರೆಂದು ಬರೆದಿದ್ದಾರೆ.

‘ನೋಡಿದಿರ, ಈ ಕನಕನಾಡುವ ಮಾತುಗಳ ।
ಮೂಢಜನರರಿಯಬಲ್ಲರೆ ಮಹಿಮೆಯ ।
ನಾಡಾಡಿಯಂತೆಯೇ ಮಾಡಿಬಿಟ್ಟರು ಇವಗೆ ।
ನಾಡೆಲ್ಲ ಹುಡುಕಿದರು ಈಡಾರ ಕಾಣೆ ॥’

ಎಂದು ವ್ಯಾಸರಾಯರು ಕನಕದಾಸರನ್ನು ಹೊಗಳಿದ್ದಾರೆ.

**ವಾದಿರಾಜತೀರ್ಥರು.**— ಕನಕದಾಸರು ಶ್ರೀ ವಾದಿರಾಜತೀರ್ಥರಲ್ಲಿ ದಾಸತ್ವವನ್ನು ವಹಿಸಿರಬೇಕೆಂದು 'ಮೋಹನತರಂಗಿಣಿ' ಯಲ್ಲಿ ತಮ್ಮನ್ನು "ತ್ರಿವಿಕ್ರಮದಾಸಸ್ಯ ದಾಸ"ನೆಂದು ಹೇಳಿಕೊಂಡದ್ದರಿಂದ ಗೊತ್ತಾಗುವದು. ಇಲ್ಲಿ ತ್ರಿವಿಕ್ರಮದಾಸರೆಂದರೆ ಶ್ರೀ ವಾದಿರಾಜತೀರ್ಥರು. ಅವರು ಉತ್ತರ ದೇಶದಿಂದ ತ್ರಿವಿಕ್ರಮ ದೇವರನ್ನು ಕಾಶೀಪ್ರಾಂತದಿಂದ ತಂದು ಸೋದೆಯಲ್ಲಿ ಪ್ರತಿಷ್ಠೆಗೊಳಿಸಿ ಪ್ರತಿವರ್ಷ ರಥೋತ್ಸವವಾಗುವಂತೆ ವ್ಯವಸ್ಥೆಮಾಡಿದರು. ಆ ಕಾಲದ ಸೋದೆಯ ಅರಸನಾದ ಅರಸಪ್ಪನಾಯಕನು ಆ ದೇವರಿಗೆ ಆಲಯ ವನ್ನು ಕಟ್ಟಿಸಿ ಉತ್ಸವಕ್ಕಾಗಿ ಉಂಬಳಿಹಾಕಿಕೊಟ್ಟ ಶಕ ೧೫೧೫, ವಿಜಯ ಸಂವತ್ಸರದ ಶಿಲಾಶಾಸನವು ತ್ರಿವಿಕ್ರಮ ದೇವರ ಗುಡಿಯ ಮಗ್ಗುಲಲ್ಲಿ ಇನ್ನೂ ಇರುತ್ತದೆ. ಉಡುಪಿಯ ಶ್ರೀಕೃಷ್ಣಮಠವನ್ನು ಜೀರ್ಣೋದ್ಧಾರಗೊಳಿಸಿ ಅಷ್ಟ ಮಠಗಳ ಯತಿಗಳಿಂದ ಪರ್ಯಾಯದಿಂದ ಸುವ್ಯವಸ್ಥಿತವಾಗಿ ಪೂಜೆ-ಉತ್ಸವಗಳು ಶಾಶ್ವತವಾಗಿ ನಡೆಯುವಂತೆ ಕಟ್ಟಳೆಗಳನ್ನು ಹಾಕಿದ ಮಹಾಶ್ರೇಯಸ್ಸು ಶ್ರೀ ವಾದಿರಾಜರಿಗೆ ಸಲ್ಲುತ್ತದೆ. ಇವರು ಅನೇಕ ಗ್ರಂಥಗಳನ್ನೂ ಪದಪದ್ಯಗಳನ್ನೂ ರಚಿಸಿ ಪಂಡಿತ ಪಾಮರರಿಗೂ ತತ್ವೋಪದೇಶವನ್ನು ಮಾಡಿದ್ದಾರೆ. ಇವರು ರಚಿಸಿದ ಗ್ರಂಥಗಳಲ್ಲಿ, ಸಂಸ್ಕೃತದಲ್ಲಿ ಯುಕ್ತಿಮಲ್ಲಿಕಾ, ರುಕ್ಮಿಣೀಶ ವಿಜಯ, ವಾದರತ್ನ, ತತ್ವಪ್ರಕಾಶಿಕಾ–ಸುಧಾಗಳಿಗೆ ಟಿಪ್ಪಣಿಗಳು ಅತ್ಯಂತ ಪ್ರಮೇಯ ಜಟಿಲವಾಗಿವೆ. ಕನ್ನಡದಲ್ಲಿ ಮಹಾಭಾರತ ತಾತ್ಪರ್ಯನಿರ್ಣಯ, ವೈಕುಂಠ ವರ್ಣನೆ, ಗುಂಡಕ್ರಿಯೆ, ಸಾವಿರಾರು ಕೀರ್ತನೆಗಳು, ಭ್ರಮರಗೀತೆ, ಸ್ವಪ್ನಗದ್ಯ ಇತ್ಯಾದಿ ಪ್ರಬಂಧಗಳನ್ನು ರಚಿಸಿದ್ದಾರೆ. ಇವರ ಸಂಸ್ಕೃತ, ಕನ್ನಡ ಗ್ರಂಥಗಳು ಪ್ರೌಢವಾದ ಸಾಹಿತ್ಯಶೈಲಿಯಲ್ಲಿ ರಚಿಸಲ್ಪಟ್ಟಿವೆ.

ಕನಕದಾಸರು ಉಡುಪಿಗೆ ಹೋದಾಗ ಶ್ರೀಕೃಷ್ಣನ ಅನುಗ್ರಹಕ್ಕೆ ಪಾತ್ರ ರಾಗಿದ್ದರೆಂದು 'ಕನಕನ ಕಿಂಡಿ' ಎಂಬ ವಿಶಿಷ್ಟ ಕುರುಹಿನಿಂದ ಗೊತ್ತಾಗುತ್ತದೆ. ಆಗ ಶ್ರೀ ವಾದಿರಾಜರು ತಮ್ಮ ಶಿಷ್ಯರಾದ ಕನಕದಾಸರ ಮಹಿಮೆಯು ಆಚಂದ್ರಾರ್ಕವಾಗಿ ನಿಲ್ಲಲೆಂದು ಶ್ರೀಕೃಷ್ಣನು ತನ್ನ ರೂಪವನ್ನು ಹೊರಳಿಸಿ ಗೋಡೆಯೊಡೆದು ತೋರಿಸಿದ ಜಾಗದಲ್ಲಿ ಕಿಂಡಿಯನ್ನು ಮಾಡಿ, ಬಂದ ಭಕ್ತರು ಮೊದಲು ಆ 'ಕನಕನ ಕಿಂಡಿ'ಯಿಂದ ಶ್ರೀಕೃಷ್ಣನ ದರ್ಶನವನ್ನು 'ಧೂಳಿದರ್ಶನ' ವೆಂದು ಮಾಡಿಕೊಂಡು ಆಮೇಲೆ ಮಧ್ವಸರೋವರದಲ್ಲಿ ಸ್ನಾನಮಾಡಿಕೊಂಡು ಶುಚಿರ್ಭೂತರಾಗಿ ದೇವಮಂದಿರವನ್ನು ಪ್ರವೇಶಿಸಿ ದೇವರ ದರ್ಶನಮಾಡಿಕೊಳ್ಳ ಬೇಕೆಂಬ ನಿಯಮವನ್ನು ಹಾಕಿದ್ದಾರೆ. ಆ ನಿಯಮವು ಇದುವರೆಗೂ ರೂಢವಾಗಿ ನಿಂತಿದೆ.

ಕನಕದಾಸರು ತಮ್ಮ ಕಾಲದ ಮಹಾಜ್ಞಾನಿಗಳನ್ನು ಕಂಡು ಅವರಿಂದ ವಿಶೇಷ ಪ್ರಮೇಯಗಳನ್ನು ತಿಳಿದುಕೊಂಡಿದ್ದರೆಂದು ಅವರ ಚರಿತ್ರದಿಂದ ಗೊತ್ತಾಗುತ್ತದೆ.

**ಪುರಂದರದಾಸರು.**— ಪುರಂದರದಾಸರು ಕನಕದಾಸರ ಸಮಕಾಲಿಕರೆಂಬುದು ಅವರ ಮೇಲೆ ಮಾಡಿದ ಸುಳಾದಿಯಿಂದಲೂ ಐತಿಹ್ಯದಿಂದಲೂ ಗೊತ್ತಾಗುತ್ತದೆ. ಇವರು ಮೊದಲು ಸಂಪತ್ತಿನ ಆಗರದಲ್ಲಿ ಚಿನಿವಾಲರಾಗಿ ಮೆರೆದು 'ನತ್ತಿನ' ಘಟನೆಯಿಂದ ವಿರಕ್ತಿಯನ್ನು ತಾಳಿ ಶ್ರೀವ್ಯಾಸರಾಯರಲ್ಲಿ ದಾಸದೀಕ್ಷೆಯನ್ನು ಪಡೆದು ಪಾಂಡುರಂಗ ವಿಠ್ಠಲನ ಮೇಲೆ ಸಾವಿರಾರು ಪದಪದ್ಯಗಳನ್ನು ರಚಿಸಿ 'ದಾಸಕೂಟ'ದ ಜೀವಾತುವಾಗಿದ್ದಾರೆ. ಕರ್ನಾಟಕ ಸಂಗೀತ, ಭಕ್ತಿಮಾರ್ಗ, ಹರಿದಾಸ್ಯಗಳ ಅಭಿವೃದ್ಧಿಯು ಇವರಿಂದಲೇ ಆಯಿತು. ಪುರಂದರದಾಸರು ಶ್ರೀವ್ಯಾಸರಾಯರ ಪಟ್ಟದ ಶಿಷ್ಯರಾಗಿ ಅವರಿಂದ 'ದಾಸರೆಂದರೆ ಪುರಂದರ ದಾಸರಯ್ಯ' ಎಂಬ ವೆಗ್ಗಳದ ಪ್ರಶಸ್ತಿಯನ್ನು ಪಡೆದಿದ್ದಾರೆ. ಇವರು ನಾರದರ ಅವತಾರವೆಂದು ಪ್ರತೀತಿಯಿದೆ. ಇವರ ಚರಿತ್ರದ ವಿಶೇಷಾಂಶಗಳನ್ನು ನಮ್ಮ 'ಪುರಂದರದಾಸರ ಜೀವನ ಚರಿತ್ರೆ (ಅಧ್ಯಾತ್ಮಿಕ ಮತ್ತು ಐತಿಹಾಸಿಕ)' ಎಂಬ ಪುಸ್ತಿಕೆಯಿಂದಲೂ 'ಹರಿದಾಸಸಾಹಿತ್ಯ' ಎಂಬ ಗ್ರಂಥದಿಂದಲೂ ತಿಳಿದುಕೊಳ್ಳಬಹುದು.

**ಕುಮಾರವ್ಯಾಸ ಗದುಗಿನ ನಾರಾಯಣಪ್ಪ.**— ಪುರಂದರದಾಸರು ಕುಮಾರವ್ಯಾಸನ ಕರ್ನಾಟಕ ಮಹಾಭಾರತವನ್ನು ಕುರಿತು ತಮ್ಮದೊಂದು ಸುಳಾದಿಯಲ್ಲಿ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾರೆ. ಅವರನ್ನು ತಮ್ಮ ಮನೆಗೆ ಕರೆತಂದು ಆತಿಥ್ಯವನ್ನು ಮಾಡಿ ಗದುಗಿನ ವೀರನಾರಾಯಣನ ಭಕ್ತನೆಂದೂ ಮಹಾಭಾರತದ ಸಾರವನ್ನು ಜನರಿಗೆ ಹೃದಯಂಗಮವಾಗುವಂತೆ ತಿಳಿಸಿ ಹೇಳಿದ ಮಹಾ ಪ್ರಭಾವಶಾಲಿಯಾದ ಭಕ್ತಕವಿಯೆಂದೂ ಪ್ರಶಂಸಿಸಿದ್ದಾರೆ. ಕುಮಾರವ್ಯಾಸನ ಕಾಲವನ್ನು ಕುರಿತು ವಿದ್ವಾಂಸರಲ್ಲಿ ಹುಟ್ಟಿದ ಚರ್ಚೆಯು ಈ ಸುಳಾದಿಯಿಂದ ಶಾಂತಗೊಳ್ಳುತ್ತದೆ. ಪುರಂದರಸಮಕಾಲಿಕರಾದ ಕುಮಾರ ವ್ಯಾಸ ಕವಿಗಳು ಕನಕದಾಸರ ಮನ್ನಣೆಗೆ ಪಾತ್ರರಾಗಿದ್ದರೆಂದು ಮೋಹನ ತರಂಗಿಣಿಯಲ್ಲಿ ಕನಕದಾಸರು ಕುಮಾರವ್ಯಾಸ, ಕುಮಾರ ವಾಲ್ಮೀಕಿಗಳನ್ನು ತಮ್ಮ ಪೂರ್ವದಲ್ಲಿ ಆಗಿಹೋಗಿದ್ದ ಮಹಾಭಾರತ—ರಾಮಾಯಣ ಕರ್ತೃಗಳೆಂದು ಸ್ಮರಿಸಿ ಸೂಚಿಸಿದ್ದಾರೆ. ಕುಮಾರವ್ಯಾಸನ ಕವಿತ್ವದ ಪ್ರಭಾವವು ಕನಕದಾಸರ ಭಾಷೆ, ವರ್ಣನೆಯ ಶೈಲಿ ಇತ್ಯಾದಿಗಳ ಮೇಲೆ ಆಗಿದೆಯೆಂಬುದು ಆ ಗ್ರಂಥಗಳ ತುಲನಾತ್ಮಕ ಅಧ್ಯಯನದಿಂದ ಗೊತ್ತಾಗುತ್ತದೆ. ನಾರಾಯಣಪ್ಪನ ವ್ಯಕ್ತಿ ಚರಿತ್ರದ ಬಗ್ಗೆ ವಿಶೇಷಾಂಶಗಳು ಗೊತ್ತಾಗುವದಿಲ್ಲ. ಇವನು ಗದುಗಿನ ವೀರನಾರಾಯಣನ ಪ್ರಸಾದಕ್ಕೆ ಪಾತ್ರನಾದ ಕವಿಯಾಗಿದ್ದನೆಂದು ಅಲ್ಲಿಯ ತತ್ಕಾಲದ ಒಂದು ಶಾಸನದಿಂದ ಗೊತ್ತಾಗುತ್ತದೆ. ಕುಮಾರವ್ಯಾಸನು 'ಹಲಗೆ ಬಳಪವ ಪಿಡಿಯದೊಂದಗ್ಗಳಿಕೆ' ಎಂದು ಹೇಳಿಕೊಂಡಂತೆ ಕನಕ ದಾಸರೂ ಮೋಹನತರಂಗಿಣಿಯಲ್ಲಿ 'ಬರೆಹವ ತಿಳಿಯಬೇಡೆನುತೆನ್ನ ನೊಸಲೊಳು

ಬರೆದು ನಿರ್ಮಿಸಲು, ಅದರಿಂದ ಬರೆಹವನು ಅರಿಯೆ ನಾ ಪದವಿಟ್ಟು ಕಡಿತ ಡೋಳ್ ಬರೆದು ಮಾಡಿದ ಕೃತಿಯಲ್ಲ' ಎಂದು ತಿಳಿಸಿದ್ದಾರೆ. ಇದರಿಂದ ಅವರಿಬ್ಬರೂ ಪಂಡಿತಕವಿಗಳಲ್ಲ, ವರಕವಿಗಳೆಂದೂ, ಕೇವಲ ತಮ್ಮ ಉಪಾಸ್ಯ ದೇವತೆಯಾದ ವೀರನಾರಾಯಣ–ಆದಿಕೇಶವರ ಪ್ರಸಾದದಿಂದ ಜ್ಞಾನೋದಯ ವನ್ನು ಹೊಂದಿ ಕೃತಿಗಳನ್ನು ರಚಿಸಿದ್ದಾರೆಂದೂ ಗೊತ್ತಾಗುತ್ತದೆ.

**ತಾತಾಚಾರ್ಯರು.**—ಇವರನ್ನು ಕನಕದಾಸರು ಮೋಹನತರಂಗಿಣಿಯಲ್ಲಿ 'ತಾತಾಚಾರಿಯರಡಿಗೆರಗುವೆನು' ಎಂದು ಸ್ತುತಿಸಿದ್ದಾರೆ. ಇವರು ಪುರಂದರದಾಸರ ಸಮಕಾಲಿಕರಾಗಿದ್ದರೆಂದೂ ಶ್ರೀವ್ಯಾಸತೀರ್ಥರಂತೆ ಕೃಷ್ಣದೇವರಾಯನಿಗೆ ರಾಜ ಗುರುಗಳಾಗಿದ್ದರೆಂದೂ ಅವರ ಚರಿತ್ರೆಯಿಂದ ಗೊತ್ತಾಗುತ್ತದೆ. ತೆಲುಗು ದೇಶದ ಪ್ರಸಿದ್ಧ ಕವಿಗಳಾದ ಅನ್ನಮಾರ್ಯರು ಪುರಂದರದಾಸರ ಹಿರಿಯ ತಲೆಮಾರಿನ ಸಮಕಾಲಿಕರಾಗಿದ್ದರೆಂದು ಅವರ ಮೊಮ್ಮಗನಾದ ಚಿನ್ನಯಸೂರಿಯು ರಚಿಸಿದ 'ಅನ್ನಮಾರ್ಯ ಚರಿತೆ' ಎಂಬ ತೆಲುಗು ಗ್ರಂಥದಿಂದ ಗೊತ್ತಾಗುತ್ತದೆ. ಕನಕ ದಾಸರು ಅನ್ನಮಾರ್ಯರನ್ನು ಕಂಡಿದ್ದರೋ ಹೇಗೆ ಎಂಬ ಬಗ್ಗೆ ಪ್ರಮಾಣಗಳಿಲ್ಲ. ಮಹಾ ಪ್ರಭಾವಿಗಳಾದ ಹರಿದಾಸರು ಆ ಕಾಲದಲ್ಲಿ ಪರಸ್ಪರ ಸ್ನೇಹದಿಂದ ಒಬ್ಬರನ್ನೊಬ್ಬರು ಸಂದರ್ಶನ ಮಾಡುತ್ತ ಪ್ರಮೇಯಗಳ ಬಗ್ಗೆ ಚರ್ಚೆಮಾಡುತ್ತ ಆನಂದದಲ್ಲಿ ತಲ್ಲೀನರಾಗುತ್ತಿದ್ದರು. ಪುರಂದರದಾಸರ ಪ್ರೀತಿಗೆ ಪಾತ್ರರಾದ ಕನಕದಾಸರು ಅನ್ನಮಾರ್ಯರನ್ನು ಕಂಡಿರುವುದು ಅಸಂಭಾವ್ಯವಾಗಿಲ್ಲ. ಅದಲ್ಲದೆ ಹರಿದಾಸರೂ ಭಕ್ತಶ್ರೇಷ್ಠರೂ ತಿರುಪತಿ, ಪಂಢರಪುರ, ಬೇಲೂರು, ಉಡುಪಿ ಮೊದಲಾದ ಪ್ರಸಿದ್ಧ ವೈಷ್ಣವ ಕ್ಷೇತ್ರಗಳನ್ನು ಸಂದರ್ಶಿಸಿ ತೀರ್ಥ ಯಾತ್ರೆಯಿಂದ ಸಂಚರಿಸುತ್ತ ಅಲ್ಲಲ್ಲಿ ವಿಷ್ಣುವಿನ ಮಹಿಮೆಯನ್ನು ಹಾಡುತ್ತ ಸದಾ ಭಕ್ತಿಪರವಶರಾಗಿರುತ್ತಿದ್ದರು. ಅನ್ನಮಾರ್ಯರು ವೃದ್ಧರಾದ, ವೆಂಕಟೇಶ ದೇವರ ಭಕ್ತರು. ಪುರಂದರದಾಸರು ಚಿಕ್ಕ ವಯಸ್ಸಿನ, ಪಾಂಡುರಂಗನ ಭಕ್ತರು. ಕೃಷ್ಣದೇವರಾಯನ ಕಾಲದಲ್ಲಿ ಶ್ರೀವ್ಯಾಸತೀರ್ಥರಲ್ಲಿ ದೀಕ್ಷೆಯನ್ನು ತೆಗೆದುಕೊಂಡ ಪುರಂದರದಾಸರೂ ಕನಕದಾಸರೂ ಅನ್ನಮಾರ್ಯರಿಗೆ ಸಮಕಾಲೀನರಾಗಿರುವುದು ಸ್ವಾಭಾವಿಕವಾಗಿದೆ. ಆದರೆ ಈ ಬಗ್ಗೆ ನಮಗೆ ಪ್ರತ್ಯಕ್ಷ ಪ್ರಮಾಣಗಳು ಬೇಕು.

**ವೈಕುಂಠದಾಸರು.**—ಇವರು ಪುರಂದರದಾಸರ ಸಮಕಾಲೀನರಾಗಿದ್ದು ಅನೇಕ ರಾಜಮರ್ಯಾದೆಗಳನ್ನು ಪಡೆದಿದ್ದರು. ಇವರ ಮನೆಯ ಬಾಗಿಲಲ್ಲಿ ಬೆಳ್ಳಿ ಬೆತ್ತದ ಕಾವಲುಗಾರರಿರುತ್ತಿದ್ದರಂತೆ. ಕನಕದಾಸರು ದಕ್ಷಿಣದೇಶದ ತೀರ್ಥಯಾತ್ರೆಯನ್ನು ಮುಗಿಸಿಕೊಂಡು ಬರುವಾಗ ಮಾರ್ಗದಲ್ಲಿ ಬೇಲೂರಿನ ಕೇಶವದೇವರ ದರ್ಶನಕ್ಕೆ ತಂಗಿದರು. ಅಲ್ಲಿ ಕೇಶವದೇವರ ಅನುಗ್ರಹಕ್ಕೆ ಪಾತ್ರರಾಗಿದ್ದ ಶ್ರೀವೈಷ್ಣವಭಕ್ತಶಿಖಾಮಣಿ ವೈಕುಂಠದಾಸರ ದರ್ಶನಾಪೇಕ್ಷೆ ಯಿಂದ ಅವರ ಮನೆಗೆ ಹೋದರು. ಬೆತ್ತದ ಕಾವಲುಗಾರನಾಗಿ ಕೆಲವು ದಿನ

ಸೇವೆಮಾಡಿದರಂತೆ. ಆಗ ವೈಕುಂಠದಾಸರು ಹೊಸ ಕಾವಲುಗಾರರನ್ನು 'ನೀನು ಯಾರಪ್ಪ, ಹೊಸಬನಾಗಿ ಕಾಣುತ್ತೀ' ಎಂದು ಪ್ರಶ್ನೆಮಾಡಿದರೆಂದೂ ಕನಕದಾಸರು ಕೂಡಲೆ

'ಹಲವು ದಾಸರ ಮನೆಯ ಹೊಲೆದಾಸ ನಾನಯ್ಯ।
ಕುಲವಿಲ್ಲದ ದಾಸ ಕುರುಬ ದಾಸ॥'

ಎಂದೂ,

'ಬಂಟನಾಗಿ ಬಾಗಿಲ ಕಾಯ್ವೆ ವೈ-
ಕುಂಠದಾಸೋತ್ತಮದಾಸರ ಮನೆಯ ॥ ಪ ॥

ಹೊರಸುತ್ತು ಪ್ರಾಕಾರ ಸುತ್ತಿ ನಾ ಬರುವೆ।
ಬರುವ ಹೋಗುವರ ವಿಚಾರಿಸಿ ಬಿಡುವೆ॥
ಕರದಕೋಲು ಪಿಡಿದು ಅಲ್ಲಿ ನಿಂದಿರುವೆ
ಶ್ರೀಹರಿಯ ಓಲಗದ ಸಮ್ಮುಖದಲ್ಲಿರುವೆ' ॥ ೧ ॥

ಎಂದೂ ಉತ್ತರಕೊಟ್ಟರಂತೆ. ಕನಕದಾಸರ ಮಹಿಮೆಯನ್ನು ಕೇಳಿದ್ದ ವೈಕುಂಠದಾಸರು ಇವರೇ ಕನಕದಾಸರೆಂದು ತಿಳಿದು ಅವರ ಭಕ್ತಿಗೆ ಮೆಚ್ಚಿ ಆನಂದಬಾಷ್ಪಗಳನ್ನು ಸುರಿಸುತ್ತ ಅವರನ್ನು ಬಿಗಿದಪ್ಪಿಕೊಂಡರಂತೆ.

ಇಂಥ ಅಪ್ರತಿಮ ಹರಿದಾಸಾಗ್ರಣಿಗಳ ಸಮಕಾಲೀನರಾಗಿದ್ದು ಸ್ವಾಭಾವಿಕ ವಿರಕ್ತರೂ ಭಕ್ತರೂ ಆದ ಕನಕದಾಸರು ಕಾಗಿನೆಲೆಯ ಆದಿಕೇಶವನ ಅಂಕಿತದಲ್ಲಿ ಅನೇಕ ಪದಪದ್ಯಗಳನ್ನೂ, ಹರಿಭಕ್ತಿಸಾರ, ನಳಚರಿತ್ರೆ, ಮೋಹನತರಂಗಿಣಿ ರಾಮಧಾನ್ಯಚರಿತೆ, ನರಸಿಂಹಸ್ತವನ (ಉಪಲಬ್ಧವಿಲ್ಲ) ಮೊದಲಾದ ಶ್ರೇಷ್ಠ ಕಾವ್ಯಗಳನ್ನೂ ರಚಿಸಿ ಹೆಸರುವಾಸಿಯಾಗಿದ್ದಾರೆ. ಇವರು ಯಮಧರ್ಮರಾಜನ ಅವತಾರಿಯಾದ ವಿದುರನ ಅವತಾರವೆಂದು ಮಾಧ್ವರು ನಂಬುತ್ತಾರೆ. ವೈಕುಂಠ ದಾಸರು ಅರ್ಜುನನ ಅವತಾರಿಯೆಂದು ರಾಮಾನುಜೀಯ ವೈಷ್ಣವ ಸಂಪ್ರ ದಾಯವಿದೆ. ತೆಲುಗು ದೇಶದಲ್ಲಿ ಅನ್ನಮಾಚಾರ್ಯರನ್ನು ವೆಂಕಟೇಶದೇವರ ಅವತಾರಿ ಯೆಂಬ ನಂಬಿಕೆ ರೂಢವಾಗಿದೆ. ಇದರಿಂದ ಅವರು ವೆಂಕಟೇಶದೇವರ ಏಕಾಂತ ಭಕ್ತರಾಗಿದ್ದರೆಂದು ತಿಳಿಯಬೇಕು. ವ್ಯಾಸತೀರ್ಥರು ಶೇಷಾವೇಶವುಳ್ಳ ಪ್ರಹ್ಲಾದನ ಅವತಾರವೆಂದೂ ಪುರಂದರದಾಸರು ನಾರದರ ಅಂಶವೆಂದೂ ದಾಸಕೂಟದಲ್ಲಿ ಗ್ರಹಿಕೆಯಿದೆ. ಅಂತು ಕ್ರಿ.ಶ. ೧೬ನೆಯ ಶತಮಾನದಲ್ಲಿ ದೇವಾಂಶರಾದ ಭಗವದ್ಭಕ್ತರು ಜನತೆಗೆ ಭಕ್ತಿಮಾರ್ಗವನ್ನು ಉಪದೇಶಿಸಿ ಮಹೋಪಕಾರವನ್ನು ಮಾಡಿದರು. ಅವರಲ್ಲಿ ಕನಕದಾಸರ ಸ್ಥಾನವು ಅತ್ಯುಚ್ಚವಾಗಿದೆಯೆಂಬುದು ಅವರ ಕೃತಿಗಳಿಂದಲೂ ಐತಿಹ್ಯದಿಂದಲೂ ಸ್ಪಷ್ಟವಾಗುತ್ತಿದೆ.

# ಕನಕದಾಸರ ರಾಗಿ ರಾಮಾಯಣ

ಶ್ರೀ ಹೆಚ್. ಎಲ್. ನಾಗೇಗೌಡ

ರಾಮಾಯಣ ಮಹಾಭಾರತಗಳು ಸಾವಿರಾರು ವರ್ಷಗಳಿಂದ ನಮ್ಮ ಜನಜೀವನದ ಹಾಗೂ ಸಾಹಿತ್ಯದ ಹಾಸುಹೊಕ್ಕಾಗಿ ಹೋಗಿವೆ. ಈ ಮಹಾ ಕಾವ್ಯಗಳು ಇಲ್ಲದಿದ್ದರೆ ನಮ್ಮ ಜೀವನ ಬರಡಾಗುತ್ತಿತ್ತು; ನಮ್ಮ ಸಾಹಿತ್ಯ ತಂದೆತಾಯಿಗಳಿಲ್ಲದ ತಬ್ಬಲಿಯಂತಾಗುತ್ತಿತ್ತು.

ಪ್ರಕೃತ, ರಾಮಾಯಣವನ್ನು ತೆಗೆದುಕೊಂಡರೆ ಅದು ನಮ್ಮ ದೇಶದ ನಾನಾ ಭಾಷೆಗಳಲ್ಲಿ ಅನೇಕ ಉಪಕಾವ್ಯಗಳಿಗೆ ಮತ್ತು ಹೊಸ ರಾಮಾಯಣ ಗಳಿಗೆ ದಾರಿಮಾಡಿಕೊಟ್ಟಿದೆ. ಆದಿಕವಿ ವಾಲ್ಮೀಕಿ ಮಹರ್ಷಿ ಬರೆದ ಮೂಲ ರಾಮಾಯಣವನ್ನು ಉಪಯೋಗಿಸಿಕೊಂಡು ನೂರಾರು ರಾಮಾಯಣಗಳು ರಚಿತ ವಾಗಿವೆ; ಮುಂದೆಯೂ ರಚಿತವಾಗುವುದರಲ್ಲಿ ಸಂದೇಹವಿಲ್ಲ. ಇಂಥ ರಾಮಾಯಣಗಳಲ್ಲಿ ಕನಕದಾಸರು ರಚಿಸಿದ ರಾಮಧಾನ್ಯಚರಿತೆಯೂ ಒಂದು.

ಕನಕದಾಸರು ಇಡೀ ೧೯ನೇ ಶತಮಾನವನ್ನು ಬಾಳಿ ಬದುಕಿದ ದಾಸ ಶ್ರೇಷ್ಠರು. ಅವರು ತೀರಿಕೊಂಡಾಗ ಅವರಿಗೆ ೯೮ ವರ್ಷಗಳು. ಧಾರವಾಡ ಜಿಲ್ಲೆಯ ಬಾಡ ಎಂಬ ಗ್ರಾಮದಲ್ಲಿ ಕುರುಬರ ಕುಟುಂಬವೊಂದರಲ್ಲಿ ಜನ್ಮವೆತ್ತಿ, ವಿಜಯನಗರದ ಅರಸುಗಳ ಕಾಲದಲ್ಲಿ ಪಾಳೆಯಗಾರರೂ ಸೇನಾನಾಯಕರೂ ಆಗಿದ್ದವರು. ಅವರಿಗೆ ದೊರಕಿದ ಅಪಾರ ಐಶ್ವರ್ಯದ ಕಾರಣ ಅವರಿಗೆ ಕನಕರಾಜ ಎಂಬ ಅಡ್ಡಹೆಸರು ಮೊದಲಿಗೆ ಇತ್ತಂತೆ. ಅನಂತರ ಅವರು ವೈರಾಗ್ಯದ ಹಾದಿಯನ್ನು ಹಿಡಿದು ದಾಸಪಂಥವನ್ನು ಸ್ವೀಕರಿಸಿದ ಮೇಲೆ ಕನಕದಾಸರಾದರು. ಧಾರವಾಡ ಜಿಲ್ಲೆಯವರಾದರೂ ಉಡುಪಿ, ಬೇಲೂರು ನರಸೀಪುರ ಮುಂತಾದ ಕಡೆಗಳಲ್ಲಿ ಸಂಚರಿಸಿ ದೇವರ ಗುಣಗಾನಮಾಡುತ್ತ ಕೊನೆಗೆ ಧಾರವಾಡ ಜಿಲ್ಲೆಯ ಕಾಗಿನೆಲೆ ಎಂಬಲ್ಲಿ ನೆಲಸಿ ಪರಮಾತ್ಮನ ಸಾನ್ನಿಧ್ಯ ವನ್ನು ಸೇರಿದರು.

ಅಚ್ಚಕನ್ನಡಿಗರಾದ ದಾಸರು ಕೀರ್ತನೆಗಳನ್ನಷ್ಟೇ ಅಲ್ಲದೆ ಮೋಹನ ತರಂಗಿಣಿ, ನಳಚರಿತ್ರೆ, ಹರಿಭಕ್ತಿಸಾರ ಮತ್ತು ರಾಮಧಾನ್ಯಚರಿತೆ ಎಂಬ ಗ್ರಂಥಗಳನ್ನು ರಚಿಸಿದ್ದಾರೆ. ನೃಸಿಂಹಸ್ತವ ಎಂಬ ಗ್ರಂಥವನ್ನು ರಚಿಸಿದ್ದಾರೆಂದೂ ಗೊತ್ತಾಗುತ್ತದೆ. ಆದರೆ ಅದರ ಪ್ರಕಟಣೆ ಇನ್ನೂ ಆದಂತೆ ಕಾಣುವುದಿಲ್ಲ. ಮೋಹನತರಂಗಿಣಿ, ನಳಚರಿತ್ರೆ ಮತ್ತು ಹರಿಭಕ್ತಿಸಾರ ಕನ್ನಡಿಗರಿಗೆ ಆಗಲೇ ಪರಿಚಯವಾದ ಗ್ರಂಥಗಳು. ರಾಮಧಾನ್ಯಚರಿತೆ ಇಲ್ಲಿಯವರೆಗೂ ಓಲೆ ಗರಿಯ ಪ್ರತಿಯಾಗಿಯೇ ಉಳಿದಿದ್ದು ಈಗತಾನೆ ಅಚ್ಚಾಗಿ ಹೊರಬಂದಿದೆ.

ಶ್ರೀ ಪಂಚಲಿಂಗೇಗೌಡರು ರಾಮಧಾನ್ಯಚರಿತೆಯನ್ನು ಸಂಪಾದಿಸಿ ಎರಡು ವರ್ಷಗಳ ಹಿಂದೆ ಪ್ರಕಟಿಸಿದರು. ಇದಕ್ಕಾಗಿ ಕನ್ನಡಿಗರು ಅವರಿಗೆ ಕೃತಜ್ಞ ರಾಗಿರಬೇಕಾಗಿದೆ.

ರಾಮಧಾನ್ಯವೆಂದರೆ ರಾಗಿ. ನಾನಾ ರಾಮಾಯಣಗಳುಂಟು ಕನಕ ದಾಸರದು ರಾಗಿ ರಾಮಾಯಣ. ರಾಗಿಯನ್ನು ಕುರಿತು ಒಂದು ಚರಿತೆಯನ್ನು ಕನಕದಾಸರು ಬರೆಯಬೇಕಾಗಿಬಂದ ಕಾರಣ ಏನೋ ತಿಳಿಯದು. ಅವರು ಜೋಳ ಬೆಳೆಯುವ ಧಾರವಾಡ ಸೀಮೆಯವರಾದರೂ ರಾಗಿ ಬೆಳೆಯುವ ಮೈಸೂರು ಸೀಮೆಯಲ್ಲಿ ಸುತ್ತಾಡಿದಾಗ ಅದನ್ನು ತಿಂದು ನಿರೋಗಿಗಳಾಗಿ ಬಾಳುತ್ತಿದ್ದ ಜನರನ್ನು ಕಂಡೋ ಅಥವಾ ಅವರೇ ರಾಗಿಯನ್ನು ಸ್ವತಃ ಉಪಯೋಗಿಸಿ ಅದರ ಮಹತ್ವದ ಅರಿವು ಮಾಡಿಕೊಂಡೋ ಆದರ ಮೇಲೆ ಒಂದು ಚರಿತೆಯನ್ನು ಬರೆಯ ಬೇಕೆಂಬ ಮನಸ್ಸುಮಾಡಿರಬೇಕು. ಅಥವಾ ಮೊದಲಿನಿಂದಲೂ ರಾಗಿಯನ್ನು ಉಪಯೋಗಿಸುತ್ತಿದ್ದ ಅವರಿಗೆ ಅದು ಎಷ್ಟು ಆರೋಗ್ಯಕರ ಹಾಗೂ ಹಿತಕರ ಎಂಬುದು ಮನಸ್ಸಿಗೆ ನಾಟಿರಬೇಕು. ಎರಡು ವರ್ಷ ಕಡಮೆ ನೂರುವರ್ಷ ಬಾಳಿದ ಕನಕದಾಸರಿಗೆ ತಮ್ಮ ದೀರ್ಘಾಯುಸ್ಸಿಗೆ ರಾಗಿಯೇ ಕಾರಣವೆಂಬುದು ಸ್ಪಷ್ಟವಾಗಿರಬೇಕು. ತಾವಷ್ಟೇ ಅಲ್ಲ, ಲಕ್ಷಾಂತರ ಜನರು ರಾಗಿಯ ಸೇವನೆ ಯಿಂದ ಆರೋಗ ದೃಢಕಾಯರಾಗಿದ್ದುದನ್ನು ಕಂಡಿರಬೇಕು. ಅಲ್ಲದೆ, ಅಕ್ಕಿಯ ಉಪಯೋಗದಿಂದ ಜನರು ಅಲ್ಪಾಯುಗಳಾಗುವುದನ್ನೂ ಕಂಡಿರ ಬೇಕು. ರಾಗಿ ಎಂಬ ಹೆಸರು ಹೇಗೆ ಬಂತೆಂಬ ವಿಚಾರವನ್ನೂ ಕನಕದಾಸರು ಆಲೋಚಿಸಿರಬೇಕು. ಅಥವಾ ರಾಗಿಗೆ ಆ ಕಾಲದಲ್ಲಿ ರಾಮಧಾನ್ಯ ಎಂಬ ಹೆಸರೂ ಇದ್ದಿರಬೇಕು. ರಾಮಧಾನ್ಯ ಎಂಬ ಹೆಸರು ಬರಲು ಕಾರಣವೇನೆಂದು ಆಲೋಚಿಸಿದ ಕನಕದಾಸರಿಗೆ, ಈಗ ಅಲ್ಲಲ್ಲೇ ಗ್ರಾಮಾಂತರ ಪ್ರದೇಶದಲ್ಲಿ ಕೇಳಬರುತ್ತಿರುವಂತೆ, ಆಗಲೂ ಅದು ರಾಘವನು ಕೊಟ್ಟ ಹೆಸರಿನ ಕಾರಣ ರಾಗಿ ಎಂದಾಯಿತೆಂಬುದು ತಿಳಿದಿರಬೇಕು. ಮತ್ತೊಂದು ಕಾರಣ ಇದ್ದರೂ ಇರಬಹುದು. ರಾವಣನನ್ನು ಸಂಹರಿಸಲು ಅತಿಬಲ ಪರಾಕ್ರಮಿಗಳಾದ ವಾನರ ಸೈನ್ಯ ಸಹಾಯಮಾಡಿತಷ್ಟೆ. ವಾನರರು ನಮ್ಮ ದಕ್ಷಿಣ ಭಾರತೀಯರು. ಅವರಿಗೆ ಅಷ್ಟೊಂದು ಶಕ್ತಿ ಹೇಗೆ ಬಂತು? ಬಹುಶಃ ರಾಗಿಯನ್ನು ಅವರು ತಮ್ಮ ಮುಖ್ಯ ಆಹಾರವಾಗಿ ಉಪಯೋಗಿಸುತ್ತಿದ್ದುದರಿಂದ ಇರಬಹುದು. ರಾಮ ತನ್ನ ದಕ್ಷಿಣ ಭಾರತ ಸಂಚಾರಕಾಲದಲ್ಲಿ ಹಾಗೂ ವಾನರರೊಡನೆ ನಿಕಟ ಸಂಬಂಧ ಬೆಳೆಸಿದ ಕಾಲದಲ್ಲಿ ರಾಗಿಯ ಮಹಿಮೆ ಎಷ್ಟೆಂಬುದನ್ನು ತಿಳಿದುಕೊಂಡು ಮೊದಲಿಗೆ ನರೆದಲೆಗ ಅಥವಾ ಬೇರೊಂದು ಹೆಸರಿದ್ದ ಧಾನ್ಯಕ್ಕೆ ರಾಘವ ಎಂಬ ತನ್ನ ಹೆಸರನ್ನೇ ಇಟ್ಟಿರಬೇಕು. ಆ 'ರಾಘವ' ಎಂಬ ಹೆಸರು ಕಾಲ ಕಳೆದಂತೆ ರಾಘ, ರಾಘೀ, ಕೊನೆಗೆ ರಾಗಿ ಆಗಿರಬೇಕು. ಇಷ್ಟನ್ನೆಲ್ಲ ಗಮನಿಸಿ

ಕನಕದಾಸರು ರಾಗಿಯ ಪ್ರಸಂಗವನ್ನು ರಾಮಾಯಣಕ್ಕೆ ಅಳವಡಿಸಿಕೊಂಡು ರಾಮಧಾನ್ಯಚರಿತೆ ಎಂಬ ಪದ್ಯಕಾವ್ಯವನ್ನು ರಚಿಸಿದ್ದಾರೆ.

ರಾಮಧಾನ್ಯಚರಿತೆ ಬಹಳ ಸಣ್ಣ ಕಾವ್ಯ. ಕೇವಲ ೧೫೭ ಪದ್ಯಗಳಿವೆ. ಶಾಂಡಿಲ್ಯ ಮುನಿ ವನವಾಸದಲ್ಲಿದ್ದ ಪಾಂಡವರನ್ನು ಕಂಡಾಗ ಅವರಿಗೆ ರಾಮ ಧಾನ್ಯದ ಕಥೆಯನ್ನು ಹೇಳಿದ್ದಾರೆ. ರಾಮಧಾನ್ಯಚರಿತೆಯನ್ನು ಕನಕದಾಸರು ಬರೆದದ್ದು ಅವರು ದಾಸರಾದ ಮೇಲೆಯೇ ಎಂಬುದರಲ್ಲಿ ಸಂದೇಹವಿಲ್ಲ. ಕನಕರಾಜನಾಗಿರುವಾಗ ಅವರಿಗೆ ಕಾವ್ಯರಚನೆಯ ಕಡೆ ಮನಸ್ಸು ಹೋಗಿರಲಾರದು. ಅಲ್ಲದೆ ತಮ್ಮ ಕಾವ್ಯದ ಮೊದಲೆರಡು ಪದ್ಯಗಳಲ್ಲಿ 'ಚನ್ನಿಗರಾಯ ಪಾಲಿಸು ಸಕಲ ಸಜ್ಜನರಾ' ಮತ್ತು 'ವರಪುರದರಸನನು ಕೊಂಡಾಡಿ ಪೇಳುವೆನೀ ಮಹಕಥೆಯಾ' ಎಂದು ಹೇಳಿರುವುದರಿಂದ ಅವರು ದಾಸರಾದ ಮೇಲೆ, ಅದರಲ್ಲಿಯೂ ಅವರ ಮುಪ್ಪಿನ ಕಾಲದಲ್ಲಿ, ಈ ಕಾವ್ಯರಚನೆ ಮಾಡಿರಬಹುದೆನ್ನಿಸುತ್ತದೆ. ಕಾವ್ಯ ಅಷ್ಟು ಉನ್ನತಮಟ್ಟದ್ದು ಎಂದು ಹೇಳುವಂತಿಲ್ಲ. ಆದರೆ ದಾಸರಿಗಿದ್ದ ಸಂಕ್ಷಿಪ್ತವಾಗಿ ಹೇಳುವ ಶಕ್ತಿ ಗಣನೀಯವಾದುದೆಂದೇ ಹೇಳಬೇಕು. ಇಡೀ ರಾಮಾಯಣವನ್ನು ಮತ್ತು ಮಧ್ಯೆ ರಾಗಿಯ ಪ್ರಸಂಗವನ್ನು ಕೇವಲ ೧೫೭ ಪದ್ಯಗಳಲ್ಲಿ ಹೇಳಿರುವುದು ಸಾಮಾನ್ಯವೇನಲ್ಲ. ಅಂತೂ ಕನಕದಾಸರು ರಾಮಧಾನ್ಯಚರಿತೆಯನ್ನು ರಚಿಸಿ ರಾಗಿಗೆ ಒಂದು ಉನ್ನತ ಸ್ಥಾನವನ್ನು ದೊರಕಿಸಿಕೊಟ್ಟಿದ್ದಾರೆ. ಹೂವಿನಿಂದ ನಾರು ಸ್ವರ್ಗ ಸೇರಿತು ಎಂಬ ಮಾತಿನಂತೆ ರಾಮನ ನಾಮ ಪಡೆದು ಬಡವರ ಆಹಾರವಾದ ರಾಗಿ ರಾಮತ್ವದ ಸಿದ್ಧಿಗೇರಿದೆ ಎಂದು ಹೇಳಬಹುದು.

ಇನ್ನು ರಾಗಿಯ ರಾಮಾಯಣವನ್ನು ಕೇಳೋಣ:

ವಾರುಧಿಯ ಬಂಧಿಸಿದ ಸೇನಾ
ಭಾರದಲಿ ನಡೆತಂದು ಲಂಕೆಯ
ಸೇರಿ ಮುತ್ತಿಗೆವಿಡಿದು ರಾವಣ ಕುಂಭಕರ್ಣರನೂ
ಭೂರಿಬಾಣದೊಳೊರಸಿ ದಾನವ
ವೀರರನು ಪರಿಹರಿಸಿ ರಘುನೃಪ
ವಾರಣದಿ ಪಟ್ಟವನು ಕಟ್ಟಿದನು ವಿಭೀಷಣಗೆ

ಹೀಗೆ ಮಾಡಿ ಧರಣಿಸುತೆಯನ್ನು ಕರೆದುಕೊಂಡು ಕುಬೇರನ ವರರಥವನ್ನು ಹತ್ತಿ ಪರಿವಾರ ಸಮೇತ ವಾಲ್ಮೀಕಿ ಆಶ್ರಮಕ್ಕೆ ಬಂದನು. ಅಲ್ಲಿ ನೆರೆದ ಮಹಾ ಮುನಿಗಳೆಲ್ಲರನ್ನೂ ಸತ್ಕರಿಸಿ ಜಾನಕಿವಲ್ಲಭನು ಮುಚುಕುಂದನಾಶ್ರಮಕೆ ಬಂದನು. ರಘುಕುಲ ರಾಮನು ಬರಲು ಕೌಶಿಕ, ಜಮದಗ್ನಿ, ಜನ್ಹು, ಪರಾಶರ, ಜಾಬಾಲಿ, ಭೃಗು, ದೂರ್ವಾಸ, ಗೌತಮಃಧಾದಿಯಾಗಿ ಸಮಸ್ತ ಮುನಿವರರು ಬಂದು ಕಂಡು ಹರಸಿದರು ಅಕ್ಷತೆಯ ತಳಿದು. ರಾವಣನನ್ನು ಸಂಹರಿಸಿ

ಮುನಿಗಳನ್ನು ಪಾಲಿಸಿದೆ ಎಂದು ಹೊಗಳಿದರು. ಅದಕ್ಕೆ ಶ್ರೀರಾಮ 'ಸಾರ ಹೃದಯರು ನೀವು ನಮಗುಪಚಾರವೇಕಿದು. ನಿಮ್ಮಡಿಯ ಕರುಣಾರಸವೇ ಸಲಹುವುದು ನಮ್ಮನು ಸಾಕದಂತಿರಲಿ' ಎಂದು ಹೇಳಿ ಮುನಿಗಳನ್ನು ಉಪಚರಿಸಿ ಕುಳ್ಳಿರಿಸಿದನು.

ಎಡದಕಡೆ ಕಪಿಕುಲೇಂದ್ರನ ಗಡಣ, ಬಲದಲಿ ರಾವಣಾನುಜ, ಎದುರಿನಲಿ ಮುನಿನಿಕರ, ಹಿಂದೆ ವಾನರರು—ಈ ರೀತಿ ಸಭೆ ಸೇರಿರಲು ಮಡದಿ ಸೀತಾ, ತಮ್ಮ ಲಕ್ಷ್ಮಣ ಚಾಮರಗಳನ್ನು ಚಿಮ್ಮಲು ಶ್ರೀರಾಮ ಸಿಂಹಾಸನದಿ ರಂಜಿಸಿದನು.

ನೆರೆದ ಮಹಾ ಮನೀಶ್ವರರೆಲ್ಲ ಬೆಲ್ಲ, ಸಕ್ಕರೆ, ಜೇನುತುಪ್ಪ ರಸಾಯನಂಗಳಲಿ ರಚಿಸಿದ ಸುಭಕ್ಷ್ಯಗಳನೆಲ್ಲವನು ಹೆಡಗೆಗಳಲ್ಲಿ ಜೋಡಿಸಿ ಹೊರಿಸಿ ತಂದಿರಿಸಿದರು. ಆಗ ನಸುನಗೆಯಲ್ಲಿ ರಾಮ ತನ್ನ ನಿಜಬಲರನ್ನು ಕರೆಸಿ ರುಚಿನೋಡಿ ಎಂದ. ರುಚಿನೋಡಿದ ವಾನರರು ಬಹಳ ಚೆನ್ನಾಗಿದೆ ಎಂದು ಮುನಿವರರನ್ನು ಕೊಂಡಾಡಿದರು. ಅಷ್ಟಕ್ಕೆ ಸಮಾಧಾನನಾಗದ ರಘುನಂದನ ಆಂಜನೇಯನನ್ನು ಕರೆದು 'ಕರುಣದೊಳಿದರ ರುಚಿಯೆಂತೆನಲು', ಆತನು ರುಚಿನೋಡಿ ಸವಿಯಾಗಿದೆ, ಆದರೆ 'ಧಾನ್ಯದ ತನುವಿನೀಕ್ಷಣ ಬೇಕು. ದೇವರು ತರಿಸಿ ನೀವೆಂದಾ'. ಆಗ ರಾಮನೃಪಾಲ ಗೌತಮಮುನಿಗಳಿಗೆ ಹೇಳಿ ಧಾನ್ಯಗಳನ್ನು ತರಿಸಿದನು. ನರೆದಲೆಗ, ನೆಲ್ಲು, ಹಾರಕ, ಬರಗು, ಜೋಳ, ಕಂಬು, ಉರುತರದ ರವೆ, ಎವೆ, ನವಣೆ—ಎಂಬೀ ನವಧಾನ್ಯಗಳ ರಾಸಿ ಬಿತ್ತು. ಆ ಮೆರೆವ ರಾಸಿಯ ಕಂಡು ಅದರೊಳು ಪರಮಸಾರದ ಹೃದಯನಾರೆಂದು ಅರಸ ಕೇಳಿದನು, ಅಲ್ಲಿದ್ದ ಮಹಾಮುನೀಶ್ವರರನು. ಒಬ್ಬೊಬ್ಬರು ಒಂದೊಂದು ಧಾನ್ಯ ಅತಿಶಯವೆಂದು ಹೇಳಿದರು.

ಆಗ ಶ್ರೀರಾಮ 'ಹಲವು ಮತವೇಕೊಂದನೇ ಪೇಳೆಂದ' ಗೌತಮನನ್ನು ಕುರಿತು. ಗೌತಮ ನಮ್ಮ ದೇಶಕತಿಶಯ ನರೆದಲೆಗನೆ ವಾಸಿ ಎಂದ. ನರೆದಲೆಗ ಎಂದರೆ ನರೆತ ತಲೆಯವನು. ರಾಗಿಯ ಕಾಳಿನಲ್ಲಿ ಮೊಳಕೆ ಬರುವ ಕಡೆ ಒಂದಿಷ್ಟು ಬೆಳ್ಳಗಿದೆ ಎಂಬುದು ಅದನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಗೊತ್ತಾಗುತ್ತದೆ. ಈ ಕಾರಣವೇ ರಾಗಿಗೆ ಹಿಂದೆ ನರೆತ ತಲೆಯವನು ಅಥವಾ ನರೆದಲೆಗ ಎಂಬ ಹೆಸರು ಇದ್ದಿರಬಹುದು. ಬಹುಶಃ ಅಕ್ಕಿ ತಿನ್ನುತಿದ್ದವರ ಕುಚೋದ್ಯದ ಮಾತು ಇದ್ದರೂ ಇರಬಹುದು.

ಗೌತಮರ ಮಾತನ್ನು ಕೇಳಿ ವ್ರೀಹಿ (ನೆಲ್ಲು ಅಥವ ಬತ್ತ) ಸಿಟ್ಟಾಗಿ ದೋಷರಹಿತನಾದಂಥ ಮುನಿ ಪಕಪಾತವನಾಡಬಾರದಾಗಿತ್ತು ಎಂದು ಆಕ್ಷೇಪಿಸಿ 'ನೆಲ್ಲು ನಾನಿರೆ ಗೋಧಿ ಮೊದಲಾದ ಧಾನ್ಯಗಳಿರಲು ಇದರಲಿ ಬಲ್ಲಿದನು ನರೆದಲೆಗನೆಂಬುದು' ಸರಿಯಾದ ಮತವಲ್ಲವೆಂದನು. ಇಷ್ಟು ಮಾತನ್ನು ಗೌತಮರಿಗೆ ಹೇಳಿ ಅದಕ್ಕೆ ಅವರು ಏನು ಹೇಳುವರೆಂಬುದನ್ನು ಕೇಳದಲೆ ಬತ್ತ

ನರೆದಲೆಗನ ಮೇಲೆ ರೇಗುವುದೆ ಪಾಪ!—ಅಕ್ಕಿ ತಿನ್ನುವವರು ರಾಗಿ ತಿನ್ನುವವರ ಮೇಲೆ ನಿಷ್ಕಾರಣವಾಗಿ ರೇಗುವಂತೆ!!

'ಏನೆಲವೋ ನರೆದಲೆಗ ನೀನು ಸಮಾನನೆ ಯೆನಗಿಲ್ಲಿ? ಮತಿಹೀನ ನೀನು! ಕುಲಹೀನ ನೀನು. ನೀನು ಪ್ರತಿಷ್ಠನೇ? ನಿನ್ನನ್ನು ಸುಡಬೇಕು!' ಎಂದು ಏಕದಂ ಅಂದುಬಿಡುವುದೇ ಅಕ್ಕಿ? ಇದ್ದಕ್ಕಿದ್ದಂತೆ ಬಿದ್ದುಬಿಡುವುದೇ ಆ ಬಡಪಾಯಿ ರಾಗಿಯ ಮೇಲೆ ಅಕ್ಕಿ! ಇಷ್ಟಕ್ಕೇ ಬಿಡಲಿಲ್ಲ. 'ಲೋಕಕಧಿಕ ಭೋಜನ ವಿದೆಂದಾಕೆವಾಳರು ಬುಧರು ಜರೆದು ನಿರಾಕರಿಸಿಬಿಡಲಂತು ನೀ ಶೂದ್ರಾನ್ನವಾದೆಯಲಾ····ಸಾಕು ಬಿಡು, ನೀನಾವ ಮಾನ್ಯನು! ಕಡೆಗೆ ತೊಲಗೆಂದಾ'.

ಕುಲವ ನಾಲಗೆಯಾಡಿಸಿತು ಎಂಬಂತೆ ಅಕ್ಕಿಯನ್ನು ತಿಂಬುವರ ಸೊಕ್ಕಿನ ನಾಲಗೆ ರಾಗಿಯನು ತಿಂಬುವರನ್ನು ಶೂದ್ರರು ಎಂದು ಕರೆದುದಲ್ಲದೆ ರಾಗಿಯನ್ನು ಶೂದ್ರಾನ್ನವೆಂದು ಹೇಳಿಸಿಬಿಟ್ಟಿತು. ರಾಮ! ರಾಮ!!

ಅಕ್ಕಿ ರಾಗಿಯನ್ನು ಹಿಯ್ಯಾಳಿಸಿದ್ದು ಅಷ್ಟಿಷ್ಟಲ್ಲ. ಅದೂ ತುಂಬಿದ ಸಭೆಯಲ್ಲಿ; ಶ್ರೀರಾಮನ ಮುಂದೆ, ಇಷ್ಟು ಹೇಳಿದ್ದಲ್ಲದೆ ತನ್ನ ಪ್ರತಾಪವನ್ನೂ ತನ್ನ ಹಿರಿಮೆಯನ್ನೂ ಕೊಚ್ಚಿಕೊಂಡ ಅಕ್ಕಿ:

ಕ್ಷಿತಿಯಮರರುಪನಯನದಲಿ ಸು
ವ್ರತ ಸುಭೋಜನಗಳಲಿ ಮಂತ್ರಾ
ಕ್ಷತೆಗಳಲಿ ಶುಭಶೋಭನದಲಾರತಿಯ ಬೆಳಗುವಲಿ
ಕ್ರತುಗಳೆಡೆಯೊಳಗರಮನೆಯಲಿ
ಪ್ರತಿದಿನವು ರಂಜಿಸುತ ದೇವರಿ
ಗತಿಶಯದ ನೈವೇದ್ಯ ತಾನಹೆನೆಂದನಾ ವ್ರಿಹಿಗ

ಜನಪರಿಗೆ ಶಿಶುಗಳಿಗೆ ಬಾಂಧವ
ಜನರೆಡೆಗೆ ಬ್ರಹ್ಮರ ಸಮಾರಾ
ಧನೆಗೆ ವಿದ್ಯಾರಂಭ ಕಲಿಸುವ ಸಕಲ ಭೂಸುರರಾ
ಮನೆಗಳಲಿ ಹರಿದಿವಸದೌಪಾ
ಸನೆಗಳಲಿ ತಾಯೋಗ್ಯನಹುದೆಂ
ದೆನಿಸಿಕೊಂಡಿಹೆನು ನೀನಯೋಗ್ಯನು ಭ್ರಷ್ಟ ತೊಲಗೆಂದ

ಹೊಸಮನೆಯ ಪುಣ್ಯಾರ್ಚನೆಗೆ
ಹಸುಮಕ್ಕಳಿಗೆ ಸೇಸೆಗೆ
ವಸುಮತೀಶರ ಗರುಡಿಯಲಿ ಶಸ್ತ್ರಾಸ್ತ್ರದರ್ಚನೆಗೆ
ಎಸೆವ ವಿಪ್ರರ ಫಾಲದಲಿ ರಂ
ಜಿಸುವ ಗಂಧಾಕ್ಷತೆಯಹೆನು ಭಾ
ವಿಸಲು ಲೋಕದೊಳೆನಗಾರು ಸರಿಯಿಂತೆಂದನಾ ವ್ರಿಹಿಗ

ಧರಣಿಯಮರರು ಮಂತ್ರ ತಂತ್ರೋಚ್ಚ
ರಣೆಯಲಿ ಹಸ್ತಾಂಬುಜದಿ ಮಿಗೆ
ಹರಿಸಿಕೊಡಲಕ್ಷತೆಯ ಮಂಡೆಯೊಳಾಂತ ಮಹಿಮರಿಗೇ
ದುರಿತ ದುಃಖವಿನಾಶ ಮಂಗಳ
ಕರವಹುದು ನಾನೀವೆ ಸಂತತ
ಸಿರಿಯು ಸಂಪತ್ತಾಯುವನು ಕೇಳೆಂದನಾ ವ್ರಿಹಿಗ

ಇಷ್ಟು ಹೇಳಿದ್ದು ಸಾಲದೆ ವ್ರಿಹಿಗ ತನ್ನಂಥ ಪರಿಮಳದ ಚಂದನದ ತರುವಿಗೆ ಒಣಗಿದ ಕಾಷ್ಠ ಸರಿಯೆ, ಗೋವಿನ ಹಾಲಿಗೆ ಕುರಿಯ ಹಾಲಂತರವೆ ಎಂದು ಹಂಗಿಸುತ್ತಾನೆ. ತಾನು ಹನುಮ, ಸುರನದಿ, ಗರುಡನ ಮರಿ, ಹಂಸ, ಸರಸ ಮರಿ ಕೋಗಿಲೆಯಂತಾದರೆ, ನರೆದಲೆಗ ಮರದ ಮೇಲಣ ಕಪಿ, ಹರಿವ ಹಳ್ಳ, ಹದ್ದು, ಬಕ, ವಾಯಸದಂತೆ ಎಂದು ಹಿಯ್ಯಾಳಿಸುತ್ತಾನೆ.

ಅಕ್ಕಿ ಕುತಂತ್ರ, ಕುಯುಕ್ತಿ ಮತ್ತು ಕುಚೋದ್ಯಗಳಿಗೆ ಎತ್ತಿದ ಕೈ. ಅಂಥವನು ಇಂಥ ರೋಷದ ಮಾತಾಡಿದ್ದು, ಅದರಲ್ಲಿಯೂ ತುಂಬಿದ ಸಭೆಯಲ್ಲಿ, ನರೆದಲೆಗನಿಗೆ ನಿಜವಾಗಿಯೂ ಸಿಟ್ಟುಂಟುಮಾಡಿತು, ಅಲ್ಲವೆ ಹೇಳಿ! ಆತ ಸುಮ್ಮನಿರಲು ಸಾಧ್ಯವಾಗದೆ ಕನಲಿ ಕಂಗಳು ಕಿಡಿಮಸಗಿ ಖತಿಕೊಂಡು ನುಡಿದನು ಸಿಡಿಲ ಘರ್ಜನೆಯಂತೆ:

ನುಡಿಗೆ ಹೇಸದ ಭಂಡ ನಿನ್ನೊಳು
ಕೊಡುವರೇ ಮಾರುತ್ತರವ ಕಡು
ಜಡನಲಾ ನಿನ್ನೊಡನೆ ಮಾತೇಕೆಂದನರೆದಲೆಗಾ

ಮುಂದುವರಿದು

ಸತ್ಯ ಹೀನನು ಬಡವರನು ಕ
ಣ್ಣೆತ್ತಿ ನೋಡೆ ಧನಾಢ್ಯರನ ಬೆಂ
ಬತ್ತಿ ನಡೆವವುಪೇಕ್ಷೆ ನಿನ್ನದು ಹೇಳಲೇನದನು
ಹೆತ್ತ ಬಾಣಂತಿಯರಿಗೆ ರೋಗಿಗೆ
ಪತ್ಯ ಪಾನದಿ ಹೆಣದ ಬಾಯಿಗೆ
ತುತ್ತು ನೀನಹೆ ನಿನ್ನ ಜನ್ಮ ನಿರರ್ಥಕರವೆಂದ

ಸತ್ತ ದಿನದಾರಭ್ಯ ಮನುಜರು
ಮತ್ತೆ ಕರ್ಮವ ಹೊತ್ತು ಪಿಂಡವ
ನಿತ್ತು ವಾಯಸಕುಲವ ಕರಕರದೂ
ತುತ್ತ ನಿಡುವರು ಎಳ್ಳು ದರ್ಭೆಗೆ
ತೆತ್ತಿಗನು ನೀನಾದೆ ಕೀರ್ತಿಯ
ಹೊತ್ತುಕೊಂಡೆ ದುರಾತ್ಮ ನಿನ್ನೊಳು ಮಾತದೇಕೆಂದಾ



ಕಾಗಿನೆಲೆಯಲ್ಲಿರುವ ಶ್ರೀಕನಕದಾಸರ ಸಮಾಧಿ

ತನ್ನ ಜನ್ಮವೆಷ್ಟು ಸಾರ್ಥಕವಾದುದೆಂಬುದಕ್ಕೆ ಹೇಳುತ್ತಾನೆ ನರೆದಲೆಗ ಮುಂದೆ:

ಮಳೆದೆಗೆದು ಬೆಳೆಯಡಗಿ ಕ್ಷಾಮದ
ವಿಲಯಕಾಲದೊಳನ್ನವಿಲ್ಲದೆ
ಅಳಿವ ಪ್ರಾಣಿಗಳಾದರಿಸಿ ಸಲಹುವೆನು ಜಗವರಿಯೇ
ಎಲವೊ ನೀನೆಲ್ಲಿಹೆಯೋ ನಿನ್ನಯ
ಬಳಗವದು ತಾನೆಲ್ಲಿಹುದು ಈ
ಹಲವು ಹುಲು ಧಾನ್ಯ ಸರಿಯೆ ಎನಗೆ ಕೇಳೆಂದಾ

ರಾಗಿಯ ಈ ಮಾತು ಸತ್ಯ. ಕ್ಷಾಮಗಾಲ ಬಂದಾಗ ರಾಗಿಯಲ್ಲದೆ ಮತ್ಯಾವುದೂ ಬಡವರನ್ನು ಕಾಪಾಡುವುದಿಲ್ಲ. ಎಷ್ಟೇ ಕಡಮೆ ಮಳೆಯಾದರೂ ಅಷ್ಟಷ್ಟು ರಾಗಿ ಬೆಳೆ ಆಗಿಯೇ ಆಗುತ್ತೆ. ಬತ್ತ ಆದರೆ ಆಯಿತು, ಹೋದರೆ ಹೋಯಿತು. ಮುಂದುವರಿಯುತ್ತ ನರೆದಲೆಗ ಹೇಳುತ್ತಾನೆ:

ಬಲ್ಲಿದರು ನೆರೆಬಡವರಲಿ ನಿ
ನ್ನಲ್ಲಿಯುಂಟುಪೇಕ್ಷೆ ನಮ್ಮಲಿ
ಸಲ್ಲದೀ ಪರಪಕ್ಷಪಾತಕವಿಲ್ಲ ಭಾವಿಸಲೂ
ಬಲ್ಲಿದರು ಬಡವರುಗಳೆನ್ನದೆ
ಎಲ್ಲರನು ರಕ್ಷಿಸುವೆ ನಿರ್ದಯ
ನಲ್ಲ ತಾ ನಿನ್ನಂತೆ ಎಲ ಕುಟಿಲಾತ್ಮ ಹೋಗೆಂದಾ

ಮಾತಿನಮಲ್ಲನಾದ ವ್ರಿಹಿಗ ಇದಕ್ಕೆ ಮಾರುತ್ತರ ನುಡಿಯುತ್ತಾನೆ:

ನಾನಲ್ಲೈ ಲೋಕದಲಿ ನಿರ್ದಯನು ಬಳಿ
ಕೇನಲ್ಲೈ ಸದ್ಧರ್ಮದಲಿ ಮಧು
ಪಾನವಾದೆನಲಾ ದುರಾತ್ಮಕ ನಿನ್ನ ಸೇವಿಸಿದಾ
ದಾನವರು ಮಾನವ ಕಿರಾತರು
ಜ್ಞಾನವಳಿದು ವಿಕಾರದಲಿ ಮತಿ
ಹೀನರಾದರು ನಿನ್ನ ಗುಣವೇನೆಂದನಾ ವ್ರಿಹಿಗ

ಅಕ್ಕಿಯನ್ನು ಕೊಳೆಸಿದರೆ ಮಧುಪಾನವಾಗುತ್ತದೆ; ಕೊಳೆತ ರಾಗಿಯನ್ನು ತಿಂದರೆ ಹುಚ್ಚು ಹಿಡಿಯುತ್ತದೆ ನಿಜ. ಆದರೆ ಕೊಳೆಸಿ ತಿನ್ನು ಎಂದು ಯಾರು ಹೇಳುತ್ತಾರೆ? ಕೊಳೆತಾಗ ತನ್ನಲ್ಲಿ ಒಳ್ಳೆಯ ಗುಣವಿದ್ದೆ ಎಂದು ಹೇಳಿಕೊಳ್ಳುವುದು ಅಕ್ಕಿಗೆ ತಕ್ಕುದಲ್ಲ.

ಅದಕ್ಕಾಗಿಯೇ ರಾಗಿ

ಅಡಬಹುದತಿಶಯವ ನೀ ಕೊಂ
ಡಾಡಿಕೊಂಬರೆ ಸಾಕು ಸಜ್ಜನ
ರಾಡಿದೊಡೆ ಪತಿಕರಿಸಿ ಲಜ್ಜೆಗೆ ಸಿರವ ಬಾಗುವರು

ಎಂದು ಮಾರುತ್ತರ ಕೊಡುತ್ತಾನೆ.

ಇನ್ನುಮುಂದೆ ಅಕ್ಕಿಯೊಡನೆ ಮಾತನಾಡುವುದು ಸೂಕ್ತವಲ್ಲವೆಂದು ಭಾವಿಸಿ ರಾಗಿ 'ನೋಡಿರೈ ಸಭೆಯವರು ದುರ್ಮತಿಗೇಡಿಯಿವನಾಡುವುದಾ ವಿಸ್ನಾಡಿದರೆ ಹುರುಳಿಲ್ಲ ಶಿವಶಿವ' ಎಂದು ಹೇಳಿ ಕೊನೆಗೆ ಅಕ್ಕಿಯ ತಲೆಯ ಮೇಲೆ ಹೊಡೆದಂತೆ ಒಂದು ಮಾತು ಆಡುತ್ತಾನೆ:

ಸತ್ತವರ ಪ್ರತಿಬಿಂಬ ರೂಪನು
ವಿಸ್ತರಿಸಿ ಪಿತೃನಾಮಗಳ ನಿನ
ಗಿತ್ತು ಮೂವರ ಪೆಸರಿನಲಿ ಕರೆಕರೆದು ದರ್ಭೆಯಲಿ
ನೆತ್ತಿಯ ಬಡಿದು ಕಡೆಯಲಿ
ತುತ್ತನಿಡುವರು ಪಶುಗಳಿಗೆ ನೀ
ನೆತ್ತಿದೆಯಲಾ ತನುವ ಸುಡಬೇಕೆಂದ ನರೆದಲೆಗಾ

ಸುಮ್ಮನೆ ಕುಳಿತಿದ್ದ ಸಭೆಯನ್ನು ಕುರಿತು ಆತ ಸಭೆಗೆ ಅಪೀಲು ಮಾಡುತ್ತಾನೆ:

ಏನಿಪಿರಿ ಹಿರಿದು ಕಿರಿಯರನು
ತಿಳಿದು ನುಡಿಯದೇ ಮೌನದೀಕ್ಷಿತ
ರಾದಿರಕಟ ಕಂಡೆನು ಮುರಿದಾಡುವರ ಸಾಧ್ಯವೋ ಅಸಾಧ್ಯವೋ ನಿಮಗೆ
ಈ ನಪುಂಸಕನಲಿ ನಿರಂತರ
ವೇನು ಕಾರಣವಾಗಲಿದು ನಮ
ಗೇನು ಬುದ್ಧಿಯನರುಹುವಿರಿ ಪೇಳೆಂದ ನರೆದಲೆಗಾ

ನಪುಂಸಕನೆಂಬ ಮಾತು ಕೇಳಿ ಅಕ್ಕಿಗೆ ಬಹಳ ಸಿಟ್ಟಾಗಿರಬೇಕು. ಆದರೆ ಆ ಸಿಟ್ಟಿನಲಿ ಅವನಿಗೆ ಮಾತೇ ಹೊರಡಲಿಲ್ಲ.

ಅಕ್ಕಿ ಮತ್ತು ರಾಗಿಯ ಇತ್ತಂಡಕ್ಕೆ ಮತ್ಸರ ಮಸಗುವುದೆಂದು ಕಂಡ ನೃಪತಿಯಾದ ಶ್ರೀರಾಮ ನಸುನಗುತ ಈ ನ್ಯಾಯವನ್ನು ಪರಿಹರಿಸಲು ನಮಗೆ ಆಗುವುದಿಲ್ಲ. ಹರಿಹರವಿರಂಚಾದ್ಯರನ್ನು ಅಯೋಧ್ಯೆಗೆ ಕರೆಸುತ್ತೇವೆ. ಅವರು ಗುಣವನ್ನು ನೋಡಿ ಹೇಳುತ್ತಾರೆ ಎಂದು ತಿಳಿಸಿ ಇಬ್ಬರಿಗೂ ಆಗಬಹುದಾದ ಘರ್ಷಣೆಯನ್ನು ತಪ್ಪಿಸಿದ. ಹೇಗೇ ಆಗಲಿ ಅಕ್ಕಿ ಅಥವಾ ಗೋಧಿಯನ್ನು ತಿನ್ನುತ್ತಿದ್ದವನಲ್ಲವೇ ರಾಮ! ಬೀಸುವ ದೊಣ್ಣೆ ತಪ್ಪಿಸಿಕೊಂಡರೆ ಸಾವಿರ ವರ್ಷ ಆಯುಸ್ಸು ಎಂಬುದನ್ನು ಚೆನ್ನಾಗಿ ತಿಳಿದ ರಾಜನೀತಿಜ್ಞ ಆತ. ಒಂದು ಉಪಾಯವನ್ನು ಯೋಚಿಸಿ ರಾಗಿ ಮತ್ತು ಅಕ್ಕಿ ಇಬ್ಬರೂ ಆರು ತಿಂಗಳು ಸೆರೆಯೊಳಗಿರಬೇಕೆಂದು ರಾಜಾಜ್ಞೆ ಮಾಡಿ ಅವರಿಬ್ಬರನ್ನೂ ಗೌತಮರ ವಶಕ್ಕೊಪ್ಪಿಸಿ ಮುಂದಿನ ಪಯಣ ಸಾಗಬೇಕೆಂದು ವಿಭೀಷಣನಿಗೆ ಹೇಳಿದನು.

ರಾಜರ ಮಾತು ಅದರಲ್ಲಿಯೂ ಅಕ್ಕಿ ತಿನ್ನುವವರ ಮಾತು ಹೇಗೆ ನಂಬುವುದೆಂದು ನರೆದಲೆಗನಿಗೆ ಅನುಮಾನ ಬಂದಿರಬೇಕು. ಆ ಕಾರಣ ಹೇಳುತ್ತಾನೆ ನರೆದಲೆಗ:

ಸೆರೆಗೆ ನಮ್ಮನು ನೂಕಿ ದೇವರು
ಸಿರಿಯ ಮುದದಲಿ ಮರೆದು ಕಳೆದರೆ
ಸಲಹುವರಾರು ನಿಮ್ಮಯ ಕರುಣ ಹೊರತಾಗಿ
ಧರೆಯೊಳಿನ್ನಪಕೀರ್ತಿ ನಾರಿಯ
ಸೆರಗ ಪಿಡಿವುದೆ ಲೇಸೆನ್ನುತಲಿ
ಕರಮುಗಿದು ಪೇಳಿದನಾಗ ನರೆದಲೆಗಾ

ಹಾಗೆ ಮಾಡುವುದಿಲ್ಲ ಎಂದು ಕರುಣಾಸಾಗರನಾದ ಶ್ರೀರಾಮ ಮಾತು ಕೊಟ್ಟು ಅಯೋಧ್ಯೆಯ ಕಡೆಗೆ ತನ್ನ ಪಯಣವನ್ನು ಮುಂದುವರಿಸಿದ. ದಾರಿ ಸಾಗಿಸಿ ಅಯೋಧ್ಯಾಪುರಿಯನ್ನು ತನ್ನರಸಿ ಲಕ್ಷ್ಮಣ ಭರತ ಶತ್ರುಘ್ನಾದಿ ಬಾಂಧವರ ಸಮೇತ ತಲುಪಿದನು. ಹೀಗೆ ತಲಪಲು ಸುಮಾರು ಆರೇಳು ತಿಂಗಳು ಹಿಡಿಯಿತು.

ಅನಂತರ ಪಟ್ಟಾಭಿಷೇಕದ ಏರ್ಪಾಡು ನಡೆಯಿತು. ಆ ಮಹೋತ್ಸವಕ್ಕೆ ಸಕಲ ರಾಜರುಗಳು, ಅತ್ರಿ, ಭಾರದ್ವಾಜ, ವಿಶ್ವಾಮಿತ್ರ, ವಾಮದೇವ, ಅಗಸ್ತ್ಯ, ಕಣ್ವ, ಅಂಗೀರಸ, ಮಾರ್ಕಂಡೇಯ, ವಾಲ್ಮೀಕಿ ಮುಂತಾದ ಮುನಿಪೋತ್ತಮರೂ, ವಿದ್ವಾಂಸರೂ, ಕವೀಶ್ವರರೂ ನೆರೆದರು. ಶುಭ ಮುಹೂರ್ತದಲಿ ರಾಮನಿಗೆ ಪಟ್ಟವನು ಕಟ್ಟಿದರು. ಆಗ ಸಾರಸಂಗೀತ, ವಿನೋದ, ವರಕಾಂತಾ ಜನಕೆ ಒಪ್ಪುವ ಕೇಳಮೇಳ, ಚಾರುನೃತ್ಯ, ಗೀತೆಗಳು ನಡೆದುವು—ಈಗಲೂ ನಡೆಯುವಂತೆ. ಯಾಚಕರಿಗೆ, ಪಂಡಿತರಿಗೆ, ಭೂಸುರರಿಗೆ, ಗಾಯಕರಿಗೆ, ಮಲ್ಲರಿಗೆ, ಕವಿವರರಿಗೆ ಧೇನು ಕನಕಾಂಬರ ಸುವಸ್ತುಗಳನ್ನು ಕರೆದು ಕೊಟ್ಟರು.

ಪಟ್ಟಾಭಿರಾಮ ಪಟ್ಟಾಭಿಷೇಕದ ಆನಂದದಲ್ಲಿ ರಾಗಿಗೆ ಕೊಟ್ಟ ಮಾತನ್ನು ಮರೆಯಲಿಲ್ಲ. ಪಟ್ಟಾಭಿಷೇಕದ ಮಾರನೇ ದಿನವೇ ತನ್ನ ಓಲಗದಲ್ಲಿ ಕುಳಿತು ನಸುನಗುತ್ತಾ 'ನರೆದಲೆಗ ಮತ್ತು ವ್ರೀಹಿ ಸೆರೆಯೊಳಗಿದ್ದಾರೆ. ಇಲ್ಲಿಗೆ ಏಳು ತಿಂಗಳಾಯಿತು. ಅವರನ್ನು ಪಾಲಿಸಲುಬೇಕು. ಆಂಜನೇಯ ನೀ ಹೋಗಿ ಕರೆದು ತಾ' ಎಂದು ಅಪ್ಪಣೆಮಾಡಿದನು.

ಹೈ ಹಸಾದವೆನುತ ಹನುಮ ಹೊರಟು ಪಂಚನದಿಯ ಬಳಿಗೆ ಹೋಗಿ ಗೌತಮರನ್ನು ಕಂಡು ಅವರ ಕಾವಲಿನಲ್ಲಿ ಸೆರೆಮನೆಯೊಳಗಿದ್ದ ಪ್ರತಿವಾದಿಗಳ ನೊಡಗೊಂಡು ಮುನಿಗಳನ್ನೂ ತನ್ನ ಜೊತೆ ಕರೆದುಕೊಂಡು ಅಯೋಧ್ಯೆಗೆ ಹಿಂದಿರುಗಿ ರಾಜಮಂದಿರಕ್ಕೆ ಬಂದನು. ರಾಮನೊಡನೆ ವನವಾಸಕ್ಕೆ ಹೋಗದ ಕೌಸಲ್ಯೆ, ಸುಮಿತ್ರೆ, ಕೈಕೆ, ಭರತ, ಶತ್ರುಘ್ನಾದಿಗಳು ರಾಗಿಯನ್ನು ಕಂಡು ಅಚ್ಚರಿಪಟ್ಟಿರಬೇಕಲ್ಲವೆ!

ವ್ಯವಹಾರವನ್ನು ಬಗೆಹರಿಸುವ ಉದ್ದೇಶ ರಾಮ ನೆನೆದನು ಹೃದಯ ಸುಧೆಯಲಿ. ಆ ಕ್ಷಣವೇ ತ್ರೈಭುವನಕರ್ತರು ಇಂದ್ರ ಮೊದಲಾದವರು ಬಂದ ರಯೋಧ್ಯಾಪುರಪತಿಧಾಮ ಸೋಲಗಕೆ:

ವಸುಗಳಮರಪ್ರಸರ ಭುಜಂಗಾಮರ
ರನು ಕಿನ್ನರರ ಯಕ್ಷ ರಾಕ್ಷಸ
ಶಶಿರವಿಗಳಾದಿತ್ಯ ವಿದ್ಯಾಧರರು ಗುಹ್ಯಕರು
ವಸುಧೆಯಮರರು ಕ್ಷತ್ರಿಯರು ಜೋ
ಯಿಸರು ವೈಶ್ಯ ಚತುರ್ಥರು ಸನ್ನುತ
ಕುಶಲ ವಿದ್ಯಾಧಿಕರು ನೆರೆದುದು ನೃಪನ ಸಭೆಯೊಳಗೆ

ಇಂತೆಸೆವ ಸಭೆಗೆ ಸೆರೆಮನೆಯೊಳಿದ್ದ ನರೆದಲೆಗ ಮತ್ತು ವ್ರೀಹಿಯರನ್ನು ಕರೆದುತಂದರು. ಹೇಗೇ ಆಗಲಿ ನರೆದಲೆಗ ಬಡವ, ವಿನಯ ಕಲಿತವ. ಆತ ನಿಂತು ಕರಗಳ ಮುಗಿದು 'ಧರಣೀಕಾಂತ ರಘುವರ ನೀ ಸುಬುದ್ಧಿಯಾವೆಂತು ನಮಗರುಹುವಿರಿಯದಾ ಪೇಳೆಂದನು'.

ಹೀಗೆ ಹೇಳಿದಾಗ ರಾಮನೃಪಾಲ ಘನ ತಪೋಮಹಿಮರಿಗೆ ನುಡಿದನು 'ಮನವ ವಂಚಿಸಲಾಗದೀ ಧರ್ಮವನು ನೆರೆತಿಳಿದು ಅನುನಯದಿ ಪೇಳಿ' ಎಂದು.

ಮುನೀಂದ್ರರು ಅನಿಮಿಷರನೀಕ್ಷಿಸಿದರು. ಭಾರ್ಗವರಾಮ ಇಂದ್ರನ ಕಡೆ ನೋಡಿ 'ಇವರೊಳಗೆ ಗುಣಸಾರವನು ಪೇಳಿ' ಎಂದನು.

ಇಂದ್ರ ನಸುನಗುತ್ತಾ 'ಸಾರಹೃದಯನು ನರೆದಲೆಗ ನಿಸ್ಸಾರನೀ ವ್ರೀಹಿ' ಎಂದು ತನ್ನ ಅಭಿಮತವನ್ನು ಮುಚ್ಚುಮರೆ ಇಲ್ಲದೆ ಹೇಳಿಬಿಟ್ಟ.

ಮುಂಚೆಯೇ ಅಕ್ಕಿಗೆ ಈ ವಿಚಾರ ಗೊತ್ತಾಗಿದ್ದರೆ ಲಂಚ ಗಿಂಚ ಕೊಟ್ಟು ಇಂದ್ರನನ್ನು ಒಲಿಸಿಕೊಳ್ಳುತ್ತಿದ್ದನೋ ಏನೋ. ಬಹುಶಃ ಅಕ್ಕಿ ತಿಳಿದುಕೊಂಡಿದ್ದ ಅಂತ ಕಾಣುತ್ತೆ, ಅಮೃತಪಾನ ಮಾಡುತ್ತಾ ರಂಭೆ, ಊರ್ವಶಿಯರೊಡನೆ ಆನಂದದಲ್ಲಿ ಮೆರೆಯುವ ಇಂದ್ರ ತೆಳ್ಳಗೆ ಬೆಳ್ಳಗಾಗಿಹೋಗಿದ್ದ ತನ್ನನ್ನು ನೋಡಿ ಮೆಚ್ಚುವನು ಎಂದು. ಆದರೆ ಇಂದ್ರ ಒಳ್ಳೆ ಗೊಬ್ಬಳಿ ತುಂಡಿನಂತಿದ್ದ ರಾಗಿ ಯನ್ನು ಮೆಚ್ಚಿ ಅದನ್ನು ಮುಚ್ಚಿಕೊಳ್ಳದೆ ಹೇಳಿಬಿಟ್ಟ.

ರಾಗಿಯನ್ನು ಮೆಚ್ಚಿದ್ದು ಕೇಳಿ ಆಂಜನೇಯನಿಗೆ ಬಹು ಖುಷಿಯಾಯಿತು ಅಂತ ಕಾಣುತ್ತೆ—ತನ್ನ ವಸ್ತಾದಿ ಗೆದ್ದನಲ್ಲ ಎಂದು. ಅಕ್ಕಿ ತಿಂಬರ ಗುರುವಾದ ನಾರದರು ಯಾವುದಕ್ಕೂ ಅಸ್ತು ಅನ್ನಬೇಕಲ್ಲ. ಹಾಗೆ ಮಾಡದೆ ಅವರೇನಾದರೂ ತಂದುಹಾಕಿದರೆ ಏನು ಗತಿ ಎಂದು ಆಂಜನೇಯ ಸನ್ನೆಯಲಿ ನಾರದನ ಕಡೆ ನೋಡಿದನು. ನಾರದರಿಗೂ ಸಾಕಾಗಿಹೋಗಿತ್ತು, ಇಲ್ಲಿಯವರೆಗೂ ನಡೆದ ರಾಮಾಯಣವನ್ನು ನೋಡಿ ಅಂತ ಕಾಣುತ್ತೆ. ಮತ್ತೆಲ್ಲಿ ಹಗರಣ ಆರಂಭವಾಗಿ ಬಿಡುವುದೋ ಎಂದು ಹೆದರಿದ ಅವರು, ರಾಮ ನಾಲ್ಕು ದಿವಸವಾದರೂ ಸೀತೆ ಯೊಡನೆ ಸುಖವಾಗಿ ಸಂಸಾರ ಮಾಡಿಕೊಂಡಿರಲಿ ಎಂದು ಕೊನೆಗೆ ಒಳ್ಳೆಯ ಮನಸ್ಸು ಮಾಡಿದ ಅವರು, 'ಅಹುದು, ಸುರಪನ ಮಾತು ನಿಶ್ಚಯವಹುದು. ನರೆದಲೆಗನೇ ಸಮರ್ಥನು, ಬಹಳ ಬಲಯುತ. ಸೆರೆಗೆ ತಳ್ಳಿದರೆ ಕಾಂತಿಗೆಡಲಿಲ್ಲ.

ಸಹಜವಿದು ಪರಪಕ್ಷವಾದಡೆ ವ್ರೀಹಿ ಕರಗಿ ಕಂದಿದನು ಸೆರೆಯಲಿ ವಿಹಿತವಿದು' ಎಂದು ನುಡಿದರು.

ಕಪಿಲಮುನಿಯೂ ಹಾಗೆಯೇ ಹೇಳಿದನು. ಅಷ್ಟೇ ಅಲ್ಲದೆ 'ನೆಲ್ಲಿನಲಿ ಗುಣವೇನು? ಭಾಗ್ಯದಿ ಬಲ್ಲಿದರ ಪತಿಕರಿಸುವನು' ಎಂದು ಅಕ್ಕಿಯನು ಅಲ್ಲ ಗಳೆದನು. ಇಡೀ ಸಭೆ ಎಲ್ಲ ಒಂದೇ ಕೊರಳಿನಲ್ಲಿ ನರೆದಲೆಗನೇ ಹೆಚ್ಚು ಎಂದು ವೋಟುಮಾಡಿದರು.

ಆಗ ರಾಮನೃಪಾಲ 'ನೆರೆಮೆಚ್ಚಿ ಕರೆದು ಕೊಟ್ಟನು ತನ್ನ ನಾಮವ. ಧರೆಗೆ ರಾಘವನೆಂಬ ಪೆಸರಾಯಿತಿರದೆ.'

ಹೀಗೆ ನರೆದಲೆಗನಿಗೆ ರಾಘವನೆಂಬ ಹೆಸರು ಬಂದು ಇಡೀ ರಾಷ್ಟ್ರವೇ ಪ್ರಶಸ್ತಿಯನ್ನಿತ್ತು ಗೌರವಿಸಲು 'ವ್ರೀಹಿ ನಾಚಿದನು ಸಭೆಯಲಿ. ಶಿರವ ಬಾಗಿಸಿದ.'

ರಾಘವನೈತಂದು ರಾಮನ ಸಿರಿಚರಣಕಭಿನಮಿಸಿದನು. ದೇವಾಸುರರು ಕೊಂಡಾಡಿದರು. ಅರಸಿ ಮುತ್ತಿನ ಸೇಸೆಯನ್ನು, ಭೂಸುರರು ಮಂತ್ರಾಕ್ಷತೆಯನ್ನು ಇತ್ತು ಉಪಚರಿಸಿದರು. ಮುನಿವರರು ರಾಗಿಯನ್ನು ಪೊಗಳಿದರು.

ಒಬ್ಬರು ಸನ್ಮಾನಮಾಡಲಿಕ್ಕೆ ಆರಂಭಿಸಿದರೆ ಸಾಕು, ಎಲ್ಲರೂ ನಾನು ಮುಂದೆ, ತಾನು ಮುಂದೆ ಎಂದು ಬರುತ್ತಾರೆ, ಅದೇ ರೀತಿ ಮಾಡಲು. ಒಬ್ಬೊಬ್ಬರು ಒಂದೊಂದನ್ನು ಕೊಟ್ಟು ಗೌರವಿಸಿದರು:

ಸರಸಿಜಾಕ್ಷನುಬ್ಬಿ ಕೊಟ್ಟನು
ಕರ ಕಮಂಡಲ ಪಾತ್ರೆಯನು ಶಂ
ಕರ ತ್ರಿಶೂಲವನಿತ್ತು ಕಾಲದಂಡವನು
ನಾರದನು ಚಕ್ರವನು ಕೊಟ್ಟನು
ವಾಸವನುಥುತರದ ಕೂರಿಗೆಯನು
ಕೊಟ್ಟನು ಉರಗಪತಿ ವಾಸುಗಿಗಳಿತ್ತರು ನೇಣುಪಾಶಗಳ

ಧನಪನಿತ್ತನು ಯಂತ್ರರಕ್ಷೆಯ
ಬನದೊಳಿಹ ಮೂಲಿಕೆಯ ಮಂತ್ರಾದಿ
ವಿನಯದಿಂದಲಿ ಭೂಮಿಯನು ವರಕಾಲಭೈರವನು
ಇನಶಶಿಗಳಾದರಿಸಿಕೊಟ್ಟರು
ಘನತರದ ಜಲ್ಲರಿಯ ವರುಣನು
ಕನಕಮಣಿ ನಿರ್ಮಿತದ ಕರಗನನಿತ್ತು ಮನನಲಿದು

ಪಾರ್ವತಿ ಸುಮ್ಮನಿರುತ್ತಾಳೆಯೇ? ತನ್ನ ಮಹಿಳಾಮಂಡಲಿಯನ್ನೆಲ್ಲಾ ಕರೆಸಿಬಿಟ್ಟಳು ರಾಗಿಯನು ತಿಂಬವರ ಸೇವೆಗೆ.

ಕರೆಸಿದಳು ಶರ್ವಾಣಿ ತನ್ನಯ
ಪುರುಳು ಬಳಗವನೆಲ್ಲ ನೀವೀ
ಧರಣಿಯಲಿ ಸತಿರೂಪತಾಳ್ದಗಣಿತದ ಮನೆಗಳಲಿ
. . ಗೆಡಿಸದೆ ಸರ್ವಭೂತಾತ್ಮ
ರಿಗೆ ಪಕ್ವಾನ್ನವನು ನೀಡೆಂದುರು
ತರದ ಪ್ರೇಮದಲಿ ಕಳುಹಿದಳಗಜೆ ಕರುಣದಲಿ

ಎಷ್ಟೊಂದು ವರಗಳು ನಮ್ಮ ರಾಘವನಿಗೆ! ಅಷ್ಟೇ ಅಲ್ಲ, ಸಭಿಕರೆಲ್ಲ 'ಭೂತಳದ ಜನರೊಡನೆ ವಿಖ್ಯಾತನಾಗೆಂದು' ಹರಸಿದರು.

ವರಗಳನ್ನೂ ಆಶೀರ್ವಾದವನ್ನೂ ಪಡೆದ ಶ್ರೀರಾಮನ ಪರಮ ಭಕ್ತನಾದ ಆಂಜನೇಯನಿಗೂ ಒಂದಿಷ್ಟು ಹೊಟ್ಟೆಕಿಚ್ಚು ಬಂದಿರಬೇಕು—ತಾನಿಷ್ಟು ಭಕ್ತಿಯಿಂದ ಸೇವೆಸಲ್ಲಿಸಿದರೂ ವರವಾಗಲೀ ಆಶೀರ್ವಾದವಾಗಲೀ ಇಲ್ಲಿಯವರೆಗೂ ದೊರೆಯಲಿಲ್ಲವಲ್ಲ ಎಂದು. ಆತ 'ಇನಕುಲೇಂದ್ರನ ಪದಕೆ ವಂದಿಸಿ ಬಿನ್ನೈಸಿದನು ನೀವಾತನಿಗೆ ನಾಮಾಂಕಿತವನಿತ್ತಿರಿ. ನಾನು ನಿಮ್ಮನ್ನು ಅಗಲುವೆನೆ. ಮುಂದೆ ನನಗೇನುಗತಿ' ಎಂದು ಕೇಳಿದನು. ರಾಮ ನಸುನಗೆ ನಕ್ಕು ನುಡಿದನು 'ಇಷ್ಟವೆ ನಿನಗೆ ನಿನ್ನಭಿಧಾನವಾಗಲಿ' ಎಂದು.

ಆಗ ಹನುಮನಾಡಿದ ಮಾತು ಬಹಳ ಸೊಗಸಾಗಿದೆ. ಅವನ ಕೀರ್ತಿಗೆ ಕಳಸವಿಟ್ಟಂತಾಗಿದೆ.

ಸೇವಕನ ಹಿಂದುಳಿದು ದೇವರು
ನೀವು ಮುಂದಡಿ ಇಡಲಾ ನಿಮ್ಮ
ಡಿಪಾದ ಗುಣ.

ಇಂಥ ಮಾತುಗಳನ್ನು ಹನುಮನ ಬಾಯಿಂದ ಕೇಳಿದ ರಾಮ

ನಾವು ಜನನದಿ ಮುಂದು ಕಲಹದ
ಠಾವಿನಲಿ ನಾ ಮುಂದೆ ನಡೆಯಂ
ದೀ ವಿಚಾರವ ತಿಳುಹಿದನು ಅನಿಲಜನಿಗೆ

ಆಗ ವಿಭೀಷಣ ನಸುನಗುತ ಸನ್ನೆಯಲಿ ನಿಪ್ಪವಕನ ಕರೆದು ದಾನವೇಶ್ವರನ ಸತಿಗೆ ಈಸುಮಾನದಿಂ ಕೊಡಲು ಈರ್ವರು ನವಧಾನ್ಯದಲಿ ವಿಖ್ಯಾತರಾದರು.

ಇತ್ತ ಸಭೆಯಲಿ ಮಾನಭಂಗವನ್ನು ಹೊಂದಿದ ವ್ರೀಹಿ ಅತಿಚಿಂತೆಯಲಿ ಕಡುನೊಂದು ತಲೆಗುತ್ತಿದನು ನೀರೊಳಗೆ.

ರಾಮ ಕರುಣಾಮಯಿ ತಾನೆ. ಯಾರ ಮನಸ್ಸನ್ನೂ ನೋಯಿಸದಿರುವುದು ರಾಮನ ನಡತೆ. ಆತ ವ್ರೀಹಿಯನ್ನು ಕರೆದು 'ಏಕಪ್ಪ ವ್ಯಸನ ನಿನಗೆ? ಈ ಭೂಮಿಯ ಮೇಲೆ ಬರುವ ಕ್ಷಾಮಗಾಲದಲ್ಲಿ ನರೆದಲೆಗ ಕರುಣೆಯಿಂದ ನಡೆದು ಲೋಕವನ್ನು

ಕಾಪಾಡುತ್ತಾನೆಂಬ ಕಾರಣದಿಂದ ಆತನನ್ನು ಗೌರವಿಸಿದೆವು. ನೀನು ದೀನರಲ್ಲಿ, ದರಿದ್ರ ಜನರಲ್ಲಿ ನಿರ್ದಯನೆಂಬ ಕಾರಣದಿಂದ ಮಾತ್ರ ಹೇಳಿದೆವಲ್ಲದೆ ನಿನ್ನನ್ನು ಯಾವದಕ್ಕೂ ಉಪಯೋಗವಿಲ್ಲವೆಂದು ಅಲ್ಲಗಳೆಯಲಿಲ್ಲ. ನೀನು ಸುರಧೇನುವಿಗೆ ಸಮ. ಚಿಂತೆಯನ್ನು ಬಿಡು. ನೀವಿಬ್ಬರೂ ಧರೆಯ ಮೇಲೆ ಅತಿ ಹಿತದಿಂದ ಇನ್ನು ಮುಂದೆ ಇರುವುದು' ಎಂದು ಖಾಜಿನ್ಯಾಯದ ಮಾತನ್ನು ಹೇಳಿದನು.

ಹೇಗೇ ಆಗಲಿ ರಾಗಿಯದು ದೊಡ್ಡಗುಣ. ತಾನು ಗೆದ್ದೆನೆಂಬ ಜಂಭವಿಲ್ಲ ಆತನಿಗೆ. ವಿನಯಸಂಪನ್ನನಾದ ಆತ ಬತ್ತವನ್ನು ಕರೆದು ಆತನ ಕಣ್ಣೀರನ್ನು ತನ್ನ ಒರಟುಕೈಗಳಿಂದ ಒರಸಿ:

**ಕಲಿತನವ ಕೈಕೊಂಡು ಸತ್ಯದ**
**ಹೊಲಬು ತಪ್ಪದೆ ಚೋಳದೇಶವ**
**ನೊಲಿದು ನೀಸಲಹೆಂದು ನೇಮವನಿತ್ತು ಕಳುಹಿಸಿದಾ**

ಹೀಗೆ ಬತ್ತವನ್ನು ಮದ್ರಾಸ್ ಸೀಮೆಗೆ ಕಳುಹಿಸಿಕೊಟ್ಟು, ರಾಗಿ ಮೈಸೂರು ಸೀಮೆಯಲ್ಲಿ ನೆಲೆಯಾಗಿ ನಿಂತು ಆಗಿನಿಂದ ಈಗಿನವರೆಗೆ ಗ್ರಾಮಾಂತರ ಪ್ರದೇಶದ ಜನರನ್ನು ಸಂರಕ್ಷಿಸುತ್ತಾ ಬಂದಿದ್ದಾನೆ. ರಾಮನಾಮವೆಷ್ಟು ಪವಿತ್ರವೋ ಅವನು ಕೊಟ್ಟ ರಾಘವ, ರಾಘು, ರಾಗಿ ಎಂಬ ಹೆಸರೂ ಪವಿತ್ರವಾಗಿದೆ ಹಳ್ಳಿಯ ಬಡಜನರಿಗೆ. ಅದನ್ನು ತಿಂಬ ರಾಘವರು ಅಂದರೆ ರೈತರು ತ್ರಿಮೂರ್ತಿಗಳು ಕೊಟ್ಟ ಕಮಂಡಲ, ತ್ರಿಶೂಲ, ಚಕ್ರ, ಕೂರಿಗೆಧಾರಿಗಳಾಗಿ ನೇಣು ಪಾಶಗಳನ್ನು ಧರಿಸಿ ತಮ್ಮ ಇಹಲೋಕದ ಪವಿತ್ರ ಕರ್ಮವನ್ನು ಸಾಗಿಸುತ್ತಿದ್ದಾರೆ. ಪಾರ್ವತಿಯ ಅಪ್ಪಣೆಯಂತೆ ಈ ಲೋಕದಲ್ಲಿ ಜನ್ಮವೆತ್ತಿದ ರೈತರ ಹೆಂಡತಿಯರು ಸತಿಶಿರೋಮಣಿಗಳಾಗಿ ಲೆಕ್ಕವಿಲ್ಲದಷ್ಟು ಮನೆಗಳಲ್ಲಿ ಸರ್ವ ಭೂತಾತ್ಮರಿಗೆ ಪಕ್ವಾನ್ನವನ್ನು ನೀಡುತ್ತಾ ಬಂದಿದ್ದಾರೆ. ಇಂದಿಗೂ ರಾಗಿ ತಿನ್ನುವವರ ಮನೆಯ ಆತಿಥ್ಯ ಆದರ ಅಕ್ಕಿ ತಿನ್ನುವವರ ಮನೆಯ ಆತಿಥ್ಯಕ್ಕಿಂತ ಮಿಗಿಲು.

ರಾಗಿ ತಿಂಬರ ಔದಾರ್ಯದ ದುರುಪಯೋಗದಿಂದಲೋ ಏನೋ ಅಕ್ಕಿ ತಿಂಬುವರು ರಾಗಿಯನ್ನು ಮೂಲೆಗೊತ್ತುವ ಪ್ರಯತ್ನದಲ್ಲಿದ್ದಾರೆ, ದೊಡ್ಡ ದೊಡ್ಡ ನೀರಾವರಿ ಯೋಜನೆಗಳನ್ನು ಕೈಕೊಂಡು. ರಾಮನ ಕಾಲದ ಹಿಂದಿನ ಸೇಡನ್ನು ರಾಮರಾಜ್ಯ ಸ್ಥಾಪನೆಮಾಡಲು ಯತ್ನಿಸುತ್ತಿರುವ ಈ ಕಲಿಕಾಲದಲ್ಲಿ ತೀರಿಸಿಕೊಳ್ಳಲು ಅಕ್ಕಿ ಪ್ರಯತ್ನಿಸುತ್ತಿರುವಂತೆ ಕಾಣುತ್ತದೆ. ರಾಗಿ ತಿಂಬುವರು ಕಡಮೆಯಾಗಿ ಅಕ್ಕಿ ತಿಂಬುವರು ಹೆಚ್ಚಾಗುತ್ತಿದ್ದಾರೆ. ಅದನ್ನು ತಿನ್ನುವುದೇ ಗೌರವಕ್ಕೆ ಕುಂದೆಂಬ ಭಾವನೆ ಬರುತ್ತಿದೆ. ಆದರೆ ಗುಣಕ್ಕೆ ಮತ್ಸರವೇಕೆ? ಸರ್ವಜ್ಞ ಹೇಳಿದಂತೆ ಅಕ್ಕಿ ತಿಂದು ಹಕ್ಕಿಯಂತಾಗಿ ರೋಗದಲಿ ಸಿಕ್ಕಿ ರೊಕ್ಕವ ವೈದ್ಯನಿಗಿಕ್ಕುತ್ತಲಿರುವ ಎಷ್ಟೋ ಜನರು ಗುಪ್ತವಾಗಿಯಾದರೂ ರಾಗಿಯ ಸೇವನೆ ಮಾಡಲಾರಂಭಿಸಿದ್ದಾರೆ.

ರಾಜ ಮಹಾರಾಜರೂ ಅದರ ಗುಣವನ್ನು ಅರಿತುಕೊಂಡಿದ್ದರು. ಮುಮ್ಮಡಿ ಕೃಷ್ಣರಾಜ ಒಡೆಯರು ತನಿಯಾದ ಹಿಟ್ಟಿನಿಂದ ಮುದ್ದೆಮಾಡಿಸಿ ಊಟಮಾಡುತ್ತಿದ್ದರಂತೆ. ಅವರು ಮಾಡಿಸಿದ ರಾಗಿ ಮುದ್ದೆಯನ್ನು ಗೋಡೆಗೆ ಹೊಡೆದರೆ ಚೆಂಡಿನಂತೆ ಪುಟ ಚಿಮ್ಮಿಬರುತ್ತಿತ್ತಂತೆ. ಅದಕ್ಕೋಸ್ಕರವೇ ಹಳ್ಳಿಯ ಕಡೆ ರಾಗಿ ಮುದ್ದೆಯನ್ನು ಈಗಲೂ ಕೃಷ್ಣಘಟ್ಟ ಎಂದು ಕರೆಯುತ್ತಾರೆ.

ರಾಗಿಯನ್ನು ತಿನ್ನುವರು ರೋಗವಿಲ್ಲದೆ ಇರುತ್ತಾರೆ. ಜೋಳವೂ ಒಳ್ಳೆಯದೆ. ಆದರೆ ಅದನ್ನು ತಿನ್ನುವರು ತೋಳನಂತಾಗುತ್ತಾರೆ. ತೋಳನಂತಾಗದೆ, ಅಕ್ಕಿಯನ್ನು ತಿಂದು ಹಕ್ಕಿಯಂತಾಗದೆ ನೆಮ್ಮದಿಯಿಂದ ಜೀವನ ನಡೆಸಬೇಕೆನ್ನುವವರೆಲ್ಲ ರಾಗಿಯನ್ನು ಉಪಯೋಗಿಸಲಿ. ಕನಕದಾಸರ ನಾನೂರು ವರ್ಷದ ಉತ್ಸವ ರಾಗಿಯ ಮಹಿಮೆಯನ್ನು ಸಾರುವ ಉತ್ಸವವಾಗಲಿ.

**ರಾಗೀಕಿ ಜೈ**
**ರಾಮಧಾನ್ಯಕೀ ಜೈ**
**ರಾಮಧಾನ್ಯಚರಿತ ಬರೆದ ಕನಕದಾಸಕೀ ಜೆ**

207-65 ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಟಿ. ಕೆ. ಬಾಲಕೃಷ್ಣನ್‌ರವರು ಮುದ್ರಿಸಿರುವರು.

